

" ಚಿಕ್ಕೆಗಳ ಚಂದ್ರಾಮ "

(ಟೆಂಡುಲ್‌ಕರರ ' ಮಹಾತ್ಮಾ ' ಗ್ರಂಥದಿಂದ)

ಗಾಂಧೀ ಗ್ರಂಥಮಾಲೆ—೭

# ಜೀವನ ಶಿಕ್ಷಣ



ಮೋ. ಕ. ಗಾಂಧೀ



ಗಾಂಧೀ ಸ್ಮಾರಕ ನಿಧಿ
ಕರ್ನಾಟಕ ಶಾಖೆ
೧೯೫೯

**ಪ್ರಕಾಶಕರು :**
ಗಾಂಧೀ ಸ್ಮಾರಕ ನಿಧಿಯ ಕರ್ನಾಟಕ ಶಾಖೆಯ ಪರವಾಗಿ
ಪ್ರಧಾನ ಸಂಪಾದಕರು,
ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಲಿ,
೧೬೨, ರಮಾವಿಲಾಸ ರಸ್ತೆ,
ಮೈಸೂರು.



**ಕ್ಯಾಲಿಕೋ ಪ್ರತಿ ಬೆಲೆ : ರೂ. ೩.**

ಮುದ್ರಕರು :
ಜೀತನ ಮುದ್ರಾಲಯ,
ರಮಾವಿಲಾಸ ರಸ್ತೆ,
ಮೈಸೂರು.

Works of Gandhiji in Kannada–7

# JEEVANA SHIKSHANA

(Education for Life)



M. K. GANDHI



GANDHI SMARAK NIDHI
Karnatak Shakha
1959

# ಗಾಂಧೀಜಿಯ ಬರಹಗಳ ಕನ್ನಡ ಅನುವಾದ

ವಿಶ್ವದ ಎಲ್ಲ ಭಾಷೆಗಳಲ್ಲಿಯೂ ಗಾಂಧೀಜಿಯ ವಿಚಾರಗಳ ಪ್ರಚಾರ ಮಾಡುವುದು ಗಾಂಧೀ ಸ್ಮಾರಕ ನಿಧಿಯ ಮುಖ್ಯ ಉದ್ದೇಶ್ಯಗಳಲ್ಲಿ ಒಂದು. ಕರ್ನಾಟಕಕ್ಕೆ ಹಾಗೂ ಕನ್ನಡಿಗರಿಗೆ ಅತೀವ ಮಹತ್ವದ ಗಾಂಧೀ ವಿಚಾರಗಳ ಪರಿಚಯ ಮಾಡಿಕೊಡುವುದು ಈಗ ಕೈಕೊಂಡ ಈ ಯೋಜನೆಯ ಗುರಿಯಾಗಿದೆ.

ಕರ್ನಾಟಕದ ಹಲವಾರು ಸಾಹಿತಿಗಳು, ಲೇಖಕರು, ಗಾಂಧೀಜಿಯ ಬರಹಗಳಲ್ಲಿ ಕೆಲವನ್ನು ಆಗಲೇ ಅನುವಾದಿಸಿ ಪ್ರಕಟಿಸಿದ್ದಾರೆ. ಸಾಧ್ಯವಾದಷ್ಟು ಈಗಲೇ ಪ್ರಕಟವಾಗಿರುವ ಅನುವಾದಗಳನ್ನು ಆವಶ್ಯಕವಿದ್ದಲ್ಲಿ ಪರಿಷ್ಕರಿಸಿ ಅವುಗಳನ್ನು ಈ ಗಾಂಧೀ ಗ್ರಂಥಮಾಲೆಯಲ್ಲಿ ಪೋಣಿಸುವ ಪ್ರಯತ್ನ ನಡೆದಿದೆ. ಗಾಂಧೀಜಿಯ ಮುಖ್ಯ ಹಾಗೂ ವಿವಿಧ ವಿಚಾರಗಳ ಪರಿಚಯವನ್ನು ಮಾಡಿಕೊಡಲು ಸುಮಾರು ಇಪ್ಪತ್ತು ಸಂಪುಟಗಳು ಸಿದ್ಧವಾಗುತ್ತಲಿವೆ.

ಗಾಂಧೀಜಿಯ ಎಲ್ಲ ಬರಹಗಳನ್ನೂ ಸಂಪೂರ್ಣವಾಗಿ ಅನುವಾದಿಸುವುದು ನಮ್ಮ ಉದ್ದೇಶ್ಯವಲ್ಲ; ಭಾರತ ಸರ್ಕಾರ ಆ ಕಾರ್ಯ್ಯವನ್ನು ಕೈಕೊಂಡಿದೆ. ಆದರೆ ಈ ನಮ್ಮ ಯೋಜನೆಯ ಉದ್ದೇಶ್ಯ ಗಾಂಧೀಜಿಯ ಪ್ರಧಾನವಾದ ಅಭಿಪ್ರಾಯಗಳನ್ನು ಸಮಂಜಸವಾದ ರೀತಿಯಲ್ಲಿ ಕೂಡಿಸಿ, ಮುಖ್ಯವಾದ ಶೀರ್ಷಿಕೆಗಳ ಅಡಿಯಲ್ಲಿ ಅವನ್ನು ಅಳವಡಿಸಿ, ಕನ್ನಡಿಸಿ ಪ್ರಕಟಮಾಡುವುದಾಗಿದೆ. ಗಾಂಧೀಜೀ ಪುಸ್ತಕರೂಪವಾಗಿಯೇ ಬರೆದ ಗ್ರಂಥಗಳನ್ನು ಅವು ಇರುವಂತೆ ಅಥವಾ ಆವಶ್ಯಕವಾದರೆ ಸಂಗ್ರಹಿಸಿ ಅನುವಾದ ಮಾಡಲಾಗುತ್ತದೆ. ಮತ್ತೆ ಕೆಲವು ಗ್ರಂಥಗಳು ಗಾಂದೀಜೀ ಅವರ ಅಭಿಪ್ರಾಯಗಳನ್ನು "ಯಂಗ್ ಇಂಡಿಯಾ" ಮತ್ತು "ಹರಿಜನ" ಪತ್ರಿಕೆಗಳಿಂದ ಆಯ್ದ ಲೇಖನಗಳ ಸಂಕಲನಗಳಾಗಿವೆ. ಸಂಕಲನವು ಸ್ವಲ್ಪ ನಿಧಾನದ ಕೆಲಸ; ಕಷ್ಟವಾದ ಕೆಲಸವೂ ಹೌದು. ಎಷ್ಟು ಪ್ರಯತ್ನ ಮಾಡಿದರೂ ವಿಷಯಪ್ರತಿಪಾದನೆಯ ಪುನರಾವರ್ತನೆಯನ್ನು ತಪ್ಪಿಸುವುದು ಕಷ್ಟ. ನಮ್ಮ ಅನುವಾದಕರು ಕರ್ನಾಟಕದ ನುರಿತ ಸಾಹಿತಿಗಳು ಮತ್ತು ಗಾಂಧೀಮಾರ್ಗದಲ್ಲಿ ಶ್ರದ್ಧೆಯುಳ್ಳವರು. ಆದಷ್ಟು ಸಮರ್ಪಕವಾಗಿ ಭಾಷಾಂತರದ

ಕೆಲಸವನ್ನು ಮಾಡುತ್ತಿದ್ದಾರೆ. ಗಾಂಧೀಜಿಯವರ ಸರಳ ಮತ್ತು ರಸವತ್ತಾದ ಬರಹಗಳನ್ನು ಭಾಷಾಂತರಿಸುವುದು ಎಷ್ಟು ಕಷ್ಟವೆಂಬುದನ್ನು ಹೇಳಬೇಕಾಗಿಲ್ಲ. ಆದರೂ ಈ ಅನುವಾದಕರು ಗಾಂಧೀಜಿಯವರ ಮನೋಗತವನ್ನು ಅರಿತವರಾದುದರಿಂದ ಈ ಅನುವಾದಗಳು ಜನಪ್ರಿಯವಾಗಬಲ್ಲವೆಂದು ಆಶಿಸಲಾಗಿದೆ.

ಈ ಸಂಪಾದಕ ಸಮಿತಿಯಿಂದ ಪ್ರಕಟಿಸಲ್ಪಡುವ ಗ್ರಂಥಗಳು ಬಹಳ ಸುಲಭ ಬೆಲೆಗೆ ವಾಚಕರ ಕೈಸೇರಬೇಕೆಂಬ ಉದ್ದೇಶ್ಯದಿಂದ ಸಾಮಾನ್ಯ ಪ್ರತಿಯ ಬೆಲೆ ಅತಿ ಕಡಮೆ ಇಡಲಾಗಿದೆ. ಇದರೊಡನೆ ಉತ್ತಮ ಪ್ರತಿಯೂ ಸಹ ಮಾರಾಟಕ್ಕೆ ಇರುವುದರಿಂದ ಅದರ ಬೆಲೆಯನ್ನು ಕೂಡ ಬಹಳ ಹೆಚ್ಚು ಇಡಲಾಗಿಲ್ಲ.

ಈ ಗ್ರಂಥಮಾಲೆ ಕನ್ನಡನಾಡಿನ ಜನಕ್ಕೆ ಗಾಂಧೀ ಸಾಹಿತ್ಯವನ್ನು ಒದಗಿಸಿಕೊಡುವ ಕೆಲಸದಲ್ಲಿ ಕೃತಕೃತ್ಯತೆಯನ್ನು ಪಡೆಯಬಲ್ಲದೆಂದು ಭಾವಿಸಲಾಗಿದೆ. ಗಾಂಧೀಜಿಯವರ ಆಧ್ಯಾತ್ಮಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿಪ್ರಾಯಗಳು ಈ ಗ್ರಂಥಗಳ ಮೂಲಕ ಜನಸಾಮಾನ್ಯರಲ್ಲಿ ಹರಡಲಿ, ಸಕಲ ಜನರಿಗೆ ಸ್ಫೂರ್ತಿ ಕೊಟ್ಟು ನವ ಚೈತನ್ಯವನ್ನು ತುಂಬಲಿ ಎಂದು ಹಾರೈಸಿ ಈ ಗ್ರಂಥಗಳನ್ನು ಜನತಾಜನಾರ್ದನನಿಗೆ ಅರ್ಪಿಸುತಿರುವೆ.

ಗಾಂಧೀ ಸ್ಮಾರಕ ನಿಧಿ
ರಾಜಘಾಟ, ದಿಲ್ಲಿ
೭—೫—೧೯೫೮

ರಂಗನಾಥ ದಿವಾಕರ

# ನಿವೇದನ

## (ಗಾಂಧೀಜಿಯ ಮಾತುಗಳಲ್ಲಿ)

**ಅನುವಾದಕರು : "ಕುವೆಂಪು"**

ನಾನೊಬ್ಬ ಸತ್ಯಶೋಧಕ. ಅದಕ್ಕೊಂದು ಮಾರ್ಗವನ್ನು ಕಂಡುಕೊಂಡಿದ್ದೇನೆಂದು ನನ್ನ ವಿಶ್ವಾಸ. ಅದರ ಸಿದ್ಧಿಗಾಗಿ ನಾನು ನಿರಂತರ ಪ್ರಯತ್ನಶೀಲನಾಗಿದ್ದೇನೆಂದೂ ನನ್ನ ನಂಬಿಕೆ. ಅದು ಇನ್ನೂ ನನಗೆ ಸಿದ್ಧಿಸಿಲ್ಲ ಎಂಬುದನ್ನು ಒಪ್ಪಿಕೊಳ್ಳುತ್ತೇನೆ. ಸತ್ಯದ ಸಮ್ಯಕ್‌ದರ್ಶನವೇ ಆತ್ಮಸಾಕ್ಷಾತ್ಕಾರ; ಅದೇ ಜೀವನದ ಅಂತಿಮ ಗುರಿ. ಅಂದರೆ ಪರಿಪೂರ್ಣತೆಯ ಸಿದ್ಧಿ. ನನ್ನ ನ್ಯೂನತೆಗಳು ಎಷ್ಟೆಂಬುವನ್ನು ನಾನು ವ್ಯಸನದಿಂದ ಅರಿತಿದ್ದೇನೆ. ಆ ಅರಿವು ನನಗೆ ದುಃಖ ತರುವಷ್ಟೂ ಇದೆ. ಆ ಅರಿವೇ ನನ್ನ ಸರ್ವಶಕ್ತಿಯ ಮೂಲ; ಏಕೆಂದರೆ ತನ್ನ ದೌರ್ಬಲ್ಯಗಳ ಅರಿವಾಗುವುದೇ ಮಾನವನಿಗೆ ಒಂದು ಅಪೂರ್ವ ಬಲ.

**(ಯಂಗ್ ಇಂಡಿಯಾ, ೧೭-೧೧-೨೧)**

ಮನಸ್ಸಿನಲ್ಲಿ, ಮಾತಿನಲ್ಲಿ, ಕೆಲಸದಲ್ಲಿ ಅತ್ಯಂತ ಋಜುವಾಗಿ, ಅತ್ಯಂತ ಸತ್ಯವಾಗಿ, ಅತ್ಯಂತ ಅಹಿಂಸಕವಾಗಿ ನಡೆಯಬೇಕೆಂದು ಹೋರಾಡುತ್ತಿದ್ದರೂ, ನನಗೆ ಸರಿಯೆಂದು ತಿಳಿದ ಗುರಿಯನ್ನು ಮುಟ್ಟಲು ಹಂಬಲಿಸಿ ಹೆಣಗುತ್ತ ಸತತವೂ ಸೋಲುತ್ತಿರುವ ನಾನು ಒಬ್ಬ ಸಾಮಾನ್ಯ ಚೇತನ. ಆ ಯಾತ್ರೆಯೇನೊ ಕ್ಲೇಶಕರವೇ; ಆದರೆ ಆ ಯಾತನೆಯಲ್ಲಿಯೂ ನನಗೆ ಒಂದು ಆನಂದವಿದೆ. ಏರುವ ಒಂದೊಂದು ಹೆಜ್ಜೆಯೂ ನನ್ನನ್ನು ಬಲಿಷ್ಠನನ್ನಾಗಿ ಮಾಡಿ ಮುಂದಣ ಹೆಜ್ಜೆಗೆ ಸಾಮರ್ಥ್ಯವೀಯುತ್ತದೆ. **(ಯಂಗ್ ಇಂಡಿಯಾ ೯-೪-೨೬)**

ದಾರಿ ನನಗೆ ಗೊತ್ತು. ಅದು ನೇರ ಮತ್ತು ಇಕ್ಕಟ್ಟು—ಕತ್ತಿಯ ಅಲುಗಿನಂತೆ. ಅದರ ಮೇಲೆ ನಡೆಯುವುದೆಂದರೆ ನನಗೆ ಉಲ್ಲಾಸ. ಜಾರಿದಾಗಲೆಲ್ಲ ಕಣ್ಣೀರಿಡುತ್ತೇನೆ. 'ನ ಮೇ ಭಕ್ತಃ ಪ್ರಣಶ್ಯತಿ' ಎಂದು ದೇವರ ವಚನವಿದೆ. ಆ ವಚನದಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಅದ್ದರಿಂದ ನನ್ನ ದೌರ್ಬಲ್ಯದ ಪರಿಣಾಮವಾಗಿ ಸಾವಿರ ಬಾರಿ ಸೋತರೂ ನಾನೆಂದಿಗೂ ಶ್ರದ್ಧೆಗೆಡುವುದಿಲ್ಲ.

ಪ್ರತಿಯಾಗಿ, ಇಂದಲ್ಲ ನಾಳೆ, ಸ್ವತಃಸಿದ್ಧವಾಗಿ ಕೈಗೂಡಲೇ ಬೇಕಾಗಿರುವ ಇಂದ್ರಿಯಜಯ ಲಭಿಸಿದಂದು, ಬೆಳಕನ್ನು ಕಂಡೇ ಕಾಣುತ್ತೇನೆಂಬುದು ನನ್ನ ವಿಶ್ವಾಸ. (ಯಂಗ್ ಇಂಡಿಯಾ, ೧೬-೬-೧೯೨೬)

ಏಕೆಂದರೆ, ಸಾವಿನ ನಡುವೆ ಬಾಳು, ಸುಳ್ಳಿನ ನಡುವೆ ಸತ್ಯ, ತಮಸ್ಸಿನ ನಡುವೆ ಜ್ಯೋತಿ ಚಿರಸ್ಥಾಯಿಯಾಗಿರುವುದನ್ನು ನಾನು ಕಾಣುತ್ತಿದ್ದೇನೆ. ಭಗವಂತನೇ ಪ್ರಾಣಶಕ್ತಿ, ಅವನೇ ಸತ್ಯ ಮತ್ತು ಜ್ಯೋತಿ ಎಂಬುದು ನನ್ನ ವಿಶ್ವಾಸ. ಆತ ಪ್ರೇಮಸ್ವರೂಪಿ ; ಆತನೆ ಪರಮ ಶ್ರೇಯಸ್ಸು.

(ಯಂಗ್ ಇಂಡಿಯಾ, ೧೦-೧೦-೨೮)

ಬಾಲ್ಯದಿಂದಲೂ ನಾನೊಬ್ಬ ಸತ್ಯಾರಾಧಕ ಎಂಬುದು ನನ್ನ ವಿಶ್ವಾಸ. ಅದು ನನ್ನ ಅತ್ಯಂತ ಸಹಜ ಪ್ರವೃತ್ತಿ. ಉಪಾಸನಾಪೂರ್ವಕವಾದ ಶೋಧನೆಯಿಂದ ಭಗವಂತನೇ ಸತ್ಯ ಎಂಬ ರೂಢಿಯ ನಂಬಿಕೆಯ ಬದಲು ಸತ್ಯವೇ ಭಗವಂತ ಎಂಬ ಸೂತ್ರ ನನಗೆ ಸ್ಫುರಣವಾಯಿತು. ಭಗವಂತನನ್ನು ಪ್ರತ್ಯಕ್ಷವೋ ಎಂಬಂತೆ ಕಾಣಲು ಈ ಸೂತ್ರದಿಂದ ನನಗೆ ಸಾಧ್ಯವಾಗಿದೆ! ನನ್ನ ಚೇತನ ಸಮಸ್ತವನ್ನೂ ಆತ ವ್ಯಾಪಿಸಿದ್ದಾನೆ, ಎಂಬುದು ನನ್ನ ಅನುಭವ.

(ಹರಿಜನ, ೯-೮-೪೨)

ಭಗವಂತನ ಪ್ರತ್ಯಕ್ಷದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ. (ಆತ್ಮಕಥೆ)

ಅಹಿಂಸೆ ನನ್ನ ದೇವರು. ಸತ್ಯ ನನ್ನ ದೇವರು. ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: "ನನ್ನ ಮೂಲಕವೇ ಅದರ ಸಿದ್ಧಿ" ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: "ನನ್ನ ಮೂಲಕವೇ ಅದರ ಸಿದ್ಧಿ." (ಯಂಗ್ ಇಂಡಿಯಾ, ೪-೬-೨೫)

ಭಾರತದ ಸ್ವಾತಂತ್ರ್ಯ ಸಾಧನೆಯೇ ನನ್ನ ಜೀವಿತೋದ್ದೇಶ. ಅದಕ್ಕಾಗಿ ನಾನು ಸಾಯಲು ಕೂಡ ಸಿದ್ಧ. ಏಕೆಂದರೆ ಭಾರತದ ಸ್ವಾತಂತ್ರ್ಯ ಸತ್ಯದ ಒಂದು ಅಂಶ. ಬಂಧವಿಮುಕ್ತವಾದಾಗಲೇ ಭರತಖಂಡ ಸತ್ಯಸ್ವರೂಪನಾದ ಭಗವಂತನನ್ನು ಪೂಜಿಸಬಲ್ಲದು. ಭಾರತದ ಬಿಡುಗಡೆಗಾಗಿ ನಾನು ದುಡಿಯು

ತ್ತಿದ್ದೇನೆ; ಏಕೆಂದರೆ ಭಾರತದಲ್ಲಿ ಬದುಕಿ ಅದರ ಸಂಸ್ಕೃತಿಯನ್ನು ಪಡೆದಿರುವುದರಿಂದ ಅದರ ಸೇವೆಗೆ ನಾನು ಅತ್ಯಂತ ಅರ್ಹ ಎಂಬುದನ್ನು, ನನ್ನ ಸೇವೆಯ ಮೊದಲು ಹಕ್ಕು ಭಾರತದ್ದು ಎಂಬುದನ್ನು ನನ್ನ ಸ್ವದೇಶಿ ನನಗೆ ಕಲಿಸಿದೆ. ನನ್ನ ದೇಶಭಕ್ತಿ ಭಾರತಕ್ಕೆ ಮಾತ್ರ ಮೀಸಲಾದುದಲ್ಲ. ಬೇರೆ ಯಾವ ರಾಷ್ಟ್ರದ ಹಿತಕ್ಕೂ ಧಕ್ಕೆಯೊದಗಬಾರದು ಎಂಬುದಷ್ಟೇ ಅಲ್ಲ; ಸಕಲ ರಾಷ್ಟ್ರಗಳಿಗೂ, ಆ ಪದದ ಸಂಪೂರ್ಣಾರ್ಥದಲ್ಲಿ, ಸರ್ವಲಾಭ ಒದಗಬೇಕು ಎಂಬುದೇ ನನ್ನ ಮಾತಿನ ಆಶಯ. ನಾನು ಸಂಕಲ್ಪಿಸಿರುವ ಭಾರತದ ಸ್ವಾತಂತ್ರ್ಯ ಎಂದೆಂದೂ ಲೋಕಹಿತಕಂಟಕವಾಗಲಾರದು. (ಆತ್ಮಕಥೆ)

ವಿಶ್ವಾತ್ಮಕವೂ ವಿಶ್ವವ್ಯಾಪಿಯೂ ಆದ ಸತ್ಯವನ್ನು ಸಾಕ್ಷಾತ್ತಾಗಿ ಸಂದರ್ಶಿಸಬೇಕಾದರೆ ಸೃಷ್ಟಿಯಲ್ಲಿ ಕ್ಷುದ್ರತಮವಾದುದನ್ನೂ ತನ್ನಂತೆ ಪ್ರೀತಿಸುವುದು ಸಾಧ್ಯವಾಗಲೇಬೇಕು. ಆ ಹಂಬಲವನ್ನು ತುಂಬಿಕೊಂಡವನು ಜೀವನದ ಯಾವ ಕ್ಷೇತ್ರದಿಂದಲೂ ವಿಮುಖನಾಗಲು ಸಾಧ್ಯವಿಲ್ಲ. ನನ್ನ ಸತ್ಯಶ್ರದ್ಧೆ ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಎಳೆದು ತಂದಿರುವುದು ಈ ಕಾರಣದಿಂದಲೇ. ಅಧ್ಯಾತ್ಮಕ್ಕೂ ರಾಜಕೀಯಕ್ಕೂ ಏನೂ ಸಂಬಂಧವಿಲ್ಲ ಎನ್ನುವವರಿಗೆ ಅಧ್ಯಾತ್ಮವೆಂದರೇನು ಎಂಬುವೇ ತಿಳಿಯದೆಂದು ಸ್ವಲ್ಪವೂ ಅಳುಕದೆ, ಆದರೆ ವಿನೀತನಾಗಿ ನಾನು ಹೇಳಬಲ್ಲೆ. (ಆತ್ಮಕಥೆ)

ಆತ್ಮಶ್ರೀವಿದೂರವಾದ ರಾಜಕೀಯ ನನ್ನ ಪಾಲಿಗೆ ಸರ್ವಥಾ ತ್ಯಾಜ್ಯವಾದ ಕಲಂಕ. ರಾಜಕೀಯ ರಾಷ್ಟ್ರಗಳನ್ನು ಕುರಿತದ್ದು. ಯಾವುದು ರಾಷ್ಟ್ರಗಳ ಹಿತವನ್ನು ಕುರಿತದ್ದೊ ಅದು ಅಧ್ಯಾತ್ಮ ಪ್ರವೃತ್ತಿಯುಳ್ಳ ವ್ಯಕ್ತಿಯ, ಎಂದರೆ ಸತ್ಯದ ಮತ್ತು ಭಗವಂತನ ಅನ್ವೇಷಕನ ಸಾಧನೆಯ ಅಂಗಗಳಲ್ಲಿ ಒಂದಾಗಿರುವುದು ಅನಿವಾರ್ಯ. ನನಗಾದರೊ ಭಗವಂತನೆಂದರೂ ಒಂದೇ, ಸತ್ಯವೆಂದರೂ ಒಂದೇ. ಭಗವಂತ ಅಸತ್ಯದ ಮೂರ್ತಿಯೆಂದೂ, ಹಿಂಸೆಯ ಮೂರ್ತಿ ಎಂದೂ ಯಾರಾದರೂ ಸ್ಥಿರಪಡಿಸಿದರೆ ಅಂತಹ ಭಗವಂತನನ್ನು ಪೂಜಿಸಲು ನಾನು ನಿರಾಕರಿಸುತ್ತೇನೆ. ರಾಜಕೀಯದಲ್ಲಿ ಕೂಡ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ. ನನ್ನ ಬದುಕಿನ ಅತ್ಯಂತ ಆತ್ಮೀಯ ವಸ್ತುಗಳಿಂದ ರಾಜಕೀಯವನ್ನು ಬೇರ್ಪಡಿಸಲಾರೆ. ಕಾರಣ ಇಷ್ಟೆ: ನನ್ನ ರಾಜಕೀಯ ಕಲುಷಿತವಲ್ಲ. ಈ ಎಲ್ಲವೂ ಸತ್ಯ ಅಹಿಂಸೆಗಳೊಂದಿಗೆ ಜಟಿಲವಾಗಿ ಹೆಣೆದುಕೊಂಡಿವೆ. ಸತ್ಯವನ್ನು ಬಲಿಗೊಟ್ಟು

ಸ್ವಾತಂತ್ರ್ಯವನ್ನು ಪಡೆಯುವುದಕ್ಕಿಂತ ಭಾರತ ವಿನಾಶ ಹೊಂದುವುದೇ ಹೆಚ್ಚು ಲೇಸೆಂಬುದು ನನ್ನ ಮತ. ರಾಜಕೀಯ ಸಂಪರ್ಕವಿಲ್ಲದೆ ಸಮಾಜಸೇವೆಯಂಥ ಕೆಲಸವನ್ನು ಕೂಡ ನಡೆಸುವುದು ಅಸಾಧ್ಯವೆಂಬುದು ನನ್ನ ಅನುಭವಕ್ಕೆ ಬಂದುದ ರಿಂದ ರಾಜಕೀಯ ಕ್ಷೇತ್ರವನ್ನು ನಾನು ಪ್ರವೇಶಿಸುವುದು ಅನಿವಾರ್ಯ ವಾಯಿತು. ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ರಾಜಕೀಯ ಕಾರ್ಯವು ಪರಿಗಣಿತವಾಗಲೇಬೇಕು.

ಮಾನವನ ಮನಸ್ಸಾಗಲಿ ಸಮಾಜವಾಗಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಎಂಬ ಪ್ರತ್ಯೇಕ ವಿಭಾಗಗಳಾಗಿ ವಿಂಗಡಣೆಯಾಗಿಲ್ಲ ಎಂಬುದು ನನ್ನ ವಿಶ್ವಾಸ. ಅವುಗಳ ನಡುವೆ ಕ್ರಿಯೆ-ಪ್ರತಿಕ್ರಿಯೆಗಳು ಇದ್ದೇ ಇರುತ್ತವೆ.

(ಯಂಗ್ ಇಂಡಿಯಾ, ೨-೩-೨೨)

ಆತ್ಮಶ್ರೀನಿಯಮಕ್ಕೆ ತನ್ನದೇ ಆದ ಒಂದು ಕ್ಷೇತ್ರವಿದೆ ಎಂಬುದನ್ನು ನಾನು ನಂಬುವುದಿಲ್ಲ. ಬದಲು, ಅದು ಜೀವನದ ಸಾಮಾನ್ಯ ವ್ಯಾಪಾರಗಳ ಮೂಲಕವಾಗಿ ಮಾತ್ರವೇ ವ್ಯಕ್ತಗೊಳ್ಳುತ್ತದೆ. ಹೀಗೆ ಅದು ಆರ್ಥಿಕ, ಸಾಮಾ ಜಿಕ ಮತ್ತು ರಾಜಕೀಯ ವಲಯಗಳ ಮೇಲೂ ಪರಿಣಾಮವನ್ನುಂಟು ಮಾಡುತ್ತದೆ. (ಯಂಗ್ ಇಂಡಿಯಾ, ೩-೯-೨೪)

ಮಾನವಜೀವಿತದ ಪರಮೋದ್ದೇಶ ಭಗವತ್ಸಾಕ್ಷಾತ್ಕಾರ. ಅವನ ಕರ್ಮ ಕ್ರಿಯೆಗಳೇನೆ ಇರಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ ಎಲ್ಲವೂ ಈ ಈಶ್ವರಸಾಕ್ಷಾತ್ಕಾರದ ಪರಮೋದ್ದೇಶದಿಂದಲೇ ನಿಯಂತ್ರಿತವಾಗಿರಬೇಕು. ಮಾನವ ಸೇವೆಯೆ ಈ ಸಾಧನೆಯ ಪ್ರಪ್ರಥಮ ಅನಿವಾರ್ಯಾಂಗವಾಗುತ್ತದೆ. ಏಕೆಂದರೆ ಇಷ್ಟೆ : ಈಶ್ವರದರ್ಶನಕ್ಕಿರುವ ಏಕೈಕ ಮಾರ್ಗವೆಂದರೆ ಆತನ ಸೃಷ್ಟಿ ಯಲ್ಲಿಯೇ ಆತನನ್ನು ಕಂಡು ಅದರಲ್ಲಿಯೆ ಒಂದಾಗಿರುವುದು. ಸರ್ವರ ಸೇವೆ ಯೊಂದೇ ಇದಕ್ಕೆ ಸಾಧನ. ನಾನು ಈ ಸರ್ವದ ಒಂದು ಅಂಶ, ಇತರರನ್ನುಳಿದು ನಾನೊಬ್ಬನೇ ಆತನನ್ನು ಪಡೆಯಲಾರೆ. (ಹರಿಜನ, ೨೯-೮-೩೬)

ಈಶಸೇವೆ ಅರ್ಥಾತ್ ಮಾನವಸೇವೆಯೇ ನನ್ನ ಧರ್ಮ ; ನಿಷ್ಕಾಮಸೇವೆ ಯಿಂದ ಸೇವೆ ಸಲ್ಲಿಸುವುದೆಂದರೆ ಇತರರಿಗೆ ನಾವು ಉಪಕಾರ ಮಾಡಿದ್ದಕ್ಕಿಂತ ನಮ್ಮ ಸಾಲವನ್ನು ನಾವು ತೀರಿಸಿಕೊಂಡು ಕೃತಕೃತ್ಯರಾದಂತೆ. ನಮ್ಮ ಹೊಣೆ ಯನ್ನು ನಾವೇ ಇಳಿಸಿಕೊಂಡು ನಮ್ಮ ಕರ್ತವ್ಯವನ್ನು ಪರಿಪಾಲಿಸುವುದರ

ಮೂಲಕ ನಮಗೇ ನಾವು ಉಪಕಾರಮಾಡಿಕೊಳ್ಳುತ್ತೇವೆ. ನಮ್ಮಲ್ಲಿ ಒಳ್ಳೆಯವ ರೆನಿಸಿಕೊಂಡವರು ಮಾತ್ರವಲ್ಲ, ನಾವೆಲ್ಲರೂ ನಮ್ಮ ಸರ್ವಸಂಪತ್ತನ್ನೂ ಸರ್ವರಿಗಾಗಿ ವಿನಿಯೋಗಿಸಲು ಬದ್ಧರು. ಮೃಗಗಳಿಗಿಂತ ಮಾನವ ಭಿನ್ನ ಎಂದು ತೋರುವುದು ತ್ಯಾಗಧರ್ಮ ಒಂದರಿಂದಲೇ. (ಮಂಗಳ ಪ್ರಭಾತ)

ಮನುಷ್ಯ ಎಷ್ಟರಮಟ್ಟಿಗೆ ಪರಾರ್ಥಕ್ಕಾಗಿ ಶ್ರಮಿಸುತ್ತಾನೆಯೊ ಅಷ್ಟರ ಮಟ್ಟಿಗೆ ಅವನು ದೊಡ್ಡವನಾಗುತ್ತಾನೆ. (ಯಂಗ್ ಇಂಡಿಯಾ. ೪-೧೨-೨೪)

ನಾನು ಸೋದರಭಾವ ಅಥವಾ ತಾದಾತ್ಮ್ಯವನ್ನು ಸಾಧಿಸಲೆಳಸುವುದು ಕೇವಲ ಮಾನವಜೀವಿಗಳೊಂದಿಗೆ ಮಾತ್ರವಲ್ಲ, ಸಮಸ್ತ ಜೀವರಾಶಿಯೊಂದಿಗೆ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೆ ಕೂಡ. ನಿಮ್ಮನ್ನು ಚಕಿತಗೊಳಿಸಬಹುದಾದ ಈ ಬಯಕೆಗೆ—ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೊಂದಿಗೂ ತಾದಾತ್ಮ್ಯವನ್ನು ಸಾಧಿಸಬೇಕೆನ್ನುವ ಬಯಕೆಗೆ—ಕಾರಣವಿಷ್ಟೆ: ನಾವೆಲ್ಲರೂ ಒಬ್ಬನೇ ಭಗವಂತನಿಂದ ಬಂದವರು ಎಂದು ಹೇಳುತ್ತೇವಲ್ಲ; ಹಾಗಿರುವುದರಿಂದ ಯಾವುದೇ ರೂಪದಲ್ಲಿ ಗೋಚರಿಸಿದರೂ ಮೂಲತಃ ಎಲ್ಲ ಜೀವವೂ ಒಂದೇ. (ಹರಿಜನ, ೪-೮-೨೯)

ಭಗವಂತನ ಕೇವಲ ಅಖಂಡತೆಯನ್ನು ನಾನು ನಂಬುತ್ತೇನೆ; ಆದುದರಿಂದಲೇ ಜನತೆಯ ಅಖಂಡತೆಯಲ್ಲೂ ನನಗೆ ಶ್ರದ್ಧೆಯಿರುವುದು. ಒಬ್ಬನು ಮಾತ್ರ ಅಧ್ಯಾತ್ಮಲಾಭ ಪಡೆದು ಅವನ ಸುತ್ತಣ ಜನರು ನರಳುತ್ತಾರೆ ಎಂಬುದನ್ನು ನಾನು ನಂಬುವುದಿಲ್ಲ. ಅದ್ವೈತದಲ್ಲಿ ನನಗೆ ಶ್ರದ್ಧೆಯಿದೆ. ತತ್ವಶಃ ಮಾನವನ ಅಖಂಡತೆಯಲ್ಲಿ, ಹಾಗೆ ನೋಡಿದರೆ ಜೀವಸಮಸ್ತದ ಅಖಂಡತೆಯಲ್ಲಿ ನನಗೆ ವಿಶ್ವಾಸವುಂಟು. ಆದುದರಿಂದಲೆ ಒಂದು ವ್ಯಕ್ತಿಗೆ ಆಧ್ಯಾತ್ಮಲಾಭವಾದರೆ ಇಡೀ ವಿಶ್ವಕ್ಕೆ ಆ ಲಾಭ ಒದಗುತ್ತದೆ. ಒಂದು ವ್ಯಕ್ತಿ ಪತನ ಹೊಂದಿದರೆ ಅಷ್ಟರಮಟ್ಟಿಗೆ ಇಡೀ ವಿಶ್ವದ ಪತನವೇ ಆಗುತ್ತದೆ ಎಂದು ನಾನು ಭಾವಿಸಿರುವುದು. (ಯಂಗ್ ಇಂಡಿಯಾ. ೪-೧೨-೨೪)

ಈ ಪೃಥ್ವಿಯ ನಶ್ವರ ಸಾಮ್ರಾಜ್ಯದ ಬಯಕೆ ನನಗಿಲ್ಲ. ಮೋಕ್ಷರೂಪವಾದ ಅಮರ ಸಾಮ್ರಾಜ್ಯಕ್ಕಾಗಿ ನಾನು ಶ್ರಮಿಸುತ್ತಿದ್ದೇನೆ. ನನ್ನ ಧ್ಯೇಯಸಾಧನೆಗಾಗಿ ನಾನು ಗುಹಾನಿವಾಸಿಯಾಗಬೇಕಾಗಿಲ್ಲ.

(ಯಂಗ್ ಇಂಡಿಯಾ, ೩-೪-೨೪)

ದೇಶದ, ತನ್ಮೂಲಕ ಮಾನವತೆಯ ಸೇವೆಗಾಗಿ ಎಡೆಬಿಡದೆ ದುಡಿಯುವುದೇ ನನ್ನ ಮೋಕ್ಷಪಥ. ಜೀವಸಮುಸ್ತದೊಂದಿಗೆ ಅನನ್ಯತೆಯನ್ನು ಸಾಧಿಸುವುದೇ ನನ್ನ ಬಯಕೆ. (ಯಂಗ್ ಇಂಡಿಯಾ. ೩-೪-೨೪)

ಯಾವ ನೂತನ ಸಿದ್ಧಾಂತಗಳನ್ನೂ ನಾನು ಮಂಡಿಸಿಲ್ಲ. ಅದರ ಬದಲು ಪುರಾತನ ಸಿದ್ಧಾಂತಗಳ ಪುನರ್ನಿರೂಪಣೆಯ ಪ್ರಯತ್ನವೇ ನನ್ನದು. ಅದು ಎಷ್ಟರಮಟ್ಟಿಗೆ ಸರಿಯಾಗಿ ಸಾಗಿದೆಯೋ ಹೇಳಲಾರೆ. ಆದರೆ ಅದು ನನ್ನ ಪ್ರಾಮಾಣಿಕವಾದ ನಂಬಿಕೆಯನ್ನು ಪ್ರತಿನಿಧಿಸುತ್ತಿದೆ.

(ಯಂಗ್ ಇಂಡಿಯಾ. ೩-೧೨-೨೬)

ಗಾಂಧೀಪಂಥ ಎಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ನಾನು ಯಾವುದಾದರೂ ನೂತನ ತತ್ವದ ಅಥವಾ ಸಿದ್ಧಾಂತದ ಮೂಲಪುರುಷ ಎಂಬ ಭಾವನೆ ನನಗಿಲ್ಲ. ನಿತ್ಯಸತ್ಯಗಳನ್ನು ನಮ್ಮ ದೈನಂದಿನ ಜೀವನ ಹಾಗೂ ಸಮಸ್ಯೆಗಳಿಗೆ ಅಳವಡಿಸಲು ನನ್ನ ರೀತಿಯಲ್ಲಿ ನಾನು ಸಾಧಾರಣನಂತೆ ಪ್ರಯತ್ನಿಸಿದ್ದೇನೆ; ಅಷ್ಟೆ. ಸತ್ಯ ಅಹಿಂಸೆ— ಈ ಭಾವಗಳು ಪರ್ವತಗಳಷ್ಟೇ ಪುರಾತನವಾದುವು. ನನ್ನ ಶಕ್ತಿಗೆ ಸಾಧ್ಯವಾದಷ್ಟು ವಿಪುಲ ಪ್ರಮಾಣದಲ್ಲಿ ಅವೆರಡರಲ್ಲೂ ಪ್ರಯೋಗಗಳನ್ನು ನಡೆಸಿರುವುದಷ್ಟೆ ನನ್ನ ಕೆಲಸ. ಹಾಗೆ ಮಾಡುವಾಗ ಕೆಲವು ಸಲ ತಪ್ಪು ಮಾಡಿದ್ದೇನೆ; ಆ ತಪ್ಪುಗಳಿಂದ ಪಾಠ ಕಲಿತಿದ್ದೇನೆ. ಹೀಗೆ ಜೀವನ ಮತ್ತು ಅದರ ಸಮಸ್ಯೆಗಳು ಸತ್ಯ ಅಹಿಂಸೆಗಳ ಅನುಷ್ಠಾನಗಳಲ್ಲಿ ನಡೆಸಿರುವ ಅನೇಕ ಪ್ರಯೋಗಗಳಾಗಿವೆ. (ಹರಿಜನ. ೨೮-೩-೩೬)

ನಿಮ್ಮ ಮುಂದೆ ಉದ್ಭವಿಸಿರುವ ಸಮಸ್ಯೆಗಳನ್ನು ನನ್ನ ಹೇಳಿಕೆಗೆ ಅನುಸಾರವಾಗಿ ಎದುರಿಸಬೇಕೆಂಬುದೇ ನನ್ನ ಇಚ್ಛೆ. ಹೀಗೆ ಸತ್ಯ ಅಹಿಂಸೆಗಳಲ್ಲಿ ನನ್ನ ಶ್ರದ್ಧೆ ವರ್ಧಿಸುತ್ತಲೇ ಇದೆ. ನನ್ನ ಜೀವನದಲ್ಲಿ ಅವುಗಳನ್ನು ಅನುಸರಿಸುತ್ತ ಹೋದಂತೆ ನಾನು ಕೂಡ ಪ್ರತಿಕ್ಷಣವೂ ಬೆಳೆಯುತ್ತಲೇ ಇದ್ದೇನೆ. ಅವುಗಳಲ್ಲಿ ನನಗೆ ಹೊಸ ಅರ್ಥ ಸ್ಫುರಿಸುತ್ತಿದೆ. ದಿನದಿನವೂ ಅವುಗಳನ್ನು ಹೊಸ ಹೊಸ ಬೆಳಕಿನಲ್ಲಿ ಕಂಡು ಹೊಸ ಹೊಸ ಅರ್ಥಗಳನ್ನೂ ಅರಿಯುತ್ತಿದ್ದೇನೆ. ನನ್ನ ಜತೆಗೆ ನೀವೂ ಕೂಡ ಬೆಳೆಯಬೇಕು. ನನ್ನ ಅನಂತರ ಏನಾಗುತ್ತದೆ ಎಂಬುದನ್ನು ತಿಳಿಯುವ ಚಿಂತೆ ನನಗಿರಕೂಡದು. ಆದುದರಿಂದ ನನ್ನನ್ನು ಮರೆತುಬಿಡಿ.

ನೀವು ಭದ್ರವಾಗಿ ಅಂಟಿಕೊಳ್ಳಬೇಕಾದುದು ನನ್ನ ಹೆಸರಿಗಲ್ಲ, ತತ್ತ್ವಗಳಿಗೆ. ಅದರ ಅಳತೆಗೋಲಿನಿಂದ ನಿಮ್ಮ ಒಂದೊಂದು ಚಟುವಟಿಕೆಯನ್ನೂ ಉದ್ಭವಿಸ ಬಹುದಾದ ಎಲ್ಲ ಸಮಸ್ಯೆಗಳನ್ನೂ ನಿರ್ಭೀತರಾಗಿ ಎದುರಿಸಿ.

(ಹರಿಜನ, ೧-೫-೩೭)

ನಿಲ್ಲುವುದು ನನ್ನ ಕೃತಿಯೇ ಹೊರತು, ನನ್ನ ಮಾತೂ ಅಲ್ಲ, ಬರಹವೂ ಅಲ್ಲ. ಇತ್ತೀಚೆಗೆ ನಾನು ಈ ಮಾತನ್ನು ಅನೇಕ ಸಲ ಹೇಳಿದ್ದೇನೆ. ಸಕಲ ಶಾಸ್ತ್ರಗಳೂ ಒಂದು ವೇಳೆ ವಿನಾಶ ಹೊಂದುವುದಾದರೂ ಹಿಂದೂಧರ್ಮದ ಸಾರವನ್ನು ಸಾರಲು ಈಶೋಪನಿಷತ್ತಿನ ಒಂದು ಮಂತ್ರ ಸಾಕು ; ಅದರೆ ಅದನ್ನು ಅನುಷ್ಠಾನಕ್ಕೆ ತರಲು ಯಾರೊಬ್ಬರೂ ಇರದಿದ್ದರೆ ಆ ಒಂದು ಮಂತ್ರವೂ ನಿರರ್ಥಕ. ಅದರಂತೆಯೆ ನನ್ನ ಮಾತು, ಬರಹಗಳು ಸತ್ಯ ಅಹಿಂಸೆಯ ಮಹಾ ತತ್ತ್ವಗಳನ್ನು ರಕ್ತಗತ ಮಾಡಿಕೊಳ್ಳಲು ನಿಮಗೆ ನೆರವು ನೀಡಿರುವಷ್ಟರ ಮಟ್ಟಿಗೆ ಮಾತ್ರ ಉಪಯುಕ್ತ. ಅವುಗಳನ್ನು ನೀವು ಹಾಗೆ ರಕ್ತಗತ ಮಾಡಿ ಕೊಳ್ಳದಿದ್ದರೆ ನನ್ನ ಬರಹಗಳಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಒಬ್ಬ ಸತ್ಯಾಗ್ರಹಿಯಾಗಿ ನಾನು ಈ ಒಂದೊಂದು ಮಾತನ್ನೂ ಉದ್ದೇಶಪೂರ್ವಕ ವಾಗಿ ಹೇಳುತ್ತಿದ್ದೇನೆ. (ಹರಿಜನ, ೧-೫-೩೭)

ಗಾಂಧೀಪಂಥ ಎಂಬುದು ದೋಷದ ಪ್ರತೀಕವಾಗಿರುವುದಾದರೆ ಅದು ನಾಶಹೊಂದಲಿ. ಸತ್ಯ ಅಹಿಂಸೆಗಳು ಅಜರಾಮರ. ಆದರೆ ಗಾಂಧೀಪಂಥ ಎಂಬುದು ಪಂಥಾಭಿಮಾನಕ್ಕೆ ಮತ್ತೊಂದು ಹೆಸರಾದರೆ ಅದು ವಿನಾಶ ಯೋಗ್ಯವೇ ನಿಜ. ತಾನು ಗಾಂಧೀಯ ಅನುಯಾಯಿ ಎಂದು ಯಾರೊಬ್ಬನೂ ಹೇಳದಿರಲಿ. ನಾನು ನನ್ನನ್ನು ಅನುಸರಿಸಿದರೆ ಸಾಕು. ಅದರಲ್ಲೂ ನಾನು ಎಂತಹ ಅಸಮರ್ಪಕ ಅನುಯಾಯಿ ಎಂಬುದನ್ನು ನಾನು ಬಲ್ಲೆ ; ಯಾವ ತತ್ತ್ವ ಗಳಿಗಾಗಿ ನಾನು ನಿಂತಿದ್ದೇನೆಯೊ ಅವುಗಳಿಗೆ ತಕ್ಕಂತ ನಾನು ಬಾಳುತ್ತಿಲ್ಲ. ನೀವು ಅನುಯಾಯಿಗಳಲ್ಲ ; ಸಹವಿದ್ಯಾರ್ಥಿಗಳು, ಸಹಯಾತ್ರಿಕರು, ಸಹ ಅನ್ವೇಷಕರು, ಸಹಉದ್ಯೋಗಿಗಳು. (ಹರಿಜನ. ೨-೩-೪೦)

ಸತ್ಯ ಅಹಿಂಸೆಗಳನ್ನು ಕೇವಲ ವೈಯುಕ್ತಿಕ ಅನುಷ್ಠಾನದ ತತ್ತ್ವ ಗಳನ್ನಾಗಿ ಮಾಡಿಕೊಂಡರೆ ಸಾಲದು ; ಸಮಾಜ ಸಮುದಾಯಗಳು, ರಾಷ್ಟ್ರಗಳೂ ಕೂಡ ಅವುಗಳನ್ನು ಅನುಷ್ಠಾನಕ್ಕೆ ತರುವಂತಾಗಬೇಕು. ಹೇಗೇ

ಆಗಲಿ, ಅದಂತೂ ನನ್ನ ಕನಸು. ನನ್ನ ಬದುಕೆಲ್ಲ ಅದರ ಸಾಕ್ಷಾತ್ಕಾರದ ಪ್ರಯತ್ನಕ್ಕಾಗಿಯೆ, ನನ್ನ ಸಾವೂ ಅದರಲ್ಲಿಯೆ. ನನ್ನ ಶ್ರದ್ಧೆ ನನಗೆ ಅನುದಿನವೂ ನೂತನ ಸತ್ಯಗಳನ್ನು ಕಾಣಿಸುತ್ತಿದೆ. ಆತ್ಮದ ಸ್ವರೂಪವೆ ಅಹಿಂಸೆ; ಆದುದ ರಿಂದಲೆ ಸಕಲರೂ ಬದುಕಿನ ಸಕಲ ವ್ಯವಹಾರಗಳಲ್ಲೂ ಅದನ್ನು ಅನುಷ್ಠಾನಕ್ಕೆ ತರಬೇಕು. ಎಲ್ಲ ಕ್ಷೇತ್ರಗಳಲ್ಲೂ ಅದನ್ನು ಅನುಷ್ಠಾನ ಮಾಡಲಾಗದಿದ್ದರೆ ಅದಕ್ಕೆ ಔಪಯೋಗಿಕ ಮೌಲ್ಯವೇ ಇಲ್ಲ. (ಹರಿಜನ. ೧-೫-೩೭)

ನನ್ನ ದೇಶಕ್ಕಾಗಿ ನಾನು ತ್ಯಾಗಮಾಡಲಾರದುದು ಈ ಜಗತ್ತಿನಲ್ಲಿ ಏನೂ ಇಲ್ಲ—ಎರಡರ ಹೊರತು. ಅವು ಸತ್ಯ ಮತ್ತು ಅಹಿಂಸೆ. ಇಡೀ ಜಗತ್ತನ್ನೇ ನನ್ನ ಮುಂದಿಟ್ಟರೂ ಈ ಎರಡನ್ನು ಮಾತ್ರ ನಾನು ಬಿಡಲಾರೆ. ಏಕೆಂದರೆ ನನ್ನ ಪಾಲಿಗೆ ಸತ್ಯವೇ ದೇವರು. ಸತ್ಯಸಾಧನೆಗೆ ಅಹಿಂಸೆಯಲ್ಲದೆ ಅನ್ಯಪಥವಿಲ್ಲ. ಸತ್ಯ ಅಥವಾ ಭಗವಂತನನ್ನು ಬಲಿಗೊಟ್ಟು ಭಾರತಕ್ಕೆ ಸೇವೆ ಸಲ್ಲಿಸುವ ಆಲೋ ಚನೆಯನ್ನು ನಾನು ಮಾಡಲಾರೆ. ನಾನು ಬಲ್ಲೆ. ಸತ್ಯವನ್ನು ಕೈಬಿಡಬಲ್ಲವನು ತನ್ನ ದೇಶವನ್ನೂ ಕೈಬಿಡಬಲ್ಲ. ಆಪ್ತೇಷ್ಟರನ್ನೂ ಕೈಬಿಡಬಲ್ಲ. ನನ್ನಾತ್ಮ ಮತ್ತು ಕರ್ತ ಇಬ್ಬರೂ ಮೆಚ್ಚುವಂತೆ ನಾನು ಹೋದೆಡೆಯೆಲ್ಲ ನನ್ನ ಕರ್ಮಕ್ಷೇತ್ರದ ಗಾಯತ್ರಿಗಳಾದ ಈ ನನ್ನ ಧರ್ಮಸೂತ್ರಗಳನ್ನು ಸಾರುತ್ತ ಹೋಗುತ್ತೇನೆ.

ನನ್ನದು ಧರ್ಮಮಾರ್ಗ, ನಾವು ಧರ್ಮಿಗಳು, ಆದುದರಿಂದ ಉಳಿದವರಿಗೆ ನಾವು ಶ್ರೇಷ್ಠರು ಎಂಬ ಅಹಂಭಾವ ನಮ್ಮನ್ನು ಆಕ್ರಮಿಸುವ ಭಯ ಯಾವಾ ಗಲೂ ಇದ್ದೇ ಇದೆ. ಇತರರಿಂದ ನಾನು ನಿರೀಕ್ಷಿಸುವಂತೆ ಸ್ವವಿಮರ್ಶೆಯಲ್ಲಿ ಸತ್ಯದಂತೆಯೆ ನಿಷ್ಠುರವಾಗಿರಲು ನಾನು ಪ್ರಯತ್ನಿಸುತ್ತೇನೆ.

(ಹರಿಜನ, ೧-೫-೩೭)

"ಗಾಂಧೀತತ್ವ" ಎಂದು ಯಾವುದನ್ನು ಕರೆಯುತ್ತಾರೋ ಅದನ್ನು, ಅದರ ಪ್ರಸಾರವಿಧಾನಗಳನ್ನು ವಿಚಾರಿಸೋಣ. ಸತ್ಯ ಅಹಿಂಸೆಗಳನ್ನು ಕುರಿತು ಪುಸಕ್ತಗಳನ್ನು ಬರೆಯುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸತ್ಯ ಅಹಿಂಸೆಗಳ ಪ್ರಸಾರ ಸಾಧ್ಯ. ಅವುಗಳನ್ನು ಅನುಷ್ಠಾನಕ್ಕೆ ತಂದರೆ, ಅನುಷ್ಠಾನದ ಜೀವನ ಪುಸ್ತಕಕ್ಕಿಂತ ಶ್ರೇಷ್ಠ. ಪುಸ್ತಕ ಮತ್ತು ಪತ್ರಿಕೆಗಳ ಪ್ರಕಟನೆ ಅನಗತ್ಯ ಎಂದು ನಾನು ಹೇಳುತ್ತಿಲ್ಲ. ಅವು ಅನಿವಾರ್ಯವೇನಲ್ಲ ಎಂದಷ್ಟೆ ನನ್ನ ಅಭಿಪ್ರಾಯ. ನಾವು ಸತ್ಯ ಅಹಿಂಸೆಗಳ ನಿಜವಾದ ಆರಾಧಕರಾಗುವ ಪಕ್ಷದಲ್ಲಿ ಸಮಸ್ಯೆಗಳನ್ನು

ಪರಿಹರಿಸಲು ಅಗತ್ಯವಾಗಿ ಬೇಕಾದ ಬುದ್ಧಿಶಕ್ತಿಯನ್ನು ಭಗವಂತನೇ ನಮಗೆ ದಯಪಾಲಿಸುತ್ತಾನೆ. ಪ್ರತಿಪಕ್ಷದ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳುವ ಇಚ್ಛೆ ಅಂತಹ ಶ್ರದ್ಧೆಯ ಪೂರ್ಣಾಂಗವಾಗಿಯೇ ಉಳಿದಿದೆ. ಪ್ರತಿಪಕ್ಷಿಯ ಮನಸ್ಸನ್ನು ಹೊಕ್ಕು ಆತನ ದೃಷ್ಟಿ ಏನೆಂದು ಅರಿಯಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕು. ಹಿಂಸೆಯ ಛಾಯನ್ನೇ ಅಹಿಂಸೆ ನೇರವಾಗಿ ಹೊಗುತ್ತದೆ ಎಂಬುದರ ಅರ್ಥ ಇದೇ. ಅಂತಹ ಮನೋಧರ್ಮರೂಪ ಕವಚ ನಮಗಿದ್ದರೆ ಅಹಿಂಸೆಯ ತತ್ವಗಳನ್ನು ಪ್ರಚಾರ ಮಾಡುವ ವಿಶ್ವಾಸ ನಮಗೆ ಬರುತ್ತದೆ. ಅದಿಲ್ಲದೆ ಪುಸ್ತಕ ಪತ್ರಿಕೆಗಳ ಪ್ರಚಾರ ವ್ಯರ್ಥ. (ಹರಿಜನ, ೧೪-೫-೩೯)

ನನ್ನ ಸಲಹೆಗಳಲ್ಲೆಲ್ಲ ಒಂದು ರಕ್ಷಾಸೂತ್ರ ಇದ್ದೇ ಇರುತ್ತದೆ. ತಮ್ಮ ಬುದ್ಧಿಗೂ ಹೃದಯಕ್ಕೂ ಒಪ್ಪಿಗೆಯಾಗದಿದ್ದರೆ ಯಾರೂ ಅವುಗಳನ್ನು ಅನುಸರಿಸಬೇಕಾಗಿಲ್ಲ. (ಹರಿಜನ, ೧೫-೭-೩೬)

ನನ್ನನ್ನು ಮೆಚ್ಚುವವರಿಗೂ ನನ್ನ ಮಿತ್ರರಿಗೂ ಒಂದು ಧೈರ ಹೇಳಬಲ್ಲೆ. ಮಹಾತ್ಮಾ ಎಂಬುದನ್ನು ಮರೆತು ನನ್ನನ್ನು ಬರಿಯ 'ಗಾಂಧೀ' ಎಂದು ಭಾವಿಸುವುದಾದರೆ ಅವರು ನನ್ನ ಮೆಚ್ಚುಗೆಗೆ ಹೆಚ್ಚಾಗಿ ಪಾತ್ರರಾಗುತ್ತಾರೆ. ನಾನು ಯಾವ ತತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡಬೇಕೆಂದು ಕಾರ್ಯಕ್ರಮ ಹಾಕಿಕೊಂಡಿದ್ದೇನೆಯೋ ಅದನ್ನು ತಾವು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು; ಇಲ್ಲವೆ ಅದರಲ್ಲಿ ಅವರಿಗೆ ನಂಬುಗೆ ಇರದಿದ್ದ ಪಕ್ಷದಲ್ಲಿ ಅದನ್ನು ಸರ್ವರೀತಿಯಿಂದಲೂ ವಿರೋಧಿಸಬೇಕು—ಇದೇ ನನ್ನ ಮಿತ್ರರು ನನಗೆ ತೋರಿಸಬಹುದಾದ ಪರಮಗೌರವ. (ಯಂಗ್ ಇಂಡಿಯಾ. ೧೨-೬-೨೪)

ಯಾವ ಮಹಾ ಉದ್ಯಮದಲ್ಲಿಯೆ ಆಗಲಿ ನಿರ್ಣಯಕಾರಿಯಾಗುವುದು ಹೋರಾಡುವವರ ಸಂಖ್ಯೆಯಲ್ಲ, ಅವರ ಸತ್ವ. ಜಗತ್ತಿನ ಮಹಾ ವ್ಯಕ್ತಿಗಳೆಲ್ಲ ಏಕಾಂಗಿಯಾಗಿ ನಿಂತರು. ಝುರತುಷ್ಟ್ರ, ಬುದ್ಧ, ಯೇಸು, ಮಹಮ್ಮದ್ ಈ ಎಲ್ಲ ಮಹಾಪ್ರವಾದಿಗಳನ್ನೂ ಗಮನಿಸಿ. ನಾನಿನ್ನೂ ಹೆಸರಿಸಬಹುದಾದ ಇತರ ಹಲವರಂತೆಯೆ ಅವರೆಲ್ಲರೂ ಏಕಾಂಗಿಯಾಗಿಯೆ ಕೆಲಸ ಮಾಡಿದರು. ಆದರೆ ಅವರಿಗೆ ತಮ್ಮಲ್ಲಿಯೂ ಭಗವಂತನಲ್ಲಿಯೂ ಜೀವಂತ ಶ್ರದ್ಧೆಯಿತ್ತು; ಭಗವಂತ ತಮ್ಮ ಪಕ್ಕದಲ್ಲಿದ್ದಾನೆಂಬ ವಿಶ್ವಾಸ ಇದ್ದುದರಿಂದ ತಾವು ಏಕಾಕಿಗಳು ಎಂಬ ಭಾವನೆಯೇ ಅವರಿಗೆ ಬರಲಿಲ್ಲ. (ಯಂಗ್ ಇಂಡಿಯಾ. ೧೮-೧೦-೨೯)

ನನ್ನಲ್ಲಿರುವ ಏನೋ ಒಂದು ವಾಣಿ ನನ್ನ ಸಂಕಟವನ್ನು ಕೂಗಿ ಸಾರುವಂತೆ ನನ್ನನ್ನು ಪ್ರಚೋದಿಸುತ್ತಿದೆ. ಅದು ಯಾವುದೆಂಬುದನ್ನು ನಾನು ಖಚಿತವಾಗಿ ಬಲ್ಲೆ. ನನ್ನನ್ನೆಂದೂ ವಂಚಿಸದ ನನ್ನೊಳಗಿನ ಆ ವಾಣಿ ಹೇಳುತ್ತದೆ : " ನೀನು ಒಬ್ಬೊಂಟಿಗನೆ ಆಗಿ ನಿಲ್ಲಬೇಕಾಗಿ ಬಂದರೂ ಸರಿ, ಇಡೀ ಜಗತ್ತನ್ನೆ ಎದುರಿಸಿ ನಿಲ್ಲಬೇಕಾಗುತ್ತದೆ.

" ಜಗತ್ತು ನಿನ್ನನ್ನು ತನ್ನ ಕೆಂಗಣ್ಣಿನಿಂದ ದುರದುರನೆ ನೋಡಿದರೂ ಸರಿ. ನೀನು ಅದರ ದೃಷ್ಟಿಗೆ ದೃಷ್ಟಿಕೊಟ್ಟು ನಿಲ್ಲಬೇಕಾಗುತ್ತದೆ, ಭೀತಿ ಬೇಡ. ನಿನ್ನ ಹೃದಯದಲ್ಲಿ ನೆಲಸಿ ಹೀಗೆಂದು ಹೇಳುತ್ತಿರುವ ಆ ಅಣುರೂಪಿಯಲ್ಲಿ ನಿನಗೆ ಶ್ರದ್ಧೆಯಿರಲಿ. ಯಾವುದಕ್ಕಾಗಿ ನೀನು ಬದುಕಿದ್ದೀಯೋ, ಯಾವುದಕ್ಕಾಗಿ ನೀನು ಮಡಿಯಬೇಕೋ, ಅದಕ್ಕಾಗಿ ಮನೆ, ಮಠ, ಮಡದಿ, ಮಕ್ಕಳು ಸರ್ವಸ್ವವನ್ನೂ ಪರಿತ್ಯಜಿಸು ; ಆದರೆ ಅದರ ಸತ್ಯಕ್ಕೆ ಸಾಕ್ಷಿಯಾಗಿ ಬಾಳು,"

(ಬಾಂಬೆ ಕ್ರಾನಿಕಲ್. ೯-೮-೪೨)

# ಯಥಾದರ್ಶನ

ನಮಗೆ ಅವರು ಅತ್ಯಂತ ಬೇಕಾಗಿದ್ದಾಗ, ಕೊಲೆಗಡುಕನ ಗುಂಡು ಅವರನ್ನು ನಮ್ಮಿಂದ ಅಪಹರಿಸುವ ಒಂದು ತಿಂಗಳಿಗೂ ಸ್ವಲ್ಪ ಮುನ್ನ ಮಹಾತ್ಮಾ ಗಾಂಧೀ ಅವರನ್ನು ನಾನು ಕಂಡದ್ದು ನನಗೆ ನೆನಪಿದೆ. ಮೂಲಶಿಕ್ಷಣ ಕುರಿತು ಅವರು ನನ್ನೊಡನೆ ಮಾತನಾಡಿದರು. ಅವರು ಆಡಿದ ಕೆಲ ವಿಷಯಗಳು ಅವಿಸ್ಮರಣೀಯ, ಇನ್ನೂ ಮೊಳಗುತ್ತಿವೆ ನನ್ನ ಕಿವಿಯಲ್ಲಿ. ಅವರೆಂದರು : "ನನ್ನ ನಾಡಿಗೂ, ಜಗತ್ತಿಗೂ ಮೂಲಶಿಕ್ಷಣ ನನ್ನ ಶ್ರೇಷ್ಠ ಕೊಡುಗೆ. ನನ್ನ ಈ ಹೇಳಿಕೆಯನ್ನು ಇಂದು ಒಪ್ಪದಿರಬಹುದು. ಆದರೆ ಅದನ್ನು ಶಂಕಿಸದಿರುವ ದಿನ ಬಂದೀತು, ನನಗೆ ವಿಶ್ವಾಸವಿದೆ." ಮತ್ತೆ : "ಮೂಲಶಿಕ್ಷಣ ಬದುಕಿರುವವರೆಗೆ ಭಾರತದ ಜನಕೋಟಿಯ ಬುದ್ಧಿ ಹೃದಯಗಳಲ್ಲಿ ನಾ ಬದುಕಿರುತ್ತೇನೆ. ಮೂಲಶಿಕ್ಷಣ ಮರೆತು ಹೋದುದಾದರೆ ನಾನೂ ಮರೆತುಹೋಗುತ್ತೇನೆ."

ಈ ಮಾತುಗಳನ್ನು ಮತ್ತೆ ಮತ್ತೆ ಮೆಲಕು ಹಾಕಿದೇನೆ. ಈಚಿನ ಹಲವು ವರ್ಷಗಳಲ್ಲಿ ಮತ್ತಾವ ಕೆಲಸಕ್ಕಿಂತಲೂ ಹೆಚ್ಚಿನ ವೇಳೆಯನ್ನು ಮೂಲಶಿಕ್ಷಣವನ್ನು ಅರಿಯಲು, ಬೆಳೆಸಲು ಅರ್ಪಿಸಿದೇನೆ. ನಾನು ಮಾಡುವುದೆಲ್ಲಕ್ಕೂ ಎಲ್ಲಕ್ಕೂ ಮಿಗಿಲಾದ ಒಂದು ಒರೆಗಲ್ಲು ಉಂಟು; ನಾನು ಮಾಡುವುದು ಮೂಲಶಿಕ್ಷಣವನ್ನು ಹೇಗೆ ಮುಂಬರಿಸೀತು ?—ಎಂಬುದೇ ಅದು.

ಮೂಲಶಿಕ್ಷಣದ ಮೂಲ ಲಕ್ಷಣಗಳನ್ನು ಈಗ ಹೇಳುವೆ :

೧) ಮೂಲಶಿಕ್ಷಣ ಜೀವನಕ್ಕಾಗಿ ಶಿಕ್ಷಣ, ಜೀವನದ ಮೂಲಕ ಶಿಕ್ಷಣ, ಜೀವನ ಪರ್ಯಂತ ಶಿಕ್ಷಣ. ಆದುದರಿಂದ ಅದು ದೇಹ, ಬುದ್ಧಿ ಹಾಗೂ ಆತ್ಮಗಳ ಶಿಕ್ಷಣ. ಹುಡುಗ ಹುಡುಗಿಯರು ಪರಿಪೂರ್ಣ ಪುರುಷತ್ವ, ಸ್ತ್ರೀತ್ವ ಪಡೆವ ಸಮಗ್ರ ವಿಕಾಸ ಅದು. ಅದರಲ್ಲಿ ಕೈಕಾಲು ಹಾಗೂ ಬುದ್ಧಿ, ಹೃದಯ ಹಾಗೂ ಮೆದುಳು, ಕ್ರಿಯೆ–ಅಧ್ಯಯನ ಹಾಗೂ ಸುಸಂಬದ್ಧ ಬಾಳುವೆ ಮತ್ತು ವಿಕಾಸದ ಕಾರ್ಯಕ್ರಮದಲ್ಲಿ ತಮ್ಮ ಸಹಜ ಸಂಬಂಧವನ್ನು ಸಾಧಿಸುತ್ತವೆ.

೨) ಆದುದರಿಂದ ಮೂಲಶಿಕ್ಷಣ ಶೈಶವದ ಮೊದಲ ವರ್ಷಗಳಿಂದ ಆರಂಭವಾಗಿ ಪ್ರೌಢಾವಸ್ಥೆಯವರೆಗೆ ಹೋಗುತ್ತದೆ. ಆದರೆ 'ನಯೀ ತಾಲೀಂ'ನ

ತನ್ನ ವಿಶ್ವರೂಪದಲ್ಲಿ ಬಾಳ ಆದಿಯಿಂದ ಹಿಡಿದು ಅಂತ್ಯದವರೆಗೆ ಹಬ್ಬಿದೆ.

೩) ಆದರೆ ಏಳು ಅಥವಾ ಎಂಟು ವರ್ಷಗಳ ಪ್ರಾಥಮಿಕ ಶಿಕ್ಷಣವಾಗಿ ಮೂಲಶಿಕ್ಷಣ ಹುಡುಗ ಅಥವಾ ಹುಡುಗಿಗೆ ಉತ್ಪಾದಕ ಕೆಲಸದ ಮೂಲಕ ಶಿಕ್ಷಣ ; ಶಾಲೆಯ, ಸಮಾಜದ ನೈಸರ್ಗಿಕ ಹಾಗೂ ಸಾಮಾಜಿಕ ಸನ್ನಿವೇಶದೊಡನೆ ಸರ್ವಮುಖಗಳಲ್ಲಿಯೂ ಜೀವಂತ ಬಾಂಧವ್ಯ ಸ್ಥಾಪನೆಯ ಮೂಲಕ ಶಿಕ್ಷಣ. ಹೇಳಲು ಸುಲಭ ಇದು, ಆದರೆ ಅದರ ಪರಿಣಾಮಗಳು, ಸವಾಲುಗಳು ಅಗಾಧವಾಗಿ ಕ್ರಾಂತಿಕಾರಕ. ಈ ಪರಿಣಾಮಗಳನ್ನೂ, ಸವಾಲುಗಳನ್ನೂ ಯಾರೇ ಆಗಲಿ ಕಂಡುಕೊಂಡಿರುವುದು ಅತ್ಯಲ್ಪ.

೪) ಗಾಂಧೀ ಸಿದ್ಧಾಂತದಂತೆಯೇ ಮೂಲಶಿಕ್ಷಣದಲ್ಲೂ ಸಾಧನಗಳೇ ಸಾಧ್ಯಗಳು, ಸಾಧ್ಯಗಳು ಸಾಧನಗಳಲ್ಲೇ ಅಡಕವಾಗಿರುತ್ತವೆ. ಉತ್ಪಾದಕ ಕ್ರಿಯೆ, ನಿಸರ್ಗದೊಡನೆ ಸಮಾಜದೊಡನೆ ತಾದಾತ್ಮ್ಯ, ಅವೆಲ್ಲವುಗಳ ಮೂಲಕ ಶಿಕ್ಷಣ ; ಹಾಗಾಗಿ ಕೆಲಸವೇ ಕಲಿಕೆಯಾಗುತ್ತದೆ, ಕಲಿಕೆ ಕೆಲಸದ ಸತ್ತ್ವವನ್ನು ಅದರ ಅತ್ಯುತ್ತಮ ಅರ್ಥದಲ್ಲಿ ಸೃಜನಶಕ್ತಿಯಾಗಿ ಮೇಲೆ ಎತ್ತುತ್ತದೆ. ಪ್ರತಿಯೊಬ್ಬರೂ ಪರಸ್ಪರ ಸಮಾನರಾಗಿರುವ, ಒಬ್ಬರು ಇನ್ನೊಬ್ಬರನ್ನು ಪೂರಾ ಗೌರವಿಸುವ ಹಾಗಾಗಿ ಪರಸ್ಪರ ತಿಳಿವಳಿಕೆ, ಸೇವೆಗಳಿಂದಲೂ, ಅಂತಿಮವಾಗಿ ಮಾನವೀಯತೆಯಿಂದಲೂ ಬೆಸೆಯಲ್ಪಟ್ಟ ಸಹಕಾರಾತ್ಮಕ, ಶಾಂತ ಜೀವನವೇ ಮತ್ತೆ ಸಾಧನ.

೫) ಫಲಿತಾಂಶ : ತಮ್ಮ ಸನ್ನಿವೇಶದಲ್ಲೇ ದೃಢವಾಗಿ ನೆಲೆನಿಂತ, ಅದನ್ನು ಪರಿವರ್ತಿಸುವ, ಆದರೆ ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ ಇಡೀ ವಿಶ್ವದ ಪೌರತ್ವದವರೆಗೆ ಚೇತನವನ್ನು ಚಾಚುವ ಸ್ತ್ರೀ ಪುರುಷರು. ಹೀಗೆ ಹುಟ್ಟುವ ಹೊಸ ವ್ಯಕ್ತಿ ಉತ್ಪಾದಕ ಕೆಲಸಗಾರ, ಅದ್ಭುತ ವಾಕ್‌ಶಕ್ತಿಸಂಪನ್ನನಾದ ನಿಚ್ಚಳ ವಿಚಾರವಂತ, ತನ್ನ ಸಮಾಜವನ್ನು ಉನ್ನತತರ ಶ್ರೇಣಿಗೆ ಏರಿಸುವ ಎಲ್ಲ ಕೆಲಸದಲ್ಲಿ ಇತರರೊಡನೆ ಸಹಕಾರಿ, ತನ್ನ ಎಲ್ಲ ಕೆಲಸದಲ್ಲಿ, ಬಾಳುವೆಯಲ್ಲಿ ಸತ್ಯ–ಅಹಿಂಸೆಗಳಿಗೆ ಸಮರ್ಪಿಸಿಕೊಂಡ ಜೀವಿ.

೬) ಇದೇ ಮೂಲಶಿಕ್ಷಣದ ಮಹತ್‌ದರ್ಶನ. ಮತ್ತಾವ ದೃಷ್ಟಿಯೂ ಯಾವುದೇ ಸುಶಿಕ್ಷಣಕ್ಕೆ ಯುಕ್ತವಾಗದು. ಒಳ್ಳೆಯ ಆಹಾರ ದೈಹಿಕ ಜೀವನದ ಆಧಾರವಾಗಿರುವಂತೆಯೇ ಸುಶಿಕ್ಷಣವೇ ಇಡೀ ಜೀವನದ ಆಧಾರ. ನಾವು ದೊಡ್ಡವರಾಗಬೇಕಾದರೆ ಬೃಹತ್ತಾಗಿ ಯೋಚಿಸಬೇಕು, ಎಂದೂ ನಮ್ಮ ಅಲ್ಪತೆ

ಯಲ್ಲಿಯೇ ಅಡಗಿರಬಾರದು. ಮೂಲಶಿಕ್ಷಣವನ್ನು ಬೆಳೆಸುವುದರಲ್ಲಿ, ವ್ಯಾವಹಾರಿಕ ತೊಡಕುಗಳಿರಬಹುದು. ಅವುಗಳ ಅಂಜಿಕೆ ನಮ್ಮೆದುರು ಇಟ್ಟುಕೊಂಡ ಆದರ್ಶದಿಂದ ನಮ್ಮನ್ನು ಹಿಮ್ಮೆಟ್ಟಿಸಬಾರದು. ಆದರ್ಶದತ್ತ ಸಾಗುವಾಗ ಎಡವಿದರೂ ಅಡ್ಡಿಯಿಲ್ಲ, ಆದರ್ಶಕ್ಕೆ ನಿಷ್ಠರಾಗಿರಬೇಕು.

ಈ ಪುಸ್ತಕದ ಅಧ್ಯಾಯಗಳಲ್ಲಿ ಓದುಗರಿಗೆ ಮೂಲಶಿಕ್ಷಣದ ದೃಷ್ಟಿ—ವಿಧಾನಗಳೆರಡೂ ದೊರೆಯುತ್ತವೆ. ಓದುಗರಿಗೆ ಮಹಾತ್ಮಾ ಗಾಂಧೀ ಅವರ ಲೆಕ್ಕಣಿಕೆಯಿಂದಲೇ ಅವು ನೇರಾಗಿ ಸಿಗುತ್ತವೆ, ಅದಕ್ಕೂ ಉತ್ತಮ ಉಂಟೆ?

ನವದೆಹಲಿ,
ಆಗಸ್ಟ್ ೭, ೧೯೫೫.

**ಜಿ. ರಾಮಚಂದ್ರನ್**
ಕಾರ್ಯದರ್ಶಿ, ಗಾಂಧೀ ಸ್ಮಾರಕ ನಿಧಿ.

# ಪ್ರಕಾಶಕೀಯ

ಗಾಂಧೀಜೀ ಶಿಕ್ಷಣದ ವಿಷಯವಾಗಿ ನುಡಿದುದರ, ಬರೆದುದರ ಸಾರರೂಪವಾದ ಗ್ರಂಥವಾಗಿ ' ಜೀವನ ಶಿಕ್ಷಣ ' ಪ್ರಕಟವಾಗುತ್ತಿದೆ. ಇದರಲ್ಲಿ ಶಿಕ್ಷಣಕ್ಕೆ ಪ್ರತ್ಯಕ್ಷವಾಗಿ ಸಂಬಂಧಿಸಿದ ಮೊದಲ ಭಾಗ, ವಿದ್ಯಾರ್ಥಿಗಳಿಗೆ ಹೇಳಿದ ವಿಷಯಗಳು ' ಚಾರಿತ್ರ್ಯ ಶಿಕ್ಷಣ ' ಎಂಬ ಭಾಗ, ಆರೋಗ್ಯ ರಕ್ಷಣೆಯ ವಿಷಯವಾಗಿ ಬರೆದ ಸಣ್ಣ ಹೊತ್ತಗೆ ' ಆರೋಗ್ಯ ಶಿಕ್ಷಣ ' ಎಂಬ ಹೆಸರಿನ ಅಂತಿಮ ಭಾಗ ಅಡಕವಾಗಿವೆ. ಇವೆಲ್ಲವನ್ನೂ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರು ಕನ್ನಡಿಸಿ ಕೊಟ್ಟಿದಾರೆ. ಈ ಪುಸ್ತಕಕ್ಕೆ ಗಾಂಧೀಜೀಪ್ರಣೀತ 'ಹೊಸ ಶಿಕ್ಷಣ'ದ ಪ್ರಸಾರಕ್ಕಾಗಿ ಬಹುವಾಗಿ ದುಡಿದಿರುವವರೂ, ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿಗಳೂ ಆದ ಶ್ರೀ ಜಿ. ರಾಮಚಂದ್ರನ್ ಒಂದು ಪುಟ್ಟ ' ಯಥಾದರ್ಶನ ' ಬರೆದು ಕೊಟ್ಟಿದಾರೆ. ಮುಖಚಿತ್ರವನ್ನು ಶ್ರೀ ಡಿ. ಜಿ. ಟೆಂಡುಲ್‌ಕರರ ' ಮಹಾತ್ಮಾ' ಗ್ರಂಥದಿಂದ ಆರಿಸಲಾಗಿದೆ. ಪುಸ್ತಕವನ್ನು ಮೈಸೂರಿನ ಚೇತನ ಮುದ್ರಾಲಯದವರೂ, ಮೇಲುಹೊದಿಕೆಯನ್ನು ವೆಸ್ಲಿ ಪ್ರೆಸ್ಸಿನವರೂ ಅಂದವಾಗಿ ಮುದ್ರಿಸಿಕೊಟ್ಟಿದಾರೆ.

ಇವರೆಲ್ಲರಿಗೂ, ಗ್ರಂಥದ ವಿಷಯವನ್ನು ಭಾಷಾಂತರಿಸಲು ಅನುಮತಿ ನೀಡಿದ ನವಜೀವನ ಟ್ರಸ್ಟಿನವರಿಗೂ ಗಾಂಧೀ ಗ್ರಂಥಮಾಲೆಯ' ಸಂಪಾದಕ ಮಂಡಲಿ ಚಿರಋಣಿ.

ನವೆಂಬರ್ ೧೯೫೯
ಮೈಸೂರು.

ಪ್ರಧಾನ ಸಂಪಾದಕರು
**ಗಾಂಧೀ ಗ್ರಂಥಮಾಲೆ**

# ಪರಿವಿಡಿ

# ಅಧ್ಯಾಯ ೧

# ಹೊಸ ಶಿಕ್ಷಣ-ನಯೀ ತಾಲೀಂ

## ೧

## ಹೊಸ ಶಿಕ್ಷಣದ ಅಗತ್ಯ

ಸಂಪಾದಕ : ಶಿಕ್ಷಣವೆಂದರೆ ಸಾಧಾರಣವಾಗಿ ಅಕ್ಷರಜ್ಞಾನ ಎನ್ನುತ್ತಾರೆ. ಮಕ್ಕಳಿಗೆ ಓದು ಬರಹ ಅಂಕಗಣಿತಗಳನ್ನು ಕಲಿಸುವುದೇ ಪ್ರಾಥಮಿಕ ಶಿಕ್ಷಣ. ಒಬ್ಬ ರೈತ ಪ್ರಾಮಾಣಿಕತೆಯಿಂದ ತನ್ನ ಹಿಟ್ಟನ್ನು ಗಳಿಸುತ್ತಾನೆ. ಅವನಿಗೆ ಸಾಮಾನ್ಯ ಲೋಕಜ್ಞಾನವಿದೆ. ತನ್ನ ತಂದೆ ತಾಯಿಯ ಸಂಗಡ, ಹೆಂಡತಿ ಮಕ್ಕಳ ಸಂಗಡ, ಗ್ರಾಮವಾಸಿಗಳ ಸಂಗಡ ಹೇಗೆ ನಡೆದುಕೊಳ್ಳಬೇಕು ಎಂಬುದು ಅವನಿಗೆ ಚೆನ್ನಾಗಿ ಗೊತ್ತು. ಸದಾಚಾರ ನೀತಿಗಳನ್ನು ಅವನು ಬಲ್ಲ; ಅದರಂತೆ ನಡೆದೂ ನಡೆಯುತ್ತಾನೆ. ಆದರೆ ಅವನಿಗೆ ತನ್ನ ಹೆಸರು ಬರೆಯಲು ಬಾರದು. ಇಂಥವನಿಗೆ ಅಕ್ಷರಜ್ಞಾನ ನೀಡಿ ಏನು ಮಾಡಬೇಕೆನ್ನುತ್ತೀರಿ ? ಅವನ ಸುಖಕ್ಕೆ ಒಂದು ಗುಂಜಿಯಷ್ಟಾದರೂ ಹೆಚ್ಚು ಸೇರಿಸಬಲ್ಲಿರಾ ? ಅವನ ಗುಡಿಸಲು—ಪರಿಸ್ಥಿತಿಗಳ ಬಗ್ಗೆ ಅವನಿಗೆ ಅತೃಪ್ತಿಯುಂಟುಮಾಡಬೇಕೆ ? ಹಾಗೆ ಮಾಡಲು ಈ ಶಿಕ್ಷಣವೇಕೆ ಬೇಕು ? ಪಶ್ಚಿಮದ ವಿಚಾರ ಪ್ರವಾಹದಲ್ಲಿ ಕೊಚ್ಚಿಕೊಂಡು ಬಂದು ಹಿಂದು ಮುಂದು ಆಲೋಚಿಸದೆ, ಜನರಿಗೆ ಈ ಅಕ್ಷರ ಶಿಕ್ಷಣ ಕೊಡಬೇಕು ಎಂದು ನಾವು ತೀರ್ಮಾನಮಾಡಿದೆವು.

ಪ್ರೌಢ ಶಿಕ್ಷಣವನ್ನು ನೋಡಿ. ನಾನು ಭೂಗೋಳ, ಖಗೋಳ, ರೇಖಾ ಗಣಿತ, ಬೀಜಗಣಿತ, ಇತ್ಯಾದಿಗಳನ್ನು ಕಲಿತೆ. ಏನು ಪ್ರಯೋಜನ ? ನನಗಾಗಲಿ ನನ್ನ ನೆರೆಯವರಿಗಾಗಲಿ ಇದರಿಂದ ಏನು ಲಾಭ ? ಇವನ್ನು ನಾನು ಕಲಿತೆನೇಕೆ ? ಪ್ರೊ. ಹಕ್ಸ್ಲೇ ಶಿಕ್ಷಣವನ್ನು ಹೀಗೆ ವಿವರಿಸಿದಾನೆ :

**“ ತನ್ನ ದೇಹ ತನಗೆ ದಾಸನಾಗಿ, ಹೇಳಿದ ಕೆಲಸವನ್ನು ಸರಾಗವಾಗಿ ಸಂತೋಷವಾಗಿ ಶಕ್ತಿಯಿದ್ದಷ್ಟು ಮಾಡುವಂತೆ ಯಾರಿಗೆ ತಾರುಣ್ಯದಲ್ಲಿ ಶಿಕ್ಷಣ ದೊರೆತಿಹೆಯೋ; ಯಾರ ಬುದ್ಧಿ ಶುದ್ಧ, ಶಾಂತ, ನ್ಯಾಯದರ್ಶಿ ಆಗಿದೆಯೋ ; ಯಾರ ಮನಸ್ಸು ಪ್ರಕೃತಿ ನಿಯಮಗಳ ಜ್ಞಾನದಿಂದ ಪೂರ್ಣವಾಗಿದೆಯೋ ; ಯಾರ ಇಂದ್ರಿಯಗಳು**

ನಿಗ್ರಹಿತವೋ ; ಯಾರ ಅಂತರಾತ್ಮ ಪರಿಶುದ್ಧವೋ ; ಯಾರಿಗೆ ನೀಚಕಾರ್ಯ ವೆಂದರೆ ಹೇಸಿಗೆಯೋ ; ಯಾರು ತನ್ನಂತೆಯೇ ಪರರನ್ನು ಕಾಣುತ್ತಾನೋ, ಅವನು ನಿಜವಾಗಿ ಶಿಕ್ಷಿತ. ಅವನು ಪ್ರಕೃತಿನಿಯಮದಂತೆ ನಡೆಯುತ್ತಾನೆ. ನಿಜವಾಗಿ ಅವನೇ ಸರಿಯಾದ ಶಿಕ್ಷಣ ಪಡೆದವನು. ಪ್ರಕೃತಿಯನ್ನು ಅವನು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಂಡಾನು. ಪ್ರಕೃತಿ ಅವನನ್ನು ಉತ್ತಮವಾಗಿ ಉಪಯೋಗಿಸೀತು.”

ಇದು ನಿಜವಾದ ಶಿಕ್ಷಣವಾದರೆ, ನಾನು ಮೇಲೆ ಹೇಳಿದ ಶಾಸ್ತ್ರ ಒಂದಾದರೂ ಇಂದ್ರಿಯನಿಗ್ರಹಕ್ಕೆ ನನಗೆ ನೆರವಾಗಿಲ್ಲವೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ಆದುದರಿಂದ, ಪ್ರಾಥಮಿಕ ಶಿಕ್ಷಣವಾಗಲಿ ಪ್ರೌಢ ಶಿಕ್ಷಣವಾಗಲಿ ಪ್ರಯೋಜನಕರವಲ್ಲ. ಅದು ನಮ್ಮನ್ನು ಮನುಷ್ಯರನ್ನಾಗಿ ಮಾಡದು ; ನಮ್ಮ ಕರ್ತವ್ಯಗಳನ್ನು ನೆರವೇರಿಸುವಂತೆ ಮಾಡದು.

ಓದುಗ : ಹಾಗಾದರೆ ನಿಮ್ಮನ್ನೊಂದು ಪ್ರಶ್ನೆ ಕೇಳಬೇಕು. ಇದನ್ನೆಲ್ಲ ನೀವು ಯಾವ ಬಲದಿಂದ ಹೇಳುತ್ತಿದ್ದೀರಿ ? ನಿಮಗೆ ಉಚ್ಚಶಿಕ್ಷಣ ಸಿಕ್ಕಿರದಿದ್ದರೆ ಇದನ್ನೆಲ್ಲ ವಿವರಿಸಲು ಸಾಧ್ಯವಾಗುತ್ತಿತ್ತೆ ?

ಸಂಪಾದಕ : ಒಳ್ಳೆಯ ಮಾತನ್ನು ಹೇಳಿದಿರಿ. ನನ್ನ ಉತ್ತರ ಸರಳ : ಈ ಪ್ರಾಥಮಿಕ ಶಿಕ್ಷಣ, ಪ್ರೌಢ ಶಿಕ್ಷಣಗಳಿಲ್ಲದಿದ್ದರೆ ನನ್ನ ಬಾಳು ವ್ಯರ್ಥವಾಗುತ್ತಿತ್ತು ಎಂಬುದನ್ನು ನಾನು ಎಳ್ಳಷ್ಟೂ ಒಪ್ಪುವುದಿಲ್ಲ. ನಾನು ಮಾತಾಡಿದುದರಿಂದ ಸೇವೆ ಮಾಡಿದಂತಾಯಿತು ಎಂಬುದನ್ನೂ ನಾನು ಒಪ್ಪುವುದಿಲ್ಲ. ಆದರೆ ನನಗೆ ಸೇವೆ ಮಾಡುವ ಆಸೆಯಿದೆ. ಅದನ್ನು ತೀರಿಸಿಕೊಳ್ಳಲು ನನಗೆ ದೊರೆತ ಶಿಕ್ಷಣವನ್ನು ಉಪಯೋಗಿಸುತ್ತಿದೇನೆ. ಅದರ ಉಪಯೋಗವಾದರೂ ಎಷ್ಟು ಜನಕ್ಕೆ ಲಾಭಕರ ? ನಿಮ್ಮಂಥ ಓದಿದವರಿಗೆ ಮಾತ್ರ. ನಮ್ಮ ಕೋಟಿಕೋಟಿ ಅಣ್ಣತಮ್ಮಂದಿರಿಗೆ ಏನು ಲಾಭ ? ಇದೂ ನನ್ನ ವಿಚಾರಕ್ಕೆ ಪುಷ್ಟಿಕೊಡುತ್ತದೆ. ನಾನು ನೀವು ಇಬ್ಬರೂ ಪೊಳ್ಳು ಶಿಕ್ಷಣದ ಬಲೆಗೆ ಬಿದ್ದಿದೇವೆ. ಅದರ ದುಷ್ಟ ಪ್ರಭಾವದಿಂದ ನಾನು ಮುಕ್ತನಾಗಿದೇನೆ ಎಂದು ತಿಳಿದಿದ್ದೇನೆ. ನನ್ನ ಅನುಭವದ ಲಾಭವನ್ನು ನಿಮಗೆ ಕೊಡುತ್ತಿದ್ದೇನೆ. ಹಾಗೆ ಮಾಡುತ್ತ ಈ ಶಿಕ್ಷಣದ ಕೊಳಕನ್ನು ನಿಮಗೆ ತೋರಿಸುತ್ತಿದೇನೆ.

ಅಕ್ಷರಜ್ಞಾನ ಸದಾ ಕಾಲದಲ್ಲಿಯೂ ಕೆಟ್ಟದೆಂದು ನಾನು ಹೇಳಲಿಲ್ಲ. ಬರೀ ಅಕ್ಷರದ ಭ್ರಾಂತಿ ತಪ್ಪು ಎಂದು ಹೇಳುತ್ತಿದೇನೆ. ಅದು ನಮ್ಮ ಕಾಮಧೇನುವಲ್ಲ. ಅದರ ಮಿತಿಯಲ್ಲಿ ಅದು ಉಪಯುಕ್ತವೇ. ನಮ್ಮ ಇಂದ್ರಿಯ

ಗಳನ್ನು ನಿಗ್ರಹಿಸಿ, ನಮ್ಮ ನೀತಿಯ ತಳಹದಿಯನ್ನು ಬಲಪಡಿಸಿದ ಮೇಲೆ ಅದರಿಂದ ಉಪಯೋಗವಾದೀತು. ಆಗ ನಮಗೆ ಬೇಕೆನಿಸಿದರೆ ಅಕ್ಷರಜ್ಞಾನ ವನ್ನು ಪಡೆಯಬಹುದು. ಆಗ ಅದನ್ನು ಸರಿಯಾಗಿ ಉಪಯೋಗಿಸಬಹುದು. ಆಗ ನಮಗದು ಭೂಷಣವೂ ಆದೀತು. ಈ ಶಿಕ್ಷಣವನ್ನು ಬಲಾತ್ಕಾರ ಮಾಡ ಬೇಕಾಗಿಲ್ಲ. ನಮ್ಮ ಹಳೆಯ ಪಾಠಶಾಲೆಗಳ ಪದ್ಧತಿಯೆ ಸಾಕು. ಅದರಲ್ಲಿ ಸದಾಚಾರ ಶಿಕ್ಷಣಕ್ಕೆ ಪ್ರಥಮಸ್ಥಾನ. ಅದೇ ಪ್ರಾಥಮಿಕ ಶಿಕ್ಷಣ. ಆ ತಳಹದಿಯ ಮೇಲೆ ಕಟ್ಟಿದ ಕಟ್ಟಡ ಭದ್ರ, ಶಾಶ್ವತ.

ಓದುಗ : ಸ್ವರಾಜ್ಯ ಪ್ರಾಪ್ತಿಗೆ ಇಂಗ್ಲೀಷ್ ಶಿಕ್ಷಣ ಅಗತ್ಯವಿಲ್ಲ ಎಂದು ನಿಮ್ಮ ಅಭಿಪ್ರಾಯವೆ ?

ಸಂಪಾದಕ : ಹೌದು-ಅಲ್ಲ, ಎರಡೂ ಉತ್ತರ ನನ್ನದು. ಕೋಟಿಗಟ್ಟಲೆ ಜನರಿಗೆ ಇಂಗ್ಲೀಷು ಕಲಿಸುವುದು ಅವರನ್ನು ಗುಲಾಮರಾಗಿ ಮಾಡಿದಂತೆ. ಮೆಕಾಲೆ ಹಾಕಿದ ಶಿಕ್ಷಣದ ತಳಹದಿ ನಮ್ಮನ್ನು ಗುಲಾಮಗಿರಿಗೆ ನೂಕಿದೆ. ಆತನಿಗೆ ಆ ಉದ್ದೇಶ್ಯವಿತ್ತೆಂದು ನನ್ನ ಅಭಿಪ್ರಾಯವಲ್ಲ. ಪರಿಣಾಮವೇನೋ ಅದೇ. ಸ್ವರಾಜ್ಯವನ್ನು ಕುರಿತು ನಾವು ಪರಭಾಷೆಯಲ್ಲಿ ಮಾತನಾಡಬೇಕಾಗಿದೆ. ಇದೇ ಸಾಲದೆ ನಮ್ಮ ದುರ್ದೆಶೆಗೆ ಸಾಕ್ಷಿ ?

ಇನ್ನೊಂದು ಗಮನೀಯ ಅಂಶವಿದೆ. ಯೂರೋಪಿನಲ್ಲಿ ಕೈಬಿಟ್ಟ ಪದ್ಧತಿ ಗಳು ನಮಗೆ ಶಿರೋಧಾರ್ಯ-ಇಂಗ್ಲೀಷ್ ವಿದ್ವಾಂಸರು ಸದಾ ಶಿಕ್ಷಣ ಪದ್ಧತಿಯನ್ನು ಬದಲಿಸುತ್ತಿರುತ್ತಾರೆ. ಅವರು ವರ್ಜಿಸಿದ ಪದ್ಧತಿಯನ್ನೇ ನಾವು ತಬ್ಬಿಕೊಳ್ಳು ತ್ತೇವೆ. ಅಲ್ಲಿ ಪ್ರತಿಯೊಂದು ಪ್ರದೇಶವೂ ವೃದ್ಧಿಯಾಗುವಂತೆ ಯತ್ನ ನಡೆದಿದೆ. ವೇಲ್ಸ್ ಇಂಗ್ಲೆಂಡಿನಲ್ಲಿ ಒಂದು ಚಿಕ್ಕ ಪ್ರದೇಶ. ವೇಲ್ಸ್ ಮಕ್ಕಳು ತಮ್ಮ ತಾಯಿನುಡಿಯನ್ನೇ ಬಳಸುವಂತೆ ಚಳುವಳಿ ನಡೆದಿದೆ. ಅದಕ್ಕೆ ಇಂಗ್ಲೆಂಡಿನ ಕೋಶಾಧ್ಯಕ್ಷ ಮಿ. ಲಾಯಡ್ ಜಾರ್ಜ್ ಮುಂದಾಳು. ನಮ್ಮ ಸ್ಥಿತಿ ಹೇಗಿದೆ ಇತ್ತ ? ಒಬ್ಬರಿಗೊಬ್ಬರು ತಪ್ಪು ತಪ್ಪು ಇಂಗ್ಲೀಷಿನಲ್ಲಿ ಪತ್ರ ಬರೆಯುತ್ತೇವೆ. ಎಂ. ಎ. ಮಾಡಿದವರೂ ಈ ತಪ್ಪು ಮಾಡುತ್ತಾರೆ. ನಮ್ಮ ಉತ್ತಮ ವಿಚಾರ ಗಳೆಲ್ಲ ಇಂಗ್ಲೀಷಿನಲ್ಲಿ ವ್ಯಕ್ತವಾಗಬೇಕು. ನಮ್ಮ ಕಾಂಗ್ರೆಸ್ಸಿನ ಕಾರ್ಯಕ್ರಮ ಇಂಗ್ಲೀಷಿನಲ್ಲಿ ನಡೆಯುತ್ತದೆ. ನಮ್ಮ ಸರ್ವೋತ್ತಮ ಪತ್ರಿಕೆಗಳು ಇಂಗ್ಲೀಷಿನಲ್ಲಿ. ಈ ಪರಿಸ್ಥಿತಿ ಬಹುಕಾಲ ನಡೆದರೆ ಮುಂದಿನ ಪೀಳಿಗೆ ನಮ್ಮನ್ನು ಶಪಿಸಿಯಾರು ; ಇದು ನನ್ನ ದೃಢಾಭಿಪ್ರಾಯ.

ಈ ಇಂಗ್ಲೀಷು ಶಿಕ್ಷಣ ಪಡೆದು ನಾವು ದೇಶವನ್ನು ಗುಲಾಮತನಕ್ಕೆ ಈಡು ಮಾಡಿದೇವೆಂಬುದು ಗಮನಿಸಬೇಕಾದ ಮಾತು. ರಾಗದ್ವೇಷ, ಅಸತ್ಯ, ದೌರ್ಜನ್ಯಗಳು ಹೆಚ್ಚಿವೆ. ಇಂಗ್ಲೀಷು ಕಲಿತ ಭಾರತೀಯರು ಜನರನ್ನು ಮೋಸ ಗೊಳಿಸಲು, ಬೆದರಿಸಲು ನಿಸ್ಸಂದೇಹವಾಗಿ ಯತ್ನಿಸಿದ್ದಾರೆ. ಈಗ ಸಾಮಾನ್ಯರಿಗಾಗಿ ಏನಾದರೂ ಮಾಡುತ್ತಿದ್ದರೆ, ಅವರ ಋಣ ತೀರಿಸುತ್ತಿದೇವೆ. ಅಷ್ಟೇ.

ನ್ಯಾಯಾಲಯಕ್ಕೆ ಹೋಗಬೇಕಾದರೆ ಇಂಗ್ಲೀಷು ಗೊತ್ತಿರಲೇಬೇಕು. ಇದಕ್ಕಿಂತ ದುಃಖವುಂಟೆ? ಬ್ಯಾರಿಸ್ಟರ್ ಆದರೆ ನಾನು ನನ್ನ ತಾಯಿನುಡಿಯಲ್ಲಿ ಮಾತಾಡಲಾಗದು. ತಾಯಿನುಡಿಯಲ್ಲಿ ಹೇಳಿದುದನ್ನು ಯಾರೋ ಭಾಷಾಂತರ ಮಾಡಬೇಕು. ಇದಕ್ಕಿಂತ ಮೂರ್ಖತನವೆ? ಇದು ಗುಲಾಮಗಿರಿಯ ಗುರುತಲ್ಲವೆ? ಇದಕ್ಕಾಗಿ ಇಂಗ್ಲೀಷರನ್ನು ಬೈಯಬೇಕೋ, ನನ್ನನ್ನೋ? ನಿಜವಾಗಿ ಇಂಗ್ಲೀಷ್ ಕಲಿತ ನಾವೇ ಹಿಂದೂಸ್ತಾನಕ್ಕೆ ಗುಲಾಮಗಿರಿಯ ಸಂಕೋಲೆ ತೊಡಿಸಿದವರು. ರಾಷ್ಟ್ರದ ಶಾಪ ಇಂಗ್ಲೀಷರಿಗಲ್ಲ, ನಮಗೇ.

ನಿಮ್ಮ ಪ್ರಶ್ನೆಗೆ ಹೌದು—ಅಲ್ಲ ಎರಡೂ ಉತ್ತರ ಎಂದೆ. ಹೌದು ಎಂಬುದಕ್ಕೆ ಇಷ್ಟು ವಿವರ. ಇನ್ನು ಅಲ್ಲ ಎಂಬುದನ್ನು ವಿವರಿಸುತ್ತೇನೆ.

ಆಧುನಿಕ ನಾಗರಿಕತೆಯ ರೋಗಕ್ಕೆ ನಾವು ಪೂರಾ ತುತ್ತಾಗಿದೇವೆ. ಆದುದರಿಂದ ಇಂಗ್ಲೀಷು ಸಂಪೂರ್ಣವಾಗಿ ಬಿಡಲು ಆಗುವುದಿಲ್ಲ. ಈಗಾಗಲೇ ಇಂಗ್ಲೀಷು ಕಲಿತವರು ಅಗತ್ಯವಾದಲ್ಲೆಲ್ಲ ಅದನ್ನು ಉಪಯೋಗಿಸಲಿ. ಇಂಗ್ಲೀಷರೊಡನೆ ವ್ಯವಹರಿಸುವಾಗ, ನಮ್ಮವರೊಡನೆ ಬೇರೆ ಭಾಷೆಯಲ್ಲಿ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲದಲ್ಲಿ, ಇಂಗ್ಲೀಷರೇ ತಮ್ಮ ನಾಗರಿಕತೆಯ ಬಗ್ಗೆ ಎಷ್ಟು ಅಸಹ್ಯಪಟ್ಟುಕೊಂಡಿದಾರೋ ತಿಳಿಯಲು, ನಾವು ಇಂಗ್ಲೀಷನ್ನು ಕಲಿಯಬಹುದು, ಬಳಸಬಹುದು. ಇಂಗ್ಲೀಷು ಕಲಿತವರು ತಮ್ಮ ಸಂತಾನಕ್ಕೆ ತಮ್ಮ ತಾಯಿನುಡಿಯಲ್ಲಿ ನೀತಿಯನ್ನು ಕಲಿಸಬೇಕು. ಇನ್ನೊಂದು ಭಾರತೀಯ ಭಾಷೆಯನ್ನು ಕಲಿಸಬೇಕು. ಬೆಳೆದ ಮೇಲೆ ಅವರು ಇಂಗ್ಲೀಷು ಕಲಿತರೆ ಕಲಿಯಲಿ. ಆದರೆ ಇಂಗ್ಲೀಷ್ ನಮಗೆ ಅಗತ್ಯವಾಗಬಾರದೆಂಬುದು ನಮ್ಮ ಗುರಿ. ಅದನ್ನು ಕಲಿತು ಹಣಗಳಿಸುವ ಉದ್ದೇಶವನ್ನು ಬಿಡಬೇಕು. ಇಷ್ಟು ಮಿತವಾಗಿ ಇಂಗ್ಲೀಷನ್ನು ಕಲಿತರೂ ಏನು ಕಲಿಯಬೇಕು ಇಂಗ್ಲೀಷಿನಲ್ಲಿ, ಏನು ಕಲಿಯಬಾರದು ಎಂಬುದನ್ನು ಯೋಚಿಸಬೇಕು. ಯಾವ ವಿಜ್ಞಾನಶಾಸ್ತ್ರವನ್ನು ಕಲಿಯಬೇಕೋ ತಿಳಿದುಕೊಳ್ಳುವುದು ಅಗತ್ಯ. ಇಂಗ್ಲೀಷ್ ಪ್ರಶಸ್ತಿಗಳನ್ನು

ನಾವು ಸ್ವಲ್ಪ ಅಸಡ್ಡೆ ಮಾಡಲಿ, ಆಡಳಿತಗಾರರ ಕಿವಿ ನೆಟ್ಟಗಾದೀತು.

ಓದುಗ : ಹಾಗಾದರೆ ನಾವು ಎಂತಹ ಶಿಕ್ಷಣ ಪಡೆಯಬೇಕು ?

ಸಂಪಾದಕ : ಮೇಲೆ ಇದನ್ನು ಸೂಕ್ಷ್ಮವಾಗಿ ಚರ್ಚಿಸಿದೆ. ಇನ್ನೂ ವಿವರವಾಗಿ ನೋಡೋಣ. ನಮ್ಮ ಭಾಷೆಗಳನ್ನೆಲ್ಲ ವೃದ್ಧಿಗೊಳಿಸಬೇಕು. ನಮ್ಮ ಭಾಷೆಗಳಲ್ಲಿ ಯಾವ ವಿಷಯಗಳನ್ನು ಕಲಿಯಬೇಕೆಂಬುದನ್ನು ಇಲ್ಲಿ ವಿಸ್ತರಿಸ ಬೇಕಾಗಿಲ್ಲ. ಇಂಗ್ಲೀಷಿನ ಅಮೂಲ್ಯ ಗ್ರಂಥಗಳು ನಮ್ಮ ಭಾಷೆಗಳಿಗೆ ಭಾಷಾಂ ತರವಾಗಲಿ. ಅನೇಕ ವಿಜ್ಞಾನ ಶಾಸ್ತ್ರಗಳನ್ನು ಕಲಿಯುವ ಈ ಭ್ರಾಂತಿ ಹೋಗಬೇಕು. ಧಾರ್ಮಿಕ ಎಂದರೆ ನೈತಿಕ ಶಿಕ್ಷಣ ಅಗ್ರಸ್ಥಾನ ಪಡೆಯಬೇಕು. ಸುಸಂಸ್ಕೃತನಾದ ಪ್ರತಿಯೊಬ್ಬ ಭಾರತೀಯನೂ ತನ್ನ ಪ್ರಾದೇಶಿಕ ಭಾಷೆಯ ಜೊತೆಗೆ ಹಿಂದುವಾದರೆ ಸಂಸ್ಕೃತ, ಮುಸಲ್ಮಾನನಾದರೆ ಅರಬ್ಬಿ, ಪಾರಸಿಯಾ ದರೆ ಪರ್ಶಿಯನ್ ಕಲಿತಾನು. ಹಿಂದಿಯನ್ನು ಎಲ್ಲರೂ ಕಲಿಯಬೇಕು. ಕೆಲವು ಹಿಂದೂಗಳಿಗೆ ಅರಬ್ಬೀ–ಫಾರಸಿ ತಿಳಿದಿರಲಿ, ಕೆಲವು ಮುಸಲ್ಮಾನರು ಫಾರಸೀ– ಸಂಸ್ಕೃತ ಕಲಿಯಲಿ. ಉತ್ತರ ದೇಶದವರು, ಪಶ್ಚಿಮ ಸೀಮೆಯವರು ತಮಿ ಳನ್ನು ಕಲಿಯಲಿ. ಹಿಂದುಸ್ತಾನಕ್ಕೆ ಹಿಂದೀ ಸಾಮಾನ್ಯ ಸಾರ್ವತ್ರಿಕ ಭಾಷೆ ಯಾಗಬೇಕು. ಅದರ ಲಿಪಿ ನಾಗರಿ ಅಥವಾ ಫಾರಸೀ, ಅವರವರ ಇಷ್ಟದಂತೆ ಆಗಬಹುದು. ಹಿಂದೂ ಮುಸಲ್ಮಾನ ಸೌಹಾರ್ದಕ್ಕೆ ಎರಡೂ ಲಿಪಿಗಳನ್ನು ತಿಳಿದಿರುವುದು ಅಗತ್ಯ. ಇಷ್ಟು ಮಾಡಿದರೆ ಇಂಗ್ಲೀಷು ಭಾಷೆಯನ್ನು ಒಂದು ಗಳಿಗೆಯಲ್ಲಿ ಓಡಿಸಬಹುದು. ನಾವು ಗುಲಾಮರಾಗಿದೇವೆ. ಅದರಿಂದ ಇಷ್ಟೆಲ್ಲ ಮಾಡಬೇಕು. ನಮ್ಮ ಗುಲಾಮಗಿರಿಯ ದೆಸೆಯಿಂದ ಇಡೀ ರಾಷ್ಟ್ರವೇ ಗುಲಾಮನಾಗಿದೆ; ನಾವು ಮುಕ್ತರಾದರೆ ರಾಷ್ಟ್ರಕ್ಕೂ ಮುಕ್ತಿ.[೧]

೨

## ಹೊಸ ಶಿಕ್ಷಣಕ್ಕೆ ಜೀವನ-ಸಂಸ್ಕೃತಿ ಆಧಾರವಾಗಬೇಕು

ಆಧುನಿಕ ಶಿಕ್ಷಣದ ಹಾಸುಹೊಕ್ಕು ಆದ ಶಿಕ್ಷಣವಿಚಾರ, ಪಾಠಕ್ರಮ ಎಲ್ಲವೂ ಆಕ್ಸ್‌ಫರ್ಡ್, ಕೇಂಬ್ರಿಜ್, ಎಡಿನ್‌ಬರೋ, ಲಂಡನ್ನುಗಳಿಂದ ತಂದದ್ದೇ. ಸಾರತಃ ಅವು ವಿದೇಶೀ. ಅವನ್ನು ನಿರಾಕರಿಸುವವರೆಗೂ ನಮ್ಮಲ್ಲಿ ರಾಷ್ಟ್ರೀಯ ಶಿಕ್ಷಣ ಅಸಂಭವ. ಐರೋಪ್ಯ ಶಿಕ್ಷಣವನ್ನು ವರ್ಜಿಸಿ ಹಿಂದುಸ್ಥಾನ ಮುಂದೆ ಸಾಗಲಿಲ್ಲವೆ ಎಂಬ ಮಾತನ್ನು ಇಲ್ಲಿ ಚರ್ಚಿಸುತ್ತಿಲ್ಲ, ಈಗ. (ಐರೋಪ್ಯ

ಪದ್ಧತಿಯಲ್ಲೂ ಇಂಗ್ಲೀಷು ಒಂದು ವಿಶೇಷ ವಸ್ತು ಎಂದು ಕೊಳ್ಳೋಣ) ಹಿಂದುಸ್ಥಾನ ಯೂರೋಪನ್ನು ಎದುರಿಸಬೇಕು, ಅದರೊಡನೆ ಯುದ್ಧ ಮಾಡ ಬೇಕು. ಆದ್ದರಿಂದ ಯೂರೋಪಿನ ಆಯುಧಗಳಿಂದಲೇ ಯೂರೋಪನ್ನು ಎದುರಿಸಬೇಕು. ಗಿರಣಿಗಾರಿಕೆ ಬಂಡವಾಳಗಾರಿಕೆ ಶಸ್ತ್ರಗಾರಿಕೆಗಳ ಮೂಲಕ, ಹಿಂದುಸ್ಥಾನದ ಸಂತಾನವನ್ನು ಖೋಟಾ ಐರೋಪ್ಯರನ್ನಾಗಿ, ಸಿಪಾಯಿಗಳನ್ನಾಗಿ, ಸಿಡಿಮದ್ದಿನ ನಿರ್ಮಾಪಕರನ್ನಾಗಿ, ವಿಜ್ಞಾನ ವ್ಯಭಿಚಾರಿಗಳಾಗಿ ಭಗವಂತನನ್ನು ಮರೆತವರನ್ನಾಗಿ ಮಾಡಿ, ಹೊಡೆದಾಡಬೇಕು ಎಂದು ನಿಶ್ಚಯಿಸುವುದಾದರೆ, ಕಣ್ಣು ಬಿಟ್ಟು ನೋಡಿ ಬಂದದ್ದೆಲ್ಲಾ ಬರಲಿ ಎಂದು ನಿಷ್ಠುರವಾಗಿ ಸಾಗಬೇಕು ಆ ದಾರಿಯಲ್ಲಿ. ಹಾಗಾದರೆ ರಾಷ್ಟ್ರೀಯ ಶಿಕ್ಷಣದ ಆಸೆಯನ್ನು ಕೈಬಿಡಬೇಕು. ರಾಷ್ಟ್ರೀಯ ಶಿಕ್ಷಣ ಇವು ಯಾವುದನ್ನೂ ಸಾಧಿಸಲಾರದು, ತನ್ನ ಮಕ್ಕಳನ್ನು ಈ ಕೆಲಸಗಳಿಗೆ ಅಣಿಮಾಡಲಾರದು. ಹಿಂದುಸ್ಥಾನವು ಬಹುದೀರ್ಘಕಾಲದ ವಿಸ್ತಾರ ವಾದ ನಾಗರಿಕತೆಯೊಂದನ್ನು ಹೊಂದಿದೆ. ಆ ಕಾರಣದಿಂದ ಅದಕ್ಕೆ ತನ್ನದೇ ಆದ ಅದೊಂದೇ ನಿಜವಾಗಿ 'ರಾಷ್ಟ್ರೀಯ' ಎನಿಸಿಕೊಳ್ಳಬಹುದಾದ ಶಿಕ್ಷಣ ಪದ್ಧತಿ ಇದ್ದಿತು. ಈ ಮಾತನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಅದು ಈ ಆಂಗ್ಲ-ಹಿಂದೀ ಪದ್ಧತಿ, ಅದರ ಮರಿಯಾದ ರಾಷ್ಟ್ರೀಯ ವೇಷದ ಪದ್ಧತಿ ಇವು ಗಳಿಂದ ಭಿನ್ನವಾದುದು (ಮೂಲತಃ). ಇರುವ ಪ್ರಶ್ನೆ ಇದು: ರಾಷ್ಟ್ರೀಯ ಶಿಕ್ಷಣವೆ, ವಿದೇಶೀ ಶಿಕ್ಷಣವೆ? ಯಾವ ಬಗೆ, ಯಾವ ಮೂಲಾಧಾರ, ಏನು ಉದ್ದೇಶ್ಯ, ಏನು ಲಕ್ಷ್ಯ, ಮಾರ್ಗ ಎಂಥದು, ಅಗತ್ಯ ಏನು? ಇದನ್ನು ಸ್ಪಷ್ಟವಾಗಿ ಖಚಿತವಾಗಿ ನಿರ್ಧರಿಸಬೇಕು. ಇದುವರೆಗೆ ಹಾಗೆ ಮಾಡಿಲ್ಲ. ಇದನ್ನು ನಿಶ್ಚಯಿ ಸುವುದು ಅಗತ್ಯವೆಂಬುದೇ ಇನ್ನೂ ಅರ್ಥವಾಗಿಲ್ಲ. ಇದರಲ್ಲೇ ಗೊಂದಲವಿದ್ದರೆ 'ರಾಷ್ಟ್ರೀಯ' ಶಿಕ್ಷಣ ಪ್ರಗತಿಗೊಳ್ಳಲಾರದು. ಅದಕ್ಕೆ ಕಾರಣ ಬಹಳ ಸರಳ. ಸರಕಾರ ಈಗಾಗಲೇ ಒಂದು ಬಗೆಯ ಶಿಕ್ಷಣವನ್ನು ಕೊಡುತ್ತಿದೆ. ಯಾವ ಸರಕಾರೇತರ ಸಂಸ್ಥೆಯೂ ಅದರೊಡನೆ ಸ್ಪರ್ಧೆ ಮಾಡಬಾರದು. ಸರ್ಕಾ ರದ ಸಂಘಟನೆ ವಿಸ್ತಾರ, ಅದಕ್ಕೆ ಧನಬಲವೂ ಹೆಚ್ಚು. ಅದು ಕೊಡ ಬಹುದಾದ ಪಾರಿತೋಷಕಗಳೂ ಅನೇಕ. ಮೂಲಭೂತ ವಿಚಾರಗಳ ಬಗ್ಗೆ ಸ್ಪಷ್ಟ ಜ್ಞಾನ ಆಗುವವರೆಗೆ ಈ ಮೂಲಾಭಾಸ ಇದ್ದೇ ಇರುತ್ತದೆ. ಆಲೋಚನೆ ಮಾಡಿ ನಿರ್ಣಯಿಸಿ, ನಾವು ಕೊಡುವ ಶಿಕ್ಷಣ ನಿಜವಾಗಿಯೂ ಭಾರತೀಯ, ಶಾಲೆ ಕಾಲೇಜುಗಳಲ್ಲಿ ಸಿಗುವ ಶಿಕ್ಷಣದ ಕೀಳ್ತರದ ನಕಲು ಅಲ್ಲ

ಎಂದು ಜನರಿಗೆ ಹೇಳಿದರೆ ಅವರು ನಮ್ಮ ಮಾತಿಗೆ ಕಿವಿಗೊಟ್ಟಾರು, ಖಂಡಿತ. ಈಗಿನ ವ್ಯವಸ್ಥೆಯ ಪರಿಣಾಮದಿಂದ ಬಾಧೆ ಪಡುತ್ತಿರುವ ಜನ, ಸಾಮಾಜಿಕ ವಿನಾಶವನ್ನು ಕಂಡು ವಿಷಾದಿಸುವ ಜನ, ವ್ಯರ್ಥ ತಾರುಣ್ಯದ ಪೀಡೆಗೆ ಒಳಗಾದ ಜನ, ಇಂಥದೊಂದು ನಿವಾರಣೋಪಾಯ ಸಿಕ್ಕಿತಲ್ಲ ಎಂದು ಕೃತಜ್ಞರಾದಾರು. ರಾಷ್ಟ್ರೀಯ, ಸಾಮಾಜಿಕ ಪರಂಪರೆಯ ಪುನರುಜ್ಜೀವನಕ್ಕಾಗಿ ಕ್ರಾಂತಿ ಅನಿವಾರ್ಯವೆಂದು ಪ್ರತಿಪಾದಿಸುವ ಸಂಸ್ಥೆಗಳ ಕೈಯಲ್ಲಿ ಭವಿಷ್ಯದ ಬೀಗದ ಕೈ ಸಿಕ್ಕೀತು.

ಆ ದೃಷ್ಟಿಗೆ ನೆನಪಿರಬೇಕಾದ್ದು ಇದು. ಈಗಿನ ಶಿಕ್ಷಣ ಪದ್ಧತಿಯ ಮಹಾದೋಷ-ನಮ್ಮ ಪರಂಪರೆಯನ್ನು ಕತ್ತರಿಸಿ ಹಾಕಿದ್ದು. ಇನ್ನಿತರ ಮಹತ್ತರ ದೋಷಗಳಿಗೆ ಇದು ಸಾಕ್ಷಿ. ಯೋಗ್ಯವಾದ ಶಿಕ್ಷಣ ಈ ಪೀಳಿಗೆ ಹಿಂದಿನ ಪೀಳಿಗೆಯ ಭಾರವನ್ನು ಹೊರುವಂತೆ, ಸಾಮಾಜಿಕ ಜೀವನದ ಪರಂಪರೆ ಕಡಿದು ಹೋಗದಂತೆ ಅನರ್ಥವಾಗದಂತೆ ಮಾಡಬೇಕು. ಸಾಮಾಜಿಕ ಪರಂಪರೆ ಒಂದು ನಿರಂತರ ಪ್ರವಾಹ. ಹಿಂದಿನವರ ಪ್ರಯತ್ನ-ಸಾಧನೆಗಳ ಪರಿಚಯವೇ ಇಲ್ಲದಂತಾದರೆ ಒಂದು ಪೀಳಿಗೆಗೆ, ಅಥವಾ ತನ್ನ ಪೂರ್ವ ಸಂಸ್ಕೃತಿಯ ಬಗ್ಗೆ ಅಪಮಾನದ ಭಾವನೆ ಹುಟ್ಟಿದರೆ, ಆ ಜನಕ್ಕೆ ವಿನಾಶ ಸಿದ್ಧ. ಸಮಾಜವನ್ನು ಸುಭದ್ರವಾಗಿ ಹಿಡಿದಿಡುವ ಶಕ್ತಿ ಉನ್ನತ ಶ್ರದ್ಧೆ; ಉದ್ಯೋಗದಲ್ಲಿ, ತಂದೆತಾಯಿಗಳಲ್ಲಿ, ಕುಟುಂಬದಲ್ಲಿ, ದೈವದಲ್ಲಿ, ಧರ್ಮದಲ್ಲಿ ಶ್ರದ್ಧೆ. ಹಿಂದುಸ್ಥಾನದ ಪುರಾತನ ಶಿಕ್ಷಣಪದ್ಧತಿ ಸುದೀರ್ಘ ಪರಂಪರಾಪ್ರಾಪ್ತವಾದ ಸೇವೆಯ ಹೆಮ್ಮೆಯನ್ನು ಸಮಾಜದ ವ್ಯವಸ್ಥೆಯಲ್ಲಿ ಪ್ರತಿಯೊಂದು ಸಂಘಟನೆಯ ಸ್ಥಾನವನ್ನು ಕಾಯ್ದುಕೊಂಡು ಬಂದಿದೆ. ಇದೆಷ್ಟು ನಿಜವೋ ಈಗಿನ ವಿದೇಶೀ ಅರಾಷ್ಟ್ರೀಯ ಶಿಕ್ಷಣದಿಂದ ತರುಣರು ಉಪಯೋಗಕರವಾದ ಯಾವಕೆಲಸವನ್ನೂ ಮಾಡಲಾರದವರಾಗುತ್ತಾರೆ, ಎನ್ನುವುದೂ ಅಷ್ಟೇನಿಜ. ಈ ಇಂಗ್ಲೀಷು ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸಿದ ಅನೇಕಾನೇಕ ಜನ ರೈತರು ದೇವರಲ್ಲಿ ಗಾಢಭಕ್ತಿಯುಳ್ಳ ಸ್ತ್ರೀ ಪುರುಷರು. ಈ ತರುಣರು ಹಿಂದಕ್ಕೆ ಬಂದಾಗ ಬೇಸಾಯದ ವಿಷಯ ಎಳ್ಳಷ್ಟೂ ಗೊತ್ತಿರಲಿಲ್ಲ. ತಮ್ಮ ಹಿರಿಯರ ಉದ್ಯೋಗ–ವ್ಯವಸಾಯದ ಬಗ್ಗೆ ಅವರಿಗೆ ಪೂರಾ ಅಸಹ್ಯ–ತಿರಸ್ಕಾರ; ದೈವ ಭಕ್ತಿ ದೈವಾನುಗ್ರಹಗಳನ್ನು ಮೀರಿ ಮುಂದೆ ಸಾಗಿದ್ದೇವೆ ಎಂಬ ಕಲ್ಪನೆ ಇತ್ತು. ವಿಧ್ವಂಸಕ ಆಘಾತದ ದುರಂತಕ್ಕೆ ಒಂದು ಮಿತಿಯಿತ್ತು, ಸರಕಾರಕ್ಕೆ ಬೇಕಾದ

ಈ ಗುಮಾಸ್ತೆಗಳ ಕೆಲಸಗಾರರ ಸಂಖ್ಯೆಯ ಪರಿಮಿತಿ ಇತ್ತು. ಎಂದಮಾತ್ರಕ್ಕೆ ಈ ವ್ಯವಹಾರದ ನೈಜಸ್ವರೂಪವನ್ನು ಮರೆಮಾಚಬೇಕಾಗಿಲ್ಲ. ಶಿಕ್ಷಣ ಪದ್ಧತಿಯಲ್ಲಿ ' ಸುಧಾರಣೆ 'ಗಳ ಮೇಲೆ ' ಸುಧಾರಣೆ 'ಗಳು ಆಗಿವೆ. ಸಮಿತಿ–ಮಂಡಲಗಳು ವಿಶ್ವವಿದ್ಯಾನಿಲಯದ ವಿಷಯವನ್ನು ಪರ್ಯಾಲೋಚಿಸಿವೆ. ಪ್ರಾಥಮಿಕ ವಿದ್ಯಾಭ್ಯಾಸ ಕಡ್ಡಾಯವಾಗಿದೆ. ಆದರೆ ಇದೆಲ್ಲವೂ ದೋಷಭೂಯಿಷ್ಠ. ರಾಷ್ಟ್ರೀಯ ಜೀವನ–ಅಭಿವೃದ್ಧಿಗಳ ತಳಹದಿಯನ್ನೆ ಧ್ವಂಸಮಾಡುತ್ತದೆ ಎಂದು ಯಾವಾಗಲೂ ಕಿಂಚಿತ್ತೂ ತಿಳಿದಿಲ್ಲ. ಈ ಪದ್ಧತಿಯನ್ನು ಕಿತ್ತುಹಾಕಲೇಬೇಕು. ಆ ಹಾನಿಕರ ವರದಿಯನ್ನು ಮೆಕಾಲೆ ಬರೆಯುವ ಮೊದಲು ಹಿಂದುಸ್ಥಾನದ ವಿಶ್ವವಿದ್ಯಾನಿಲಯಗಳ ಸ್ಥಾಪನೆಗೆ ಹೊದಲು, ನಮ್ಮ ಶಿಕ್ಷಣ ಕ್ರಮ ಹೇಗಿತ್ತೋ ಪರಿಶೀಲಿಸಬೇಕು. ಇದೆಲ್ಲ ಶೀಘ್ರವಾಗಿಯೇ ಆಗಬೇಕು. ಪ್ರಾಚೀನ ಗುರುಪರಂಪರೆ ನಶಿಸುತ್ತಿದೆ. ಅವರ ಕೌಶಲದ ರಹಸ್ಯ ಅವರೊಡನೆ ನಷ್ಟವಾಗಬಹುದು, ಆ ವ್ಯಾಸಂಗ ಕ್ರಮವನ್ನು ಮತ್ತೆ ತಂದರೆ ರಾಜಕೀಯ ಇತಿಹಾಸ, ಭೂಗೋಳಗಳ ಪಾಠ ಮಾಯವಾದೀತು. ಆದಕ್ಕಾಗಿ ನಾವು ಸ್ವಲ್ಪವೂ ಗಾಬರಿಪಡಬೇಕಾಗಿಲ್ಲ. ಪುರಾತನ ಶಿಕ್ಷಣ ಕ್ರಮದ ಅಂಶಗಳನ್ನು ಸಂಗ್ರಹಿಸುವ ಪ್ರಯತ್ನ ದೇಶದಲ್ಲಿ ಒಂದುಕಡೆಯಾದರೂ ನಡೆಯುತ್ತಿದೆ. ಯೂರೋಪಿನಿಂದ ಬಂದ ಅತ್ಯಾಧುನಿಕ ವಿಧಾನಕ್ಕಿಂತ ಅದು ಅತ್ಯಂತ ಸಮರ್ಪಕವೂ, ತೃಪ್ತಿಕರ ಎಂದು ಪ್ರಮಾಣಪೂರ್ವಕವಾಗಿಯೂ ಅನಿಸುತ್ತದೆ. ಆದರೂ ಇದು ತಜ್ಞನಲ್ಲದವನ ಅಭಿಪ್ರಾಯ. ಆದ್ದರಿಂದಲೇ ತಜ್ಞರು ಇದನ್ನು ಸಂಶೋಧನೆಮಾಡಲಿ ಎನ್ನುತ್ತೇನೆ. ಹಾಗೆ ಮಾಡಿ, ಅದರ ಪರಿಣಾಮದಂತೆ ನಡೆದರೆ ನಮ್ಮ ದೇಶದ ಜನ ಅತ್ಯಂತ ಕೃತಜ್ಞರಾಗಿದ್ದಾರು ಎಂಬ ನಂಬಿಕೆಯಿದೆ.೨

ಪ್ರಾರಂಭದಿಂದಲೇ ಈಗಿನ ಪಾಠದ ಪುಸ್ತಕಗಳಲ್ಲಿ ಹುಡುಗರು ಓದುವುದು ತಮ್ಮ ಮನೆಯಲ್ಲಿ ದಿನವೂ ತಾವು ಮಾಡಬೇಕಾದ ವಿಷಯಗಳಲ್ಲ, ತಮಗೆ ಸಂಬಂಧವೇ ಇಲ್ಲದ ಅಪರಿಚಿತ ವಿಷಯ. ಮನೆಯ ಬದುಕಿನಲ್ಲಿ ಯಾವುದು ಸರಿ ಯಾವುದು ತಪ್ಪು ಎಂಬುದನ್ನು ಹುಡುಗರು ಪಾಠದಿಂದ ಕಲಿಯುವರು. ತನ್ನ ನೆರೆಹೊರೆಯ ಬಗ್ಗೆ ಹೆಮ್ಮೆಪಡುವುದನ್ನು ಕಲಿಸರು. ವಿದ್ಯಾಭ್ಯಾಸದಲ್ಲಿ ಎಷ್ಟು ಮೇಲೇರಿದರೆ ಅಷ್ಟು ಮನೆಗೆ, ಮನೆಯ ಬಾಳಿಗೆ ದೂರ. ಓದು ಮುಗಿಯುವ ವೇಳೆಗೆ ತನ್ನ ನೆರೆಹೊರೆಗೇ ತಾನು ಅಪರಿಚಿತನಾಗುತ್ತಾನೆ. ಗೃಹಜೀವನದಲ್ಲಿ ಅವನಿಗೆ ಕಾವ್ಯ ಕಾಣದು, ರಸ ಕಾಣದು. ಹಳ್ಳಿ

ಯದೃಶ್ಯಗಳು ಅವರ ಪಾಲಿಗೆ ಇಲ್ಲ. ತನ್ನ ನಾಗರೀಕತೆ ಕ್ರೂರ, ಅಶಕ್ತ. ಮೂಢ, ಅನ್ಯವಹಾರ, ನಿಷ್ಪ್ರಯೋಜಕ ಎಂದು ಹೇಳಿಕೊಡುತ್ತಾರೆ. ಅವನ ಪರಂಪರಾಪ್ರಾಪ್ತ ಸಂಸ್ಕೃತಿಯಿಂದ ಅವನನ್ನು ಬಿಡಿಸುವುದೇ ಅವನ ವಿದ್ಯಾಭ್ಯಾಸದ ಏರ್ಪಾಡು. ಶಿಕ್ಷಣ ಪಡೆದ ತರುಣ ಲೋಕವೆಲ್ಲವೂ ಇನ್ನೂ ರಾಷ್ಟ್ರಾಭಿಮಾನಶೂನ್ಯವಾಗಿರದಿದ್ದರೆ, ಅವರ ಬೆಳವಣಿಗೆಗೆ ವಿರುದ್ಧವಾದ ಶಿಕ್ಷಣ ಕೊಟ್ಟರೂ ಪೂರಾ ಮಾಲೋತ್ಪಾಟನೆಯಾಗಲಾರದಷ್ಟು ಆಳವಾಗಿ ಬೇರು ಬಿಟ್ಟಿದೆ ಆ ಪುರಾತನ ಸಂಸ್ಕೃತಿ ಎಂದರ್ಥ. ನನ್ನ ಮಾತು ನಡೆಯುವ ಹಾಗಿದ್ದರೆ, ಈಗಿನ ಪಠ್ಯಪುಸ್ತಕಗಳನ್ನು ನಾಶಮಾಡಿ, ಗೃಹಜೀವನಕ್ಕೆ ಹೊಂದುವಂಥ ಪುಸ್ತಕಗಳನ್ನು ಬರೆಸುತ್ತಿದ್ದೆ. ಹುಡುಗ ಶಿಕ್ಷಣ ಪಡೆಯುತ್ತಿರುವಂತೆಯೆ ಗೃಹಜೀವನದಲ್ಲಿ ಅದರ ಪ್ರಚಾರ ಕಾಣಬರುತ್ತಿತ್ತು.[೩]

## ಪರಿಸ್ಥಿತಿಗೆ ಸಂಬಂಧವಿಲ್ಲ

ನಮ್ಮ ದುರದೃಷ್ಟ, ನಮ್ಮ ಶಿಕ್ಷಣಕ್ಕೂ ಪರಿಸ್ಥಿತಿಗೂ ಸಂಬಂಧವೇ ಇಲ್ಲ. ಎಲ್ಲೋ ಒಂದು ಹಿಡಿ ಹುಡುಗರು ಮತ್ತು ಹುಡುಗಿಯರು ಈ ವಿದ್ಯೆ ಪಡೆಯುತ್ತಾರೆ. ಅವರ ಪರಿಸ್ಥಿತಿಯ ಮೇಲೂ ಶಿಕ್ಷಣ ಪ್ರಭಾವ ಬೀರದು.[೪]

ಎಷ್ಟೇ ಸದುದ್ದೇಶ್ಯವಿದ್ದರೂ ಇಂಗ್ಲೀಷರಿಗೇನು ಬೇಕೋ ಹಿಂದುಸ್ಥಾನಕ್ಕೇನು ಬೇಕೋ ಆ ವ್ಯತ್ಯಾಸ ಇಂಗ್ಲೀಷ್ ಉಪಾಧ್ಯಾಯರಿಗೆ ಪೂರ್ಣವಾಗಿ ಅರ್ಥವಾಗಲಿಲ್ಲ. ನಮ್ಮ ಹವಾಗುಣಕ್ಕೆ ಅವರಿಗೆ ಬೇಕಾಗುವ ಕಟ್ಟಡಗಳು ಬೇಡ. ಅಲ್ಲದೆ, ಪ್ರಧಾನವಾಗಿ ಗ್ರಾಮ ಪರಿಸರಗಳಲ್ಲಿ ಬೆಳೆದ ನಮ್ಮ ಹುಡುಗರಿಗೆ ಪಟ್ಟಣಗಳಲ್ಲಿ ಬೆಳೆದ ಇಂಗ್ಲೀಷ್ ಹುಡುಗರಿಗೆ ಬೇಕಾದ ವಿದ್ಯಾಭ್ಯಾಸ ಪದ್ಧತಿ ಅಗತ್ಯವಲ್ಲ.

ಶಾಲೆಗೆ ಸೇರಿದರೆ ನಮ್ಮ ಹುಡುಗರಿಗೆ ಬೇಕಾದ್ದು ಹಲಗೆ ಬಳಪ ಪುಸ್ತಕ ಅಲ್ಲ; ತಾವು ಕೈಯಾರೆ ಹಿಡಿದು ಸುಲಭವಾಗಿ ಕೆಲಸಮಾಡಿ ಪ್ರಯೋಜನ ಪಡೆಯಬಹುದಾದ ಸರಳವಾದ ಹಳ್ಳಿಯ ಉಪಕರಣಗಳು. ಇದಕ್ಕೆ ಶಿಕ್ಷಣ ಕ್ರಮದಲ್ಲೇ ಒಂದು ಕ್ರಾಂತಿಯಾಗಬೇಕಾದೀತು. ಅಂಥ ಕ್ರಾಂತಿಯಾಗದಿದ್ದರೆ ಶಾಲೆಗೆ ಹೋಗುವ ವಯಸ್ಸಿನ ಪ್ರತಿಯೊಬ್ಬ ಮಗುವಿಗೂ ಶಿಕ್ಷಣ ದೊರೆಯಲು ಸಾಧ್ಯವಿಲ್ಲ.

ಈಗ ಸರಕಾರಿ ಶಾಲೆಗಳಲ್ಲಿ ಕೊಡುವ ಓದು ಬರೆಹ ಗಣಿತಗಳ ಜ್ಞಾನ

ಮಕ್ಕಳಿಗೆ ಮುಂದೆ ಬದುಕಿನಲ್ಲಿ ಏನೂ ಪ್ರಯೋಜನವಾಗದು ಎಂಬುದು ಎಲ್ಲರಿಗೂ ಒಪ್ಪಿಗೆ. ಒಂದು ವರ್ಷದೊಳಗೇ ಅದರಲ್ಲಿ ಹೆಚ್ಚುಪಾಲು ಮರೆತು ಹೋಗುತ್ತದೆ, ಉಪಯೋಗವಿಲ್ಲದೆ. ಹಳ್ಳಿಯ ಪರಿಸರದಲ್ಲಿ ಅದು ಬೇಕಾಗುವುದೇ ಇಲ್ಲ.

ಆದರೆ ಅವರ ನೆರೆಹೊರೆಗೆ ತಕ್ಕ ಯಾವುದಾದರೊಂದು ಉದ್ಯೋಗದ ಶಿಕ್ಷಣವನ್ನು ಕೊಟ್ಟರೆ ಮಕ್ಕಳಿಗೆ, ಶಾಲೆಗೆ ತಗಲುವ ವೆಚ್ಚವನ್ನೂ ಗಳಿಸಿ ಕೊಟ್ಟಾರು, ಮುಂದೆ ಬಾಳಿನಲ್ಲಿ ಆ ಶಿಕ್ಷಣ ಅವರಿಗೆ ಉಪಯೋಗಕ್ಕೆ ಬಂದೀತು. ಶಾಲೆಗೆ ಅಂಟಿಕೊಂಡು ಒಂದು ಹತ್ತಿಹೊಲ, ಅಲ್ಲಿ ನೂಲು ನೇಯುವ ಶಾಲೆ; ಅದು ಸಂಪೂರ್ಣವಾಗಿ ಸ್ವಾವಲಂಬಿಯಾದೀತೆಂದು ಊಹಿಸಬಲ್ಲೆ.

ನಾನು ವಿವರಿಸುತ್ತಿರುವ ಯೋಜನೆಯಲ್ಲಿ ಅಕ್ಷರ ಶಿಕ್ಷಣ ಇಲ್ಲದಿಲ್ಲ. ಓದು ಬರಹ ಗಣಿತ ಕಲಿಸದ ಪ್ರಾಥಮಿಕ ಶಿಕ್ಷಣದ ಯಾವ ಯೋಜನೆಯೂ ಪೂರ್ಣವೆನಿಸದು. ಇಷ್ಟೇ, ಹುಡುಗರು ಅಕ್ಷರಗಳನ್ನು ಸರಿಯಾಗಿ ಕಲಿಯಲು ಪಕ್ವವಾದಾಗ, ಕಟ್ಟಕಡೆಯ ವರ್ಷದಲ್ಲಿ ಓದುಬರಹದ ಸರದಿ ಬರುತ್ತದೆ. ಬರವಣಿಗೆ ಹಸ್ತಲೇಖನ ಒಂದುಕಲೆ. ಒಂದೊಂದು ಅಕ್ಷರವನ್ನೂ ಸರಿಯಾಗಿ ಚಿತ್ರಿಸಬೇಕು. ಕಲೆಗಾರ ಚಿತ್ರ ಬರೆಯುವ ಹಾಗೆ. ಮೊಟ್ಟಮೊದಲು ಸರಳ ಪ್ರಾಥಮಿಕ ಲೇಖನ ಕಲೆಯನ್ನು ಮಕ್ಕಳಿಗೆ ಕಲಿಸಿದರೆ ಇದು ಸಾಧ್ಯ. ದಿನದಲ್ಲಿ ಹೆಚ್ಚುಕಾಲ ಉದ್ಯೋಗ ಶಿಕ್ಷಣ. ಅದರ ಜೊತೆಗೆ ಪ್ರಾಥಮಿಕ ಚರಿತ್ರೆ ಭೂಗೋಳ ಗಣಿತಗಳ ಬಾಯಿಪಾಠ. ಹುಡುಗರು ನಡೆನುಡಿ ಕಲಿತಾರು. ಸಫಾಯಿ-ಸ್ವಚ್ಛತೆಗಳ ಬಗ್ಗೆ ಪ್ರತ್ಯಕ್ಷ ಕ್ರಿಯಾಪಾಠವನ್ನೂ ಕಲಿತಾರು; ಇದನ್ನೆಲ್ಲ ಮನೆಗಳಿಗೆ ಒಯ್ದು ಮೌನವಾದ ರೀತಿಯಲ್ಲಿ ಮನೆಯಲ್ಲಿ ಕ್ರಾಂತಿ ಮಾಡಿಯಾರು.*

೩

# ಗುಣವಿಕಾಸ

## ಹೃದಯದ ಶಿಕ್ಷಣ

ಹೃದಯದ ಶಿಕ್ಷಣದ ಬಗ್ಗೆ ಒಂದೇ ಮಾತು. ಪುಸ್ತಕಗಳ ಮೂಲಕ ಇದನ್ನು ಕಲಿಸಲು ಸಾಧ್ಯವಲ್ಲವೆಂದು ನನ್ನ ನಂಬಿಕೆ. ಶಿಕ್ಷಕನ ಸಜೀವ ಸಂಸ್ಪರ್ಶದಿಂದ ಮಾತ್ರ ಸಾಧ್ಯ. ಪ್ರಾಥಮಿಕ ಶಾಲೆಗಳ, ದ್ವಿತೀಯ ಶಾಲೆಗಳ ಶಿಕ್ಷಕ-

ರಾದರೂ ಯಾರು. ಶ್ರದ್ಧೆ-ಚಾರಿತ್ರ್ಯ ಇದ್ದವರೆ? ಅವರಿಗೆ ಆಗಿದೆಯೆ ಹೃದಯ ಪರಿಪಾಕದ ಶಿಕ್ಷಣ; ತಮ್ಮ ಕೈಯೊಳಗಿನ ವಿದ್ಯಾರ್ಥಿಗಳಲ್ಲಿರುವ ಶಾಶ್ವತ ಅಂಶದ ಕಡೆ ಗಮನ ಕೊಡಬೇಕು ಅವರು ಎಂಬುದೇನಾದರೂ ಇದೆಯೆ? ಈ ಕೆಳಗಿನ ಶಾಲೆಗಳಿಗೆ ಶಿಕ್ಷಕರನ್ನು ಆರಿಸುವ ಪದ್ಧತಿಯೇ ಚಾರಿತ್ರ್ಯ ವಿರೋಧಿಯಲ್ಲವೆ? ಅವರಿಗೆ ಜೀವನ ನಿರ್ವಹಣದ ಪೂರ್ತಿಗಾದರೂ ಕೊಡುತ್ತಾರೆಯೆ? ದೇಶಭಕ್ತರು ಎಂದು ಪ್ರಾಥಮಿಕ ಶಾಲಾ ಶಿಕ್ಷಕರನ್ನು ಆರಿಸುವುದಿಲ್ಲ. ಬೇರೇನೂ ಚಾಕರಿ ಸಿಗದುದರಿಂದ ಇಲ್ಲಿಗೆ ಬರುತ್ತಾರೆ, ಅಷ್ಟೇ.[೬]

## ಶಿಸ್ತಿನಲ್ಲಿ ಸ್ವಾತಂತ್ರ್ಯ

ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯವಿರಬೇಕು. ಬರೀ ಅನುಕರಣಶೀಲರಾಗ ಬಾರದು; ಸ್ವಂತವಾಗಿ ಆಲೋಚನೆ ಮಾಡಿ ಕೆಲಸ ಮಾಡಲು ಕಲಿಯಬೇಕು. ಆದರೂ ಸಂಪೂರ್ಣ ವಿಧೇಯರಾಗಿರಬೇಕು, ಶಿಸ್ತಿನಿಂದ ಇರಬೇಕು. ಅತ್ಯುನ್ನತ ಸ್ವಾತಂತ್ರ್ಯದಲ್ಲಿ ಅತ್ಯಂತ ವಿನಯ-ಶಿಸ್ತುಗಳು ಅಡಗಿಯೆ ಇರುತ್ತವೆ. ಶಿಸ್ತು-ವಿನಯಗಳಿಂದ ಬಂದ ಸ್ವಾತಂತ್ರ್ಯಕ್ಕೆ ನಿರಾಕರಣೆಯಿಲ್ಲ. ಸಂಯಮರಹಿತವಾದ ಸ್ವೈರವೃತ್ತಿ ಅಧಮತೆಯ ಲಕ್ಷಣ; ಅದರಿಂದ ತನಗೂ ಹಾನಿ, ನೆರೆಯವರಿಗೂ ಹಾನಿ.[೭]

## ಹೃದಯಶುದ್ಧಿ ಅನಿವಾರ್ಯ

ಶುದ್ಧವಾದ ಶಿಕ್ಷಣಕ್ರಮಕ್ಕೆ ಹೃದಯ ಪರಿಶುದ್ಧಿ ಅಪರಿಹಾರ್ಯವಾದ ನಿಯಮ. ಸಾವಿರಾರು ವಿದ್ಯಾರ್ಥಿಗಳನ್ನು ನೋಡಿದೇನೆ, ಅವರೊಡನೆ ನಿರಂತರವೂ ಪತ್ರವ್ಯವಹಾರ ಮಾಡುತ್ತೇನೆ, ತಮ್ಮ ಭಾವನೆಗಳಿಗೆಲ್ಲ ನನ್ನ ಬಳಿ ತೋಡಿಕೊಳ್ಳುತ್ತಾರೆ. ಇದರಿಂದ ಬಯಸಬೇಕಾದ್ದು ಇನ್ನೂ ಬಹಳ ಇವೆ ಎಂದು ಸ್ಪಷ್ಟವಾಗಿ ತಿಳಿದುಬಂದಿದೆ. ನನ್ನ ಅಭಿಪ್ರಾಯ ನಿಮಗೆ ಅರ್ಥವಾಗಿರಬೇಕು. ನಮ್ಮಲ್ಲಿ ವಿದ್ಯಾರ್ಥಿ ಎನ್ನುವುದಕ್ಕೆ ಒಂದು ಸುಂದರ ಶಬ್ದ ಇದೆ—**ಬ್ರಹ್ಮಚಾರಿ.** ವಿದ್ಯಾರ್ಥಿ ಶಬ್ದ ಬ್ರಹ್ಮಚಾರಿ ಶಬ್ದಕ್ಕೆ ಸಮನಲ್ಲ, ಸರಿಯಾದ ಪ್ರತಿಶಬ್ದವಲ್ಲ. ಬ್ರಹ್ಮಚಾರಿ ಎಂದರೆ ದೇವರನ್ನು ಅರಸುವವನು, ಆದಷ್ಟು ಅತ್ಯಲ್ಪ ಕಾಲದಲ್ಲಿ ಭಗವಂತನ ಸಮೀಪಕ್ಕೆ ಸಾರುವಂತೆ ನಡೆದುಕೊಳ್ಳುವವನು. ಉಳಿದಷ್ಟರಲ್ಲಿ ಎಷ್ಟೇ ಭೇದವಿರಲಿ, ಅಶುದ್ಧ ಹೃದಯದ ಮನುಷ್ಯ ದೇವರ ಧವಳ ಸಿಂಹಾಸನದ ಮುಂದೆ

ಬಂದು ನಿಲ್ಲಲಾರ ಎಂಬುದರಲ್ಲಿ ಎಲ್ಲ ಧರ್ಮಗಳೂ ಒಂದೇ ಅಭಿಪ್ರಾಯ. ಎಷ್ಟೇ ಪಾಂಡಿತ್ಯವಿರಲಿ, ಎಷ್ಟೇ ವೇದಾಭ್ಯಾಸ ಮಾಡಿರಲಿ, ಸಂಸ್ಕೃತ ಪಾಂಡಿತ್ಯ, ಲ್ಯಾಟಿನ್ ಗ್ರೀಕ್ ಪಾಂಡಿತ್ಯ, ಯಾವುದೇ ಇರಲಿ ಹೃದಯ ಪರಿಶುದ್ಧಿಯನ್ನು ಕಲಿಸದಿದ್ದರೆ ಎಲ್ಲವೂ ವ್ಯರ್ಥವೇ. ಎಲ್ಲ ಜ್ಞಾನದ ಗುರಿಯೂ ಚಾರಿತ್ರ್ಯವರ್ಧನ.೮

## ಸೇವೆ ಶಿಕ್ಷಣದ ಅಂಗ

ಕೇವಲ ಪುಸ್ತಕ ಪಾಂಡಿತ್ಯವನ್ನೇ ದೊಡ್ಡದು ಮಾಡುವ ನಮ್ಮ ಶಿಕ್ಷಣದ ದ್ವೇಷವನ್ನು ಎತ್ತಿ ತೋರಿಸಿದಾರೆ ಶ್ರೀ ವಿಶ್ವೇಶ್ವರಯ್ಯನವರು. ಅದಕ್ಕಿಂತಲೂ ಹೆಚ್ಚಿನ ದೋಷ ಇನ್ನೊಂದಿದೆ. ಆ ದೋಷ ವಿದ್ಯಾಭ್ಯಾಸ ಮಾಡುವಾಗ ಎಂಥ ಅಲ್ಪವಾದದ್ದಾಗಲಿ ತಾತ್ಕಾಲಿಕವಾದದ್ದಾಗಲಿ ಸೇವೆ ಮಾಡಬಾರದು ಎಂಬುದು. ಅದರಿಂದ ವಿದ್ಯಾಭ್ಯಾಸಕ್ಕೆ ಧಕ್ಕೆ ಬರುತ್ತದೆ ಎಂದು ವಿದ್ಯಾರ್ಥಿಗಳಿಗೆ ಕಲಿಸಿದ್ದಾರೆ. ಪುಸ್ತಕ ಶಿಕ್ಷಣವಾಗಲಿ, ಉದ್ಯೋಗ ಶಿಕ್ಷಣವಾಗಲಿ, ನಾಲ್ಕು ದಿನ ನಿಲ್ಲಿಸಿ, ಗುಜರಾತಿನ ವಿದ್ಯಾರ್ಥಿಗಳು ಈಗ ಮಾಡುತ್ತಿರುವ ಹಾಗೆ ಸೇವಾಕಾರ್ಯವನ್ನು ಮಾಡಿದರೆ ನಷ್ಟ ಎಳ್ಳಷ್ಟೂ ಇಲ್ಲ; ಲಾಭವೇ ಉಂಟು. ಸಮಸ್ತ ಶಿಕ್ಷಣದ ಸಮಾಪ್ತಿಯೂ ಸೇವೆಯಲ್ಲೇ. ವಿದ್ಯಾಭ್ಯಾಸ ಮಾಡುವಾಗಲೇ ಸೇವೆಯ ಅವಕಾಶ ದೊರೆತರೆ ಅದನ್ನು ಅಪೂರ್ವ ಅವಕಾಶವೆಂದು ತಿಳಿಯಬೇಕು. ಶಿಕ್ಷಣ ನಿಂತಿತೆಂದು ತಿಳಿಯಬಾರದು, ಅದು ಪೂರ್ಣವಾಗುತ್ತದೆ ಎಂದು ತಿಳಿಯಬೇಕು.೯

ನಿನ್ನೊಳಗಿನ ಉತ್ತಮ ಅಂಶವನ್ನು ಹೊರಗೆಳೆಯುವುದೇ ನಿಜವಾದ ಶಿಕ್ಷಣ. ಮಾನವತೆಗಿಂತ ಹೆಚ್ಚಿನ ಗ್ರಂಥವುಂಟೆ? ದಿನವೂ ಹರಿಜನಕೇರಿಗೆ ಹೋಗಿ ಅವರನ್ನು ಮಾನವ ಕುಟುಂಬದ ಸಹಜೀವಿಗಳಂತೆ ತಿಳಿಯುವುದಕ್ಕಿಂತ ಹೆಚ್ಚಿನ ವಿದ್ಯಾಭ್ಯಾಸವೆ? ಉದ್ಧಾರ ಮಾಡುವ, ಉನ್ನತಿಗೇರಿಸುವ ಶಿಕ್ಷಣ ಅದು. ನನ್ನ ಪಂಥ ಸಂಕುಚಿತವಾದದ್ದಲ್ಲ, ಮಾನವ ಭ್ರಾತೃತ್ವವನ್ನು ಸಾಧಿಸುವುದು.೧೦

## ಮೇಡಂ ಮಾಂಟಿಸೋರಿಗೆ

ಮಕ್ಕಳ ಮೇಲಿನ ಪ್ರೀತಿಗಾಗಿ ಅನೇಕ ಸಂಸ್ಥೆಗಳ ಮೂಲಕ ನೀವು ಮಕ್ಕಳಿಗೆ ಶಿಕ್ಷಣ ಕೊಡಲು ಯತ್ನಿಸುತ್ತಿದೀರಿ, ಅವರೊಳಗಿನ ಉತ್ತಮೋತ್ತಮ ಅಂಶವನ್ನು ಹೊರಸೆಳೆಯ ಬಯಸುತ್ತಿದೀರಿ. ಈ ಶಿಕ್ಷಣ, ಭಾಗ್ಯವಂತರ ಮಕ್ಕಳಿ

ಗಲ್ಲದೆ ಬಡವರ ಮಕ್ಕಳಿಗೂ ಸಿಗುವಂತಾಗಲಿ ಎನ್ನುತ್ತೇನೆ. ನೀವು ಹೇಳಿದ್ದು ನಿಜ: ಲೋಕದಲ್ಲಿ ನಿಜವಾಗಿ ಶಾಂತಿ ನೆಲೆಗೊಳ್ಳಬೇಕಾದರೆ, ಯುದ್ಧವನ್ನು ಕೊನೆಗಾಣಿಸಲು ಯುದ್ಧ ಹೂಡಬೇಕೆಂದರೆ, ಮಕ್ಕಳಿಂದ ಪ್ರಾರಂಭಿಸಬೇಕು; ಅವರು ತಮ್ಮ ಸಹಜ ಮುಗ್ಧಮಾಧುರ್ಯದಲ್ಲಿ ಬೆಳೆದರೆ ನಮಗೆ ಯುದ್ಧವೂ ಇರದು ನಿಷ್ಫಲವಾದ ಬರೀ ಗಾಳಿ ಮಾತಿನ ತೀರ್ಮಾನಗಳನ್ನು ಮಾಡಬೇಕಾದ್ದೂ ಇಲ್ಲ; ಪ್ರೀತಿ ಶಾಂತಿಗಳಲ್ಲಿ ಮುನ್ನಡೆ ನಡೆದು, ಇಡೀ ಲೋಕವೇ ತಿಳಿದೋ ತಿಳಿಯದೆಯೋ ಬಯಸುತ್ತಿರುವ ಶಾಂತಿ-ಪ್ರೇಮಗಳು ಜಗತ್ತನ್ನೆಲ್ಲಾ ಆವರಿಸಿಯಾವು.೧೧

## ಬರೀ ಗಿಳಿಪಾಠ ಬೇಡ

ಏನು ಗ್ರಹಿಸಬೇಕೋ ಏನು ಬಿಡಬೇಕೋ ವಿದ್ಯಾರ್ಥಿಗಳಿಗೆ ತಿಳಿದಿರಬೇಕು, ಈ ವಿವೇಚನೆಯನ್ನು ಶಿಕ್ಷಣ ಕಲಿಸಬೇಕು, ಈ ವಿವೇಚನೆಯಲ್ಲದೆ ಎಲ್ಲವನ್ನೂ ತುರುಕಿದರೆ ಯಂತ್ರಗಳಿಗಿಂತ ಕಡೆ ಆಗುತ್ತೇವೆ. ವಿಚಾರ ಮಾಡುವ, ಅರಿತುಕೊಳ್ಳುವ ಜೀವಿಗಳು ನಾವು, ಸತ್ಯಾಸತ್ಯಗಳ ಭೇದ, ಮಧುರ-ಕಟು ಭಾಷೆಗಳ ಭೇದ, ರುಚಿ ಅಶುಚಿಗಳ ವ್ಯತ್ಯಾಸ ಇತ್ಯಾದಿಗಳನ್ನು ಅರಿಯಲೇಬೇಕು. ಆದರೆ ಈಗಿನ ವಿದ್ಯಾರ್ಥಿಗಳಿಗೆ ಒಳ್ಳೆಯದು-ಕೆಟ್ಟದು ಯಾವುದು ಎಂದು ಅರಿತುಕೊಳ್ಳುವುದು ಸಾಲದು. ಇನ್ನೂ ಹೆಚ್ಚು ಕಷ್ಟಗಳಿವೆ. ಋಷಿಗಳು ಶಿಷ್ಯರಿಗೆ ಗ್ರಂಥಗಳಿಲ್ಲದೆಯೆ ಹೇಳಿಕೊಟ್ಟರು. ಒಂದೆರಡು ಮಂತ್ರಗಳನ್ನು ಉಪದೇಶ ಮಾಡುತ್ತಿದ್ದರು. ಅವನ್ನು ನೆನಪಿಟ್ಟು ಪ್ರತ್ಯಕ್ಷ ಆಚರಣೆಯಲ್ಲಿ ಮಾಡಿಸುತ್ತಿದ್ದರು ಶಿಷ್ಯರು. ಇಂದಿನ ವಿದ್ಯಾರ್ಥಿಯಾದರೋ ಉಸಿರುಕಟ್ಟಿಸುವಷ್ಟು ಪುಸ್ತಕ ರಾಶಿಯ ನಡುವೆ ಇರುತ್ತಾನೆ.೧೨

ಪಠ್ಯಪುಸ್ತಕಗಳು ಎಷ್ಟು ಹೆಚ್ಚಿದರೆ ಅಷ್ಟು ಹೆಚ್ಚುಮಂದಿ ಹಳ್ಳಿಯ ಹುಡುಗರಿಗೆ ವಿದ್ಯೆಯಿಲ್ಲದೆ ಹೋಗುತ್ತದೆ. ಆದ್ದರಿಂದ ಹಿಂದುಸ್ತಾನದಲ್ಲಿ ಪಠ್ಯಪುಸ್ತಕಗಳು, ಅದರಲ್ಲೂ ಕೆಳಗಿನ ತರಗತಿಗಳಿಗೆ, ವಿಧ್ಯಾರ್ಥಿಗಳಿಗಲ್ಲ– ಶಿಕ್ಷಕರಿಗೇ. ಪ್ರಾಥಮಿಕ ಶಿಕ್ಷಣವನ್ನೆಲ್ಲ ಮಕ್ಕಳಿಗೆ ಶ್ರವಣದ ಮೂಲಕ ಹೇಳಿಕೊಟ್ಟರೆ ಒಳ್ಳೆಯದೋ ಏನೋ ಹೇಳಲಾರೆ. ಎಳೆಯ ಮಕ್ಕಳಿಗೆ ಅಕ್ಷರ ಹೇಳಿಕೊಟ್ಟು, ಸಾಮಾನ್ಯ ಜ್ಞಾನ ಬರುವ ಮೊದಲೇ ಅವರನ್ನು ಓದಲು ಹಚ್ಚಿದರೆ, ಮಕ್ಕಳು ಇನ್ನೂ ಎಳೆಯತನದಲ್ಲಿರುವಾಗಲೇ ಬಾಯಿಂದ ಹೇಳಿದ್ದನ್ನು ಗ್ರಹಿಸುವ ಶಕ್ತಿಯನ್ನು ನಷ್ಟಗೊಳಿಸಿದಂತಾಗುತ್ತದೆ. ತಾನೇ ಓದಿಕೊಳ್ಳಲು

ಸಾಮರ್ಥ್ಯ ಬರುವವರೆಗೂ ಏಳುವರ್ಷದ ಮಗು ರಾಮಾಯಣವನ್ನು ಕಲಿಯದೆ ಇರಬೇಕೆ? ಹಿಂದುಸ್ಥಾನದ ಕೆಲವು ಲಕ್ಷ ಪಟ್ಟಣಗಳ ಜನರ ಮಾತೇ ಬೇರೆ, ಗ್ರಾಮೀಣ ಭಾರತದ ಕೋಟ್ಯಂತರ ಜನರ ವಿಷಯವನ್ನು ಯೋಚಿಸಿದರೆ ಸಿಗುವ ಉತ್ತರವೇ ಬೇರೆ.೧೩

ಸಾರ್ವಜನಿಕ ಶಾಲೆಗಳಲ್ಲಿ ಮಕ್ಕಳಿಗೆ ಇಟ್ಟಿರುವ ಪಠ್ಯಪುಸ್ತಕಗಳು ಹಾನಿಕರವಲ್ಲದಿದ್ದರೂ ಬಹುಮಟ್ಟಿಗೆ ನಿಷ್ಪ್ರಯೋಜಕ. ನನಗಂತೂ ಇದರಲ್ಲಿ ಸಂದೇಹವಿಲ್ಲ. ಅನೇಕ ಪುಸ್ತಕಗಳನ್ನು ಜಾಣತನದಿಂದ ಬರೆದಿದ್ದಾರೆ, ನಿಜ. ಅದನ್ನು ಯಾರಿಗಾಗಿ ಬರೆದಿದ್ದಾರೋ ಯಾವ ವಾತಾವರಣಕ್ಕೋ ಆ ಜನರಿಗೆ ಅದು ಸರಿಹೋದೀತು. ಆದರೆ ಅವನ್ನು ಹಿಂದುಸ್ಥಾನದ ಹುಡುಗರು ಮತ್ತು ಹುಡುಗಿಯರಿಗಾಗಿ ಬರೆದಿಲ್ಲ. ಹಿಂದುಸ್ಥಾನದ ವಾತಾವರಣಕ್ಕಾಗಿಯೂ ಬರೆದಿಲ್ಲ. ಹೀಗೆ ಬರೆದಿದ್ದು ಅಸಹ್ಯವಾದ ಅನುಕರಣ. ವಿದ್ಯಾರ್ಥಿಗಳಿಗೆ ಅಗತ್ಯವಾದ್ದಂತೂ ಅಲ್ಲ. ಈ ದೇಶದಲ್ಲಿ ಪ್ರಾಂತಪ್ರಾಂತಕ್ಕೂ ವರ್ಗವರ್ಗಕ್ಕೂ ಭೇದವಿದೆ. ಹರಿಜನರಮಕ್ಕಳ ಅಗತ್ಯ, ಪ್ರಾರಂಭದಲ್ಲಿ, ಉಳಿದವರ ಅಗತ್ಯಕ್ಕಿಂತ ಬೇರೆಯೇ.

ಆದ್ದರಿಂದ ಪುಸ್ತಕ ಬೇಕಾದ್ದು ವಿದ್ಯಾರ್ಥಿಗಳಿಗಲ್ಲ, ಶಿಕ್ಷಕರಿಗೇ ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ಪ್ರತಿಯೊಬ್ಬ ಶಿಕ್ಷಕನೂ ವಿದ್ಯಾರ್ಥಿಗಳ ಬಗೆಗೆ ತನ್ನ ಕರ್ತವ್ಯವನ್ನು ಪೂರ್ಣವಾಗಿ ಎಸಗಬೇಕಾದರೆ ತನಗೆ ಲಭ್ಯವಾದ ಸಾಮಗ್ರಿಯಿಂದ ದಿನದ ಪಾಠವನ್ನು ಅಣಿಮಾಡಿಕೊಳ್ಳಬೇಕು. ಅದನ್ನು ತನ್ನ ತರಗತಿಯ ವಿಶೇಷ ಅಗತ್ಯಕ್ಕೆ ತಕ್ಕಂತೆ ಅಳವಡಿಸಬೇಕು.

ವಿದ್ಯೆಕಲಿತ ಹುಡುಗ ಹುಡುಗಿಯರ ಉತ್ತಮ ಗುಣವನ್ನು ಅರಳಿಸಬೇಕು ನಿಜವಾದ ಶಿಕ್ಷಣ. ಅನಗತ್ಯವೂ ಸಾರರಹಿತವೂ ಆದ ವಿಷಯಗಳನ್ನು ಮಕ್ಕಳ ತಲೆಯೊಳಕ್ಕೆ ತುರುಕಿದರೆ ಈ ಕೆಲಸ ಆಗದು. ಅವರ ಸ್ವಂತ ಪ್ರತಿಭೆಯನ್ನು ಅದುಮಿಹಾಕುವ ಭಾರವಾಗುತ್ತದೆ ಅದು. ಅವರನ್ನು ಬರೀಯಂತ್ರಗಳಂತೆ ಮಾಡುತ್ತದೆ. ನಾವೇ ಈ ಪದ್ಧತಿಗೆ ಬಲಿಯಾಗಿದ್ದೇವೆ. ಇಲ್ಲದಿದ್ದರೆ ಹಿಂದುಸ್ಥಾನಕ್ಕೆ ಹೀಗೆ ಸಾಮೂಹಿಕ ಶಿಕ್ಷಣವನ್ನು ಕೊಡುವ ಆಧುನಿಕ ಪದ್ಧತಿಯ ಅನರ್ಥವನ್ನು ಎಂದೋ ತಿಳಿದುಕೊಳ್ಳುತ್ತಿದ್ದೆವು.

ಹಲವಾರು ಸಂಸ್ಥೆಗಳು ತಮ್ಮಸ್ವಂತ ಪಠ್ಯಪುಸ್ತಕಗಳನ್ನು ಸಿದ್ಧಮಾಡಿವೆ. ಹೆಚ್ಚುಕಡಿಮೆ ಸಫಲವಾಗಿವೆ. ಆದರೆ ದೇಶದ ಪ್ರಾಣಕ್ಕೆ ಯಾವುದು ಅಗ

ತ್ಯವೋ ಅದು ಅದರಲ್ಲಿಲ್ಲ.

ನಾನು ಇಲ್ಲಿ ಹೇಳಿರುವ ಅಭಿಪ್ರಾಯವು ನನ್ನ ಸ್ವಂತದ್ದೇನೂ ಅಲ್ಲ. ಬಹಳ ದೊಡ್ಡ ಹೊಣೆ ಹೊತ್ತಿರುವ ರಾಷ್ಟ್ರೀಯ ಶಾಲೆಗಳ ವ್ಯವಸ್ಥಾಪಕರಿಗಾಗಿ ಶಿಕ್ಷಕರಿಗಾಗಿ ಇಲ್ಲಿ ಉಲ್ಲೇಖಮಾಡಿದ್ದೇನೆ. ಅವರು ಹೀಗೆ ಆರಿಸಿದ ಪಠ್ಯಪುಸ್ತಕದ ಗಿಳಿಪಾಠ ಮಾಡಿಸಿ, ಉದಾಸೀನತೆಯಿಂದ ಯಾಂತ್ರಿಕವಾಗಿ ತಮ್ಮ ಕೈಯಲ್ಲಿರುವ ಮಕ್ಕಳಿಗೆ ವಿದ್ಯೆ ಕಲಿಸಿದರೆ ಸಾಲದು; ಅವರು ದೊಡ್ಡ ಹೊರೆ ಹೊತ್ತಿದ್ದಾರೆ. ಅವರು ಧೈರ್ಯವಾಗಿ, ಪ್ರಾಮಾಣಿಕವಾಗಿ ಬುದ್ಧಿಪೂರ್ವಕವಾಗಿ ಅದನ್ನು ನಿರ್ವಹಿಸಬೇಕು.

ಈ ಕೆಲಸ ಕಷ್ಟ. ಆದರೆ ಶಿಕ್ಷಕ ಪೂರ್ಣಹೃದಯದಿಂದ ಈ ಕೆಲಸ ಮಾಡಿದರೆ ಅಂಥ ಕಷ್ಟವೇನಲ್ಲ. ಮಕ್ಕಳಿಗೆ ತಾನು ತಂದೆಯಾಗಬೇಕು. ಆಗ ಅವರಿಗೆ ಏನು ಬೇಕೋ ತಿಳಿಯುತ್ತದೆ. ಅದನ್ನು ಅವರಿಗೆ ನೀಡಬೇಕು. ಅದು ತನಗೆ ತಿಳಿದಿರದಿದ್ದರೆ ತಿಳಿದುಕೊಳ್ಳಲು, ಯತ್ನಿಸಬೇಕು, ಹುಡುಗರಿಗೆ ಏನು ಅಗತ್ಯವೋ ಅದನ್ನು ಕಲಿಸಬೇಕು ಎಂಬುದನ್ನು ಒಪ್ಪಿದೇವೆ. ಅದಕ್ಕೆ ವಿಶೇಷ ಜಾಣತನವೂ ಬೇಕಾಗಿಲ್ಲ, ಪಾಂಡಿತ್ಯವೂ ಬೇಕಾಗಿಲ್ಲ.

ಅಲ್ಲದೆ, ಸಮಸ್ತ ಶಿಕ್ಷಣದ ಪ್ರಥಮೋದ್ದೇಶ್ಯ ವಿದ್ಯಾರ್ಥಿಗಳ ಚಾರಿತ್ರ್ಯವೃದ್ಧಿ ಎಂಬುದು ನೆನಪಿದ್ದರೆ, ಗುಣವಂತನಾದ ಶಿಕ್ಷಕ ಅಧೈರ್ಯ ಪಡಬೇಕಾಗಿಲ್ಲ.[೧೪]

## ೪

## ಸ್ವಾವಲಂಬನ—ಶ್ರಮಪ್ರತಿಷ್ಠೆ

ಗುರುಕುಲದ ಹುಡುಗರು ಸ್ವಾವಲಂಬಿಗಳೂ ಸ್ವಸಂಪೂರ್ಣರೂ ಆಗಬೇಕೆಂದರೆ ಅವರಿಗೆ ಒಳ್ಳೇ ಔದ್ಯೋಗಿಕ ಶಿಕ್ಷಣ ಬೇಕು. ನಮ್ಮ ದೇಶದಲ್ಲಿ ಶೇ. ೮೫ ಜನ ಬೇಸಾಯಗಾರರು. ಶೇ. ೧೦ ರೈತರ ಅಗತ್ಯಗಳನ್ನು ಪೂರಯಿಸುವವರು. ಆದ್ದರಿಂದ ನಮ್ಮ ಹುಡುಗರಿಗೆ ಬೇಸಾಯ-ನೇಯ್ಗೆಗಳ ಜ್ಞಾನ ಸಾಕಷ್ಟು ಇರುವುದು ಅಗತ್ಯ. ಉಪಕರಣಗಳನ್ನು ಹೇಗೆ ಬಳಸಬೇಕೋ, ಗೊತ್ತಿದ್ದರೆ, ಒಂದು ಹಲಗೆಯನ್ನು ನೆಟ್ಟಗೆ ಕೊಯ್ಯಲು ಬಂದರೆ, ಮಟ್ಟ ಸರಿಯಾಗಿಲ್ಲದೆ ಕೆಳಗೆ ಉರುಳುವಂಥದಲ್ಲದೆ ನೇರಾಗಿ ನಿಲ್ಲಬಲ್ಲ ಗೋಡೆಯನ್ನು ಕಟ್ಟಲುಬಂದರೆ, ವಿದ್ಯಾರ್ಥಿಗೆ ನಷ್ಟವೇನಿಲ್ಲ. ಇಂಥದರಲ್ಲಿ ದಕ್ಷನಾದ ಹುಡುಗ ಜೀವನ ಸಂಗ್ರಾಮದಲ್ಲಿ ನಿಸ್ಸಹಾಯನಾಗಲಾರ, ಉದ್ಯೋಗಹೀನನಾಗಿರಲಾರ. ಆರೋಗ್ಯ

ನೈರ್ಮಲ್ಯಗಳ ನಿಯಮಗಳ ಜ್ಞಾನ, ಶಿಶುಪಾಲನೆಯ ಕಲೆಗಳೂ ಗುರುಕುಲದ ವಿದ್ಯಾರ್ಥಿಗಳ ಪಾಠಗಳಲ್ಲಿರಬೇಕು. ಮೊನ್ನೆಯ ಜಾತ್ರೆಯಲ್ಲಿ ಸಫಾಯಿಯ ವ್ಯವಸ್ಥೆ ಸಮರ್ಪಕವಾಗಿರಲಿಲ್ಲ. ನೊಣಗಳ ಹಾವಳಿಯೇ ಅದಕ್ಕೆ ಸಾಕ್ಷಿ. ಈ ಅದಮ್ಯ ಸಫಾಯಿ ಪರೀಕ್ಷಕರು ನಿಮ್ಮ ಸಫಾಯಿ ಸರಿಯಾಗಿಲ್ಲವೆಂದು ಸದಾ ಎಚ್ಚರಿಕೆ ಕೊಡುತ್ತಿದ್ದರು. ಜಾತ್ರೆಗೆ ಬರುವ ಜನರಿಗೆ ನೈರ್ಮಲ್ಯದ ಬಗ್ಗೆ ಪ್ರತ್ಯಕ್ಷ ಪಾಠವನ್ನು ತಿಳಿಸುವ ಒಳ್ಳೇ ಸಂದರ್ಭವನ್ನು ನಾವು ಕಳೆದುಕೊಂಡೆವು. ಈ ಕೆಲಸವನ್ನು ನಮ್ಮ ಹುಡುಗರಿಂದ ಮೊದಲು ಮಾಡಿಸಬೇಕು. ಜಾತ್ರೆಯಲ್ಲಿ ಮುನ್ನೂರು ಮಂದಿ ಸಫಾಯಿ ಶಿಕ್ಷಕರಾಗುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಹುಡುಗರು ಐರೋಪ್ಯ ವೇಷವನ್ನು ಆಧುನಿಕ ಅಲಂಕಾರಗಳನ್ನು ಅನುಕರಿಸದಂತೆ ದೊಡ್ಡವರು ನೋಡಿಕೊಳ್ಳಬೇಕು. ಮುಂದೆ ಬಾಳಿನಲ್ಲಿ ಇವು ಅವರಿಗೆ ಬಹಳ ಬಾಧಕವಾಗುತ್ತವೆ. ಬ್ರಹ್ಮಚರ್ಯಕ್ಕಂತೂ ವಿರುದ್ಧ. ನಮ್ಮೆಲ್ಲರಿಗೂ ಇರುವ ವಿಕಾರಗಳನ್ನು ಗೆಲ್ಲುವುದೇ ಅವರಿಗೆ ಸಾಕಾಗುತ್ತದೆ. ಅದಕ್ಕೆ ಇವನ್ನು ಬೇರೆ ಸೇರಿಸಬೇಕೆ ?

ನಾವು ಏಕೆ ಕೈಯಾರೆ ದುಡಿಯಬೇಕು ? ಅದು ಅವಿದ್ಯಾವಂತರ ಕೆಲಸ ಎಂದೀರಿ. ನಾವು ಸಾಹಿತ್ಯಾಧ್ಯಯನ ಮಾಡುತ್ತೇವೆ, ಪುಸ್ತಕ ಓದುತ್ತೇವೆ ಎಂದೀರಿ. ಶ್ರಮದ ಗೌರವವನ್ನು ನಾವು ಅರಿತುಕೊಳ್ಳಬೇಕು. ಒಬ್ಬ ನಾಯಿಂದನೋ ಚಮ್ಮಾರನೋ ಕಾಲೇಜಿನಲ್ಲಿ ಓದಿದರೆ ಅವನು ತನ್ನ ಕಸಬನ್ನು ಬಿಡಬೇಕಾಗಿಲ್ಲ. ವೈದ್ಯನ ವೃತ್ತಿ ಎಷ್ಟು ಒಳ್ಳೆಯದೋ ನಾಯಿಂದನ ವೃತ್ತಿಯೂ ಅಷ್ಟೇ ಒಳ್ಳೆಯದು, ಎಂದು ನನ್ನ ಅಭಿಪ್ರಾಯ.

ಬೇರೆ ದೇಶಗಳಲ್ಲಿ ಹೇಗೇ ಇರಲಿ, ಶೇ. ೮೦ ಜನ ಬೇಸಾಯಗಾರರಾಗಿ ಶೇ. ೧೦ ಜನ ಉದ್ಯೋಗಗಳಲ್ಲಿ ಕೆಲಸಗಾರರಾಗಿ ಇರುವ ಈ ದೇಶದಲ್ಲಿ ಶಿಕ್ಷಣ ಬರೀ ಪುಸ್ತಕ ಪಾಠವಾಗಿ, ಮುಂದೆ ಅವರು ಶ್ರಮಕ್ಕೆ ಅಸಮರ್ಥರಾಗುವಂತೆ ಮಾಡಬಾರದು. ನಮ್ಮ ಕಾಲದಲ್ಲಿ ಬಹುಭಾಗ ಹೊಟ್ಟೆಯ ಪಾಡಿಗಾಗೇ ಹೋಗುತ್ತದೆ. ಆದ್ದರಿಂದ ನಮ್ಮ ಮಕ್ಕಳಿಗೆ ಚಿಕ್ಕಂದಿನಿಂದಲೂ ಶ್ರಮದ ಗೌರವ ವನ್ನೂ ಕಲಿಸಬೇಕು. ದುಡಿತಕ್ಕೆ ಅವರು ಅಸಹ್ಯಪಡಬಾರದು. ರೈತನ ಮಗ ಶಾಲೆಗೆ ಹೋದರೆ ಬೇಸಾಯದ ಕೆಲಸಕ್ಕೆ ಅಯೋಗ್ಯನಾಗಬೇಕಾಗಿಲ್ಲ. ಈಗ ಆಗುತ್ತಿರುವುದು ಹಾಗೇ. ನಮ್ಮ ಶಾಲಾ ಬಾಲಕರು ದೇಹಶ್ರಮವೆಂದರೆ ಇಷ್ಟು ಅಸಂತೋಷ ತೋರಬಾರದು.

ಇನ್ನು ಮುಂದಿನ ಯಾವ ಪಾಠಕ್ರಮದಲ್ಲೇ ಆಗಲಿ ನೂಲುವುದು ಕಡ್ಡಾಯ ಶಿಕ್ಷಣದ ವಿಷಯವಾಗಬೇಕು. ಉಸಿರಾಡದೆ ಊಟಮಾಡದೆ ನಾವು ಹೇಗೆ ಬದುಕಲಾರೆವೋ ಮನೆ ಮನೆಯಲ್ಲೂ ನೂಲುವುದನ್ನು ಪುನರುಜ್ಜೀವನಗೊಳಿಸದೆ ಈ ಪುರಾತನ ದೇಶದಿಂದ ದಾರಿದ್ರ್ಯವನ್ನು ತೊಲಗಿಸಿ ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಲಾರೆವು. ಅಡಿಗೆಯ ಒಲೆಯಷ್ಟೇ ಪ್ರತಿ ಮನೆಗೂ ನೂಲುವುದು ಅಗತ್ಯವೆಂದು ನನ್ನ ಮತ. ದಿನೇ ದಿನೇ ಹೆಚ್ಚುತ್ತಿರುವ ನಮ್ಮ ಜನರ ದಾರಿದ್ರ್ಯದ ಪರಿಹಾರಕ್ಕೆ ಬೇರೆ ಉಪಾಯವಿಲ್ಲ.

ಮನೆ ಮನೆಯಲ್ಲೂ ನೂಲುವುದನ್ನು ಮೊದಲಿಡಿಸುವುದು ಹೇಗೆ? ಪ್ರತಿಯೊಂದು ರಾಷ್ಟ್ರೀಯ ಶಾಲೆಯಲ್ಲೂ ನೂಲುವುದನ್ನು ಕಲಿಸಿ ವ್ಯವಸ್ಥಿತವಾಗಿ ನೂಲನ್ನು ಉತ್ಪತ್ತಿ ಮಾಡಬೇಕೆಂದು ಆಗಲೇ ಹೇಳಿದ್ದೇನೆ. ನಮ್ಮ ಹುಡುಗರು ಅದನ್ನು ಕಲಿತರೆ ಮನೆಗಳಲ್ಲಿ ತಾವೇ ಮೊದಲಿಡಿಸುತ್ತಾರೆ.[೧[illegible]]

## ಸ್ವಾವಲಂಬನ

ಪ್ರತಿ ಶಾಲೆಯಲ್ಲೂ ನೂಲುವುದು ಪ್ರಾರಂಭವಾದರೆ ಶಿಕ್ಷಣಕ್ಕೆ ಹಣವನ್ನು ಒದಗಿಸುವ ವಿಷಯದಲ್ಲಿ ನಮ್ಮ ವಿಚಾರ ಒಂದು ಕ್ರಾಂತಿಯ ಸ್ವರೂಪವನ್ನೇ ಪಡೆದೀತು. ದಿನವೂ ಆರುಗಂಟೆ ಶಾಲೆ ನಡೆಸಿ ಉಚಿತ ಶಿಕ್ಷಣ ಕೊಡಬಹುದು. ಒಬ್ಬ ಹುಡುಗ ದಿನವೂ ನಾಲ್ಕುಗಂಟೆ ನೂತರೆ ದಿನವೂ ೧೦ ತೊಲ ನೂಲನ್ನು ತೆಗೆಯಬಲ್ಲ. ಶಾಲೆಗೆ ಒಂದಾಣೆ ಗಳಿಸಿಕೊಟ್ಟ; ಮೊದಲನೆ ತಿಂಗಳು ಅವನು ಉತ್ಪತ್ತಿ ಮಾಡಿದ್ದು ಬಹಳ ಕಡಿಮೆ; ಶಾಲೆ ಇದ್ದದ್ದು ಇಪ್ಪತ್ತಾರೇ ದಿನ ಎಂದರೂ ಎರಡನೆ ತಿಂಗಳಿಂದ ೧ ರೂ. ೧೦ ಆಣೆ ಗಳಿಸಬಲ್ಲ. ಎರಡನೆ ತಿಂಗಳಿಂದ ಮೂವತ್ತು ಹುಡುಗರ ತರಗತಿಯಲ್ಲಿ ತಿಂಗಳಿಗೆ ೪೮ ರೂ. ೧೨ ಆಣೆ ಸಂಪಾದನೆ.

ಪುಸ್ತಕ ಶಿಕ್ಷಣದ ಬಗ್ಗೆ ನಾನು ಏನೂ ಹೇಳಿಲ್ಲ. ಆರು ಗಂಟೆಗಳಲ್ಲಿ ಎರಡು ಗಂಟೆ ಅಕ್ಷರ ಶಿಕ್ಷಣ ಕೊಡಬಹುದು. ವಿಶೇಷ ಪ್ರಯಾಸವಿಲ್ಲದೆ ಪ್ರತಿ ಶಾಲೆಯೂ ಸ್ವಾವಲಂಬಿಯಾಗುವಂತೆ ಮಾಡಬಹುದು. ಅನುಭವಿಗಳಾದ ಶಿಕ್ಷಕರನ್ನು ನೇಮಿಸಬಹುದು.

ಈ ಯೋಜನೆಯನ್ನು ನಡೆಸಲು ಮುಖ್ಯ ಬಾಧಕ ರಾಟೆಯದೇ. ಈ ಕಲೆ ಜನಪ್ರಿಯವಾದರೆ ಸಾವಿರಾರು ರಾಟೆ ಬೇಕಾಗುತ್ತವೆ. ಸುದೈವದಿಂದ ಪ್ರತಿ

ಯೊಬ್ಬ ಹಳ್ಳಿಯ ಬಡಗಿಯೂ ಈ ಯಂತ್ರವನ್ನು ಮಾಡಬಲ್ಲ. ಅದನ್ನು ಆಶ್ರಮ ಅಥವಾ ಬೇರೆ ಕಡೆಯಿಂದ ತೆಗೆದುಕೊಳ್ಳುವುದು ಸರಿಯಲ್ಲ. ನೂಲುವುದರ ಸರಳತೆಯೆ ಅದರ ಸೊಗಸು. ಅದನ್ನು ಹಳ್ಳಿಯಲ್ಲಿ ಸುಲಭವಾಗಿಯೂ ಕಡಮೆ ವೆಚ್ಚದಿಂದಲೂ ಆರಂಭಿಸಬಹುದು.

ಸ್ವರಾಜ್ಯ ಬಂದು ಸರಿಯಾದ ಕಾಲ ಬಂದಾಗ ದಿನಕ್ಕೆ ಒಂದು ಗಂಟೆಯೇ ಸಾಕು ನೂಲುವುದಕ್ಕೆ. ಉಳಿದ ವೇಳೆಯೆಲ್ಲಾ ಅಕ್ಷರಶಿಕ್ಷಣಕ್ಕೇ.೧೬

ನಮ್ಮ ಶಾಲೆಗಳು ಈಗ ಗುಲಾಮರನ್ನು ತಯಾರು ಮಾಡುವ ಕಾರ್ಖಾನೆಗಳಾಗಿವೆ. ಸ್ವರಾಜ್ಯದಲ್ಲಿ ಶಿಕ್ಷಣದಗುರಿ ತಾರುಣ್ಯದಿಂದಲೇ ಸ್ವಾವಲಂಬಿಗಳಾದ ಹುಡುಗರನ್ನು ತರಬೇತು ಮಾಡುವುದು. ಬೇರೆ ಯಾವ ಉದ್ಯೋಗವನ್ನಾದರೂ ಅವರು ಕಲಿಯಲಿ, ನೂಲುವುದು ಮಾತ್ರ ಕಡ್ಡಾಯ. ದುಃಖಿಗಳ ಸಾಂತ್ವನವಾಗಬೇಕು ರಾಟೆ. ಬೇರೆ ಯಾವುದಕ್ಕೂ ಅದರ ಗುಣವಿಲ್ಲ, ಅದೊಂದೇ ಬೇಸಾಯಕ್ಕೆ ಜೊತೆಯಾಗಬಲ್ಲದ್ದು. ಎಲ್ಲರೂ ಬಡಗಿಗಳು ಕಮ್ಮಾರರು ಆಗಲಾರರು. ಎಲ್ಲರೂ ನೂಲಲೇ ಬೇಕು. ತಮ್ಮ ಸಂಪಾದನೆಗಾದರೂ ನೂಲಲಿ, ದೇಶಸೇವೆಗಾಗಿಯಾದರೂ ನೂಲಲಿ, ಬಟ್ಟೆಯ ಅಗತ್ಯ ಸಾರ್ವತ್ರಿಕ, ಹಾಗೇ ರಾಟೆಯೂ ಸಾರ್ವತ್ರಿಕವಾಗಬೇಕು.

ಈಗಿನಿಂದಲೇ ಪುಸ್ತಕ ಶಿಕ್ಷಣಕ್ಕೆ ಜೊತೆಯಾಗಿ ನೂಲುವುದನ್ನು ಪ್ರಾರಂಭಿಸೋಣ. ಸ್ವರಾಜ್ಯದಲ್ಲಿ ಮತ್ತೆ ಇದರ ಬಗ್ಗೆ ವಾದವಿವಾದ ಬೇಡ. ೧೭

ಹೆಂಡ ಮಾರಿ ಸಂಪಾದಿಸಿದ ಹಣದಿಂದ ನಮ್ಮ ಮಕ್ಕಳು ಶಿಕ್ಷಣ ಪಡೆಯಬೇಕಲ್ಲ. ಎಂಥ ನಾಚಿಕೆಗೇಡು! ನಮ್ಮ ಮಕ್ಕಳಿಗೆ ಶಿಕ್ಷಣವಿಲ್ಲದಿದ್ದರೂ ಚಿಂತೆಯಿಲ್ಲ. ಈ ಕುಡಿತದ ದುರಾಚಾರವನ್ನು ನಿಲ್ಲಿಸಲು ನಾವು ವಿವೇಕದಿಂದ ನಿರ್ಧರಿಸದಿದ್ದರೆ ಮುಂದಿನ ಪೀಳಿಗೆಗಳವರ ಶಾಪಕ್ಕೆ ಗುರಿಯಾಗಬೇಕಾದೀತು. ಹಾಗೆ ಆಗಬೇಕಾಗಿಲ್ಲ, ಶಾಲೆ ಕಾಲೇಜುಗಳಲ್ಲಿ ನೂಲುವುದನ್ನು ಪ್ರಾರಂಭಿಸಿ ಶಿಕ್ಷಣವನ್ನು ಸ್ವಾವಲಂಬಿಯಾಗಿ ಮಾಡೋಣ ಎಂದರೆ ನೀವು ನಗುತ್ತೀರಿ. ಬಲ್ಲೆ. ಆದರೆ ಅದರ ಹಾಗೆ ಶಿಕ್ಷಣದ ಸಮಸ್ಯೆಯನ್ನು ಪರಿಹರಿಸುವುದು ಮತ್ತೊಂದಿಲ್ಲವೆಂದು ಭರವಸೆ ಕೊಡುತ್ತೇನೆ. ದೇಶ ಹೊಸ ತೆರಿಗೆಯನ್ನು ತಡೆಯಲಾರದು. ಈಗಿರುವ ತೆರಿಗೆಯೇ ಭರಿಸಲಾರದಷ್ಟು ಇದೆ. ಈ ಅಫೀಮು, ಹೆಂಡಗಳಿಂದ ಬರುವ ವರಮಾನವನ್ನು ಬಿಟ್ಟುಬಿಡಬೇಕು. ಇತರ ವರಮಾನವನ್ನೂ ತಗ್ಗಿಸಬೇಕು. ಇಲ್ಲದಿದ್ದರೆ ಜನತೆಯ ದಾರಿದ್ರ್ಯಕ್ಕೆ ಕಡೆಯೇ ಇಲ್ಲವಾದೀತು.೧೮

ಮಕ್ಕಳ ಶಿಕ್ಷಣಕ್ಕೆ ಹಣಬೇಕಾದ ಕುಟುಂಬಗಳಲ್ಲಿ ತಂದೆಗಳು ಏನೊ ಮಾಡಬಾರದ್ದನ್ನು ಮಾಡಿ ಹಣ ಗಳಿಸಬೇಕೋ ? ನಮ್ಮ ಇಡೀ ಶಿಕ್ಷಣ ಪದ್ಧತಿಯನ್ನೇ ಬದಲಿಸದಿದ್ದರೆ ನಮಗೆ ಮುಂದೆ ಇನ್ನೂ ಕೆಟ್ಟಕಾಲ ಕಾದಿದೆ. ಮಕ್ಕಳ ಮಹಾಸಮುದ್ರದ ಅಂಚನ್ನಾದರೂ ನಾವು ಮುಟ್ಟಿದೇವೆಯೊ ಇಲ್ಲವೋ, ಉಳಿದ ಅಪಾರ ಸಮೂಹಕ್ಕೆ ಶಿಕ್ಷಣ ಬೇಡ ಎಂದಲ್ಲ, ಅವರ ತಂದೆ ತಾಯಿಗಳಿಗೆ ಗೊತ್ತಿಲ್ಲ, ಸಾಮರ್ಥ್ಯವಿಲ್ಲ. ಮೊದಲೇ ಬಡ ದೇಶ. ತಂದೆ ತಾಯಿಗಳು ದೊಡ್ಡ ದೊಡ್ಡ ಮಕ್ಕಳನೇಕರನ್ನು ಸಾಕಬೇಕು. ಆ ಮಕ್ಕಳಿಗೆ ಶಿಕ್ಷಣ ಕೊಡಬೇಕೆಂದರೆ ವಿಶೇಷ ವೆಚ್ಚ. ಅದರಿಂದ ತತ್ಕಾಲಕ್ಕೆ ಏನೂ ಫಲವಿಲ್ಲ. ಇದೆಲ್ಲದರಲ್ಲಿ ಏನೋ ಮಹತ್ತರ ದೋಷ ಇದೆ. ಶಿಕ್ಷಣಕ್ಕೆ ಮೊದಲಿಟ್ಟಾಗಿನಿಂದಲೇ ಹುಡುಗರು ಅದರ ವೆಚ್ಚವನ್ನು ತಾವು ದುಡಿದು ಕೊಟ್ಟರೆ ಏನೂ ತಪ್ಪಲ್ಲ. ಎಲ್ಲರಿಗೂ ಸರಿಹೋಗುವ, ಇಡೀ ಭಾರತಕ್ಕೆ ಬೇಕಾದ ಕೈಗಾರಿಕೆ ನಿಸ್ಸಂದೇಹವಾಗಿಯೂ ನೂಲುವುದು. ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಇದನ್ನು ಮೊದಲಿಟ್ಟರೆ ಮೂರು ಕೆಲಸ ಆಗುತ್ತವೆ: ಶಿಕ್ಷಣ ಸ್ವಾವಲಂಬಿಯಾಗುತ್ತದೆ, ಮಕ್ಕಳ ಮನಸ್ಸೂ ದೇಹವೂ ತರಬೇತು ಪಡೆಯುತ್ತವೆ, ಪರದೇಶದ ನೂಲು-ಬಟ್ಟೆ ಎರಡನ್ನೂ ಪೂರ್ಣವಾಗಿ ಬಹಿಷ್ಕರಿಸಲು ದಾರಿಯಾಗುತ್ತದೆ. ಅಷ್ಟೇ ಅಲ್ಲದೆ ಹಾಗೆ ತರಬೇತಾದ ಮಕ್ಕಳು ಸ್ವಾವಲಂಬಿಗಳೂ ಸ್ವತಂತ್ರರೂ ಆಗುತ್ತಾರೆ. ೧೯

ಶಾಲಾ ವಯಸ್ಸಿನ ಹುಡುಗ ಹುಡುಗಿಯರೆಲ್ಲರೂ ಸಾರ್ವಜನಿಕ ಶಾಲೆಗಳಿಗೆ ಹೋಗಬೇಕು ಎಂದು ನಿರೀಕ್ಷಿಸುವುದಾದರೆ, ಈಗಿನ ಪದ್ಧತಿಯಂತೆ ಶಿಕ್ಷಣ ಕೊಡಲು ನಮ್ಮಲ್ಲಿ ಹಣವೂ ಇಲ್ಲ, ಈಗಿರುವ ಶುಲ್ಕವನ್ನು ತಂದೆ ತಾಯಿಗಳು ಕೊಡಲೂ ಅಶಕ್ತರು. ಶಿಕ್ಷಣ ಸಾರ್ವತ್ರಿಕವಾಗಬೇಕಾಗಿದ್ದರೆ ಉಚಿತವಾಗಬೇಕು. ಎಂಥ ಆದರ್ಶ ಆಡಳಿತವೇ ಆಗಲಿ, ನಮ್ಮ (ಶಾಲಾವಯಸ್ಸಿನ) ಹುಡುಗರೆಲ್ಲರಿಗೂ ಶಿಕ್ಷಣ ಕೊಡಲು ಬೇಕಾಗುವ ಇನ್ನೂರು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾರದು ಎಂದುಕೊಳ್ಳುತ್ತೇನೆ. ಆದ್ದರಿಂದ ಕೆಲವು ಮಟ್ಟಿಗಾದರೂ ಅದನ್ನು ನಮ್ಮ ಹುಡುಗರು ದುಡಿದು ಕೊಡಬೇಕು ಎಂದು ತಾನೇ ತಿಳಿಯುತ್ತದೆ.

ದುಡಿತವನ್ನು ಕೀಳೆಂದು ತಿಳಿದರೆ ದೇಶ ಅಧೋಗತಿಯ ಪಾಲಾದೀತು. ಅದಕ್ಕಿಂತ ಹೆಚ್ಚಿನ ಅಧೋಗತಿಯಿಲ್ಲ. ೨೦

## ಇಂಗ್ಲಿಷ್ ಶಿಕ್ಷಣ

ಈಗ ಕೊಡುತ್ತಿರುವ ಇಂಗ್ಲಿಷ್ ವಿದ್ಯಾಭ್ಯಾಸ ಇಂಗ್ಲಿಷ್ ಕಲಿತ ಭಾರತೀಯರನ್ನು ನಿರ್ವೀರ್ಯರನ್ನಾಗಿ ಮಾಡಿದೆ. ನಮ್ಮ ವಿದ್ಯಾರ್ಥಿಗಳ ಶಕ್ತಿ ಸಾಮರ್ಥ್ಯಗಳಿಗೆ ಒಂದು ದೊಡ್ಡ ಹೊರೆಯಾಗಿದೆ. ಅದರಿಂದ ನಾವು ಬರೀ ಅನುಕರಣಶೀಲರಾಗಿದೇವೆ. ದೇಶಭಾಷೆಗಳನ್ನು ನಿರ್ನಾಮ ಮಾಡಿದುದು ಬ್ರಿಟಿಷರ ಸಂಪರ್ಕದ ಇತಿಹಾಸದಲ್ಲಿ ಅತ್ಯಂತ ವಿಷಾದದ ಪ್ರಕರಣ. ಇಂಗ್ಲಿಷಿನಲ್ಲಿ ಆಲೋಚನೆ, ಮಾಡಿ ಇಂಗ್ಲಿಷಿನಲ್ಲೆ ಹೇಳಬೇಕಾದ್ದು ಇಲ್ಲದಿದ್ದರೆ ರಾಜಾ ರಾಮಮೋಹನರಾಯರು ಇನ್ನೂ ದೊಡ್ಡ ಸುಧಾರಕರಾಗುತ್ತಿದ್ದರು, ಲೋಕಮಾನ್ಯ ತಿಲಕರು ಇನ್ನೂ ದೊಡ್ಡ ವಿದ್ವಾಂಸರಾಗುತ್ತಿದ್ದರು. ತಮ್ಮ ಜನತೆಯ ಮೇಲೆ ಅವರು ಬೀರಿದ ಪ್ರಭಾವ ಅದ್ಭುತ. ಆದರೆ ಇಷ್ಟು ಅಸಹಜವಲ್ಲದ ವಾತಾವರಣದಲ್ಲಿ ಬೆಳೆದು ಬಂದಿದ್ದರೆ ಆ ಪ್ರಭಾವ ಇನ್ನೂ ಬಲವಾಗಿರುತ್ತಿತ್ತು. ಇಬ್ಬರೂ ಇಂಗ್ಲೀಷು ಸಾಹಿತ್ಯಭಂಡಾರದಿಂದ ಬೇಕಾದಷ್ಟು ಲಾಭ ಪಡೆದರು. ನಿಜ. ಆದರೆ ಇದು ಅವರಿಗೆ ತಮ್ಮ ಭಾಷೆಗಳ ಮೂಲಕ ದೊರಕಬೇಕಾಗಿತ್ತು. ಬರೀ ಅನುಕರಣಪಟುಗಳನ್ನು ಸೃಷ್ಟಿಸಿ ಯಾವ ದೇಶವೂ ಮಹಾರಾಷ್ಟ್ರವಾಗಲಾರದು. ಇಂಗ್ಲಿಷರಿಗೆ ಬೈಬಲಿನ ಅಧಿಕೃತ ಭಾಷಾಂತರ ಇಲ್ಲದಿದ್ದರೆ ಅವರ ಸ್ಥಿತಿ ಏನಾಗುತ್ತಿತ್ತೋ ಊಹಿಸಿ. ಚೈತನ್ಯ, ಕಬೀರ್, ನಾನಕ್, ಗುರು ಗೋವಿಂದಸಿಂಹ, ಶಿವಾಜಿ, ಪ್ರತಾಪಸಿಂಹರು, ರಾಮಮೋಹನ್ ರಾಯ, ತಿಲಕರಿಗಿಂತ ಶ್ರೇಷ್ಠವಾಗಿದ್ದರೆಂದು ನನ್ನ ನಂಬಿಕೆ. ತಮ್ಮ ತಮ್ಮ ರೀತಿಯಲ್ಲಿ ಇವರೆಲ್ಲರೂ ಶ್ರೇಷ್ಠರೇ. ಆದರೆ ಫಲವನ್ನು ಲೆಕ್ಕ ಹಾಕಿದರೆ ಜನತೆಯ ಮೇಲೆ ರಾಮಮೋಹನ-ತಿಲಕರ ಪ್ರಭಾವ ಉಳಿದ ಅದೃಷ್ಟಶಾಲಿಗಳ ಪ್ರಭಾವದಷ್ಟು ಗಾಢವೂ ಅಲ್ಲ ಶಾಶ್ವತವೂ ಅಲ್ಲ. ಅವರಿಗಿದ್ದ ಅಡಚಣೆಗಳನ್ನು ನೋಡಿದರೆ ಅವರು ಬೃಹತ್ ವ್ಯಕ್ತಿಗಳು. ಖಂಡಿತವಾಗಿಯೂ ಇದಕ್ಕಿಂತ ಹೆಚ್ಚಿನ ಪರಿಣಾಮವನ್ನು ತೋರುತ್ತಿದ್ದರು. ಆದರೆ ಅವರಿಗೆ ಸಿಕ್ಕ ಈ ಶಿಕ್ಷಣ ಅವರಿಗೆ ದೊಡ್ಡ ಆತಂಕವಾಯಿತು. ಇಂಗ್ಲೀಷು ಗೊತ್ತಿಲ್ಲದಿದ್ದರೆ ರಾಜಾರಾಮಮೋಹನರಾಯರೂ ಲೋಕಮಾನ್ಯರೂ ಈ ರೀತಿ ವಿಚಾರ ಮಾಡುತ್ತಲೇ ಇರಲಿಲ್ಲ ಎಂಬುದನ್ನು ನಾನು ನಂಬಲು ಸಿದ್ಧನಿಲ್ಲ. ಹಿಂದುಸ್ಥಾನದಲ್ಲಿರುವ ಅನೇಕ ಮೂಢ ವಿಶ್ವಾಸಗಳಲ್ಲಿ ಇಂಗ್ಲೀಷು ಭಾಷೆ ಬಾರದಿದ್ದವನಿಗೆ ಸ್ವಾತಂತ್ರ್ಯ ವಿಚಾರ ಹೊಳೆಯದು, ವಿಚಾರದ ನಿಷ್ಕೃಷ್ಟತೆ ಇಲ್ಲ ಎಂಬುದರಷ್ಟು ವಿಪರೀತ ಪರಿಣಾಮಕಾರಿ ಯಾವುದೂ

ಅಲ್ಲ. ಏನೇ ಇರಲಿ, ಹಿಂದುಸ್ಥಾನ ಈ ಐವತ್ತು ವರ್ಷಗಳ ಶಿಕ್ಷಣದಿಂದ ಮೊದಲಿಗಿಂತ ಹೆಚ್ಚು ದರಿದ್ರವಾಗಿದೆ, ಆತ್ಮರಕ್ಷಣೆಗೆ ಅಸಮರ್ಥವಾಗಿದೆ. ಹಿಂದುಸ್ಥಾನದ ಮಕ್ಕಳು ಮೊದಲಿಗಿಂತ ವೀರ್ಯಹೀನರಾಗಿದಾರೆ. ಇದಕ್ಕೆ ಸರಕಾರದ ದೋಷ ಕಾರಣ ಎಂದು ನನಗೆ ಹೇಳಬೇಕಾಗಿಲ್ಲ. ಈ ಶಿಕ್ಷಣ ಪದ್ಧತಿ ಅದರ ಅತ್ಯಂತ ದೊಡ್ಡ ದೋಷ.

ಇದು ಹುಟ್ಟಿದ್ದು ಅಜ್ಞಾನದಿಂದ, ತಪ್ಪು ತಿಳಿವಳಿಕೆಯಿಂದ. ನಮ್ಮ ಶಿಕ್ಷಣ ಪದ್ಧತಿ ಪೂರಾ ನಿರರ್ಥಕವೆಂದು ಇಂಗ್ಲಿಷ್ ಆಳರಸರು ನಿಜವಾಗಿಯೂ ತಿಳಿದಿದ್ದರು. ಈ ಶಿಕ್ಷಣ ಪಾಪದಿಂದ ಬೆಳೆದದ್ದು. ಭಾರತೀಯ ದೇಹ ಮನ ಆತ್ಮಗಳನ್ನು ಕ್ಷೀಣಗೊಳಿಸುವುದೇ ಅದರ ಸ್ವಭಾವ.೨೧

ನನ್ನ ಮನೆಗೆ ಸುತ್ತಲೂ ಗೋಡೆ ಕಟ್ಟಿ ಕಿಟಕಿಗಳನ್ನೆಲ್ಲ ಮುಚ್ಚಿರ ಬೇಕೆಂದು ನನ್ನ ಬಯಕೆಯಲ್ಲ. ಎಲ್ಲಾ ದೇಶಗಳ ಸಂಸ್ಕೃತಿಯೂ ನನ್ನ ಮನೆಯಲ್ಲಿ ನಿರಾತಂಕವಾಗಿ ಬೀಸಲಿ. ನಾನು ಮಾತ್ರ ಯಾವುದಕ್ಕೂ ಉರುಳಿ ಬೀಳುವುದಿಲ್ಲ. ಪರರ ಮನೆಯಲ್ಲಿ ತಿರುಪೆ ಬೇಡಲೂ ಆರೆ, ಗುಲಾಮನಾಗಿರಲೂ ಆರೆ, ತಲೆಹೋಕನಾಗಿಯೂ ಇರಲಾರೆ. ಸುಳ್ಳು ಜಂಭಕ್ಕಾಗಿ ಸಲ್ಲದ ಬಡಾಯಿಗಾಗಿ ನನ್ನ ತಂಗಿಯರಿಗೆ ಇಂಗ್ಲಿಷು ಕಲಿವ ಕಷ್ಟ ಕೊಡಲಾರೆ. ಸಾಹಿತ್ಯಾಭಿರುಚಿಯುಳ್ಳ ನಮ್ಮ ತರುಣ ತರುಣಿಯರು ಇಂಗ್ಲಿಷನ್ನೂ ಇತರ ಭಾಷೆಗಳನ್ನೂ ಬೇಕಾದಷ್ಟು ಕಲಿಯಲಿ. ತಮ್ಮ ಪಾಂಡಿತ್ಯವನ್ನು ಜನರಿಗೆ ಕೊಡಲಿ. ಜಗದೀಶ್ ಚಂದ್ರಬೋಸರಂತೆ, ಪ್ರಫುಲ್ಲ ಚಂದ್ರರಾಯರಂತೆ, ರವೀಂದ್ರನಾಥರಂತೆ. ಆದರೆ ಭಾರತೀಯರು ಯಾರೇ ಆಗಲಿ ಮಾತೃ ಭಾಷೆಯನ್ನು ಮರೆತರೆ, ಅಸಡ್ಡೆ ಮಾಡಿದರೆ, ಹೀನವೆಂದು ತಿಳಿದರೆ, ಅದರಲ್ಲಿ ನಾನು ಮಾತಾಡಲಾರೆ, ಅಭಿಪ್ರಾಯಗಳನ್ನು ಹೇಳಲಾರೆ ಎಂದರೆ ನಾನು ಒಪ್ಪುವುದಿಲ್ಲ. ನನ್ನದು ಸೆರೆಮನೆಯ ಧರ್ಮವಲ್ಲ. ಅದರಲ್ಲಿ ದೇವರ ಸೃಷ್ಟಿಯಲ್ಲಿ ಅತಿ ದೀನ ಹೀನವಾದುದಕ್ಕೂ ಸ್ಥಾನವಿದೆ. ಆದರೆ ಗರ್ವ, ಅಹಂಕಾರ, ಜಾತಿ ಮತ ಬಣ್ಣಗಳ ಮದಕ್ಕೆ ಸ್ಥಾನವಿಲ್ಲ.೨೨

## ಉದ್ಯೋಗ ಕೇಂದ್ರಿತ

ಶಿಕ್ಷಣಕ್ಕೆ ಗ್ರಾಮೋದ್ಯೋಗವೇ ಕೇಂದ್ರವಾಗಬೇಕು. ಇದು ಅಗತ್ಯ. ಇದಕ್ಕೆ ಬಹಳ ಬೆಲೆಯುಂಟೆಂಬುದರಲ್ಲಿ ನನಗೆ ಸಂದೇಹವೇ ಇಲ್ಲ. ಹಿಂದುಸ್ಥಾನದ ಶಿಕ್ಷಣ ಸಂಸ್ಥೆಗಳಲ್ಲಿರುವ ಪದ್ಧತಿ ಮನುಷ್ಯನಲ್ಲಿರುವ ಉತ್ತಮಾಂಶವನ್ನು

ಹೊರಗೆಳೆವ ಶಿಕ್ಷಣವಲ್ಲ, ಮನಸ್ಸಿನ ಭ್ರಷ್ಟತನ. ಹೇಗೋ ಮನಸ್ಸಿಗೆ ತುರುಕುತ್ತದೆ. ಮೊದಲಿನಿಂದಲೂ ಗ್ರಾಮೋದ್ಯೋಗಗಳ ಮೂಲಕ ಮನಸ್ಸಿಗೆ ಶಿಕ್ಷಣ ಕೊಟ್ಟರೆ ಅದರಿಂದ ಮನಸ್ಸು ನಿಜವಾಗಿಯೂ ಶಿಸ್ತಿನಿಂದ ಬೆಳೆದು ಬುದ್ಧಿಶಕ್ತಿ ಆತ್ಮಶಕ್ತಿಗಳ ಸಂರಕ್ಷಣೆಯಾದೀತು.೨೩

ಇದನ್ನು ವಿಶ್ವಾಸದ ಬಲದಿಂದ ಬರೆಯುತ್ತಿದ್ದೇನೆ. ಇದಕ್ಕೆ ಅನುಭವದ ಆಧಾರವಿದೆ. ಮೆಟ್ಟು ಮಾಡುವುದನ್ನು ನೂಲುವುದನ್ನು ನಾನೇ ಕಲಿಸಿದೇನೆ. ಒಳ್ಳೇ ಫಲ ಲಭಿಸಿತು.೨೪

## ೨

## ವೃತ್ತಿಯ ಮೂಲಕ ಶಿಕ್ಷಣ

ಈ ಹೊಸ ಶಿಕ್ಷಣ ಯೋಜನೆಯ ವಿಚಾರ ತಮ್ಮ ಮನಸ್ಸಿನಲ್ಲಿ ಹೇಗೆ ಮೂಡಿತೋ, ಶಿಕ್ಷಣಕ್ಕೂ ಉದ್ಯೋಗಕ್ಕೂ ತಮ್ಮ ದೃಷ್ಟಿಯಲ್ಲಿ ಏನು ಸಂಬಂಧವಿದೆಯೋ, ಗಾಂಧೀಜೀ ಕೆಲವಾರು ಸಂಭಾಷಣೆಗಳಲ್ಲಿ ತಿಳಿಸಿ ಹೇಳಿದರು. 'ಹೊಸ ದಾರಿಯೊಂದನ್ನು ಹುಡುಕುವುದು ಅಗತ್ಯ ಎಂದು ನನಗೆ ಬಹುಕಾಲ ಹಿಂದೆಯೇ ಅನಿಸಿತ್ತು. ದಕ್ಷಿಣ ಆಫ್ರಿಕಾದಿಂದ ಹಿಂದಿರುಗಿದ ಮೇಲೆ ನನ್ನನ್ನು ಕಾಣಲು ಬಂದ ಅಸಂಖ್ಯ ವಿದ್ಯಾರ್ಥಿಗಳನ್ನು ನೋಡಿ ಆಧುನಿಕ ಶಿಕ್ಷಣದ ವಿಫಲತೆ ನನಗೆ ಅರ್ಥವಾಗಿತ್ತು. ಆದುದರಿಂದ ಆಶ್ರಮದ ಶಾಲೆಯಲ್ಲಿ ಕೈಗಾರಿಕೆಯ ಶಿಕ್ಷಣವನ್ನು ಪ್ರಾರಂಭಿಸಿದೆ. ಕೈಗೆಲಸಕ್ಕೆ ಸ್ವಲ್ಪ ಹೆಚ್ಚಾಗಿಯೆ ಗಮನ ಕೊಟ್ಟೆ. ಅದರಿಂದ ಹುಡುಗರು ಬೇಗ ಬೇಸತ್ತರು. ತಮಗೆ ಪುಸ್ತಕ ವಿದ್ಯೆ ಇಲ್ಲದಾಯಿತೆಂದು ಚಿಂತಿಸತೊಡಗಿದರು. ಆದರೆ ಅವರದು ತಪ್ಪು ತಿಳಿವಳಿಕೆ. ಸಾಂಪ್ರದಾಯಿಕ ಶಾಲೆಗಳಲ್ಲಿ ಮಕ್ಕಳಿಗೆ ಸಿಗುವ ಅಕ್ಷರ ಶಿಕ್ಷಣಕ್ಕಿಂತ ಹೆಚ್ಚಾಗಿಯೇ ಲಭಿಸಿತ್ತು ಅವರಿಗೆ. ಆದರೂ ನಾನು ವಿಚಾರಮಾಡತೊಡಗಿದೆ. ಕೈಗಾರಿಕೆ–ಪುಸ್ತಕ ಶಿಕ್ಷಣಗಳ ಕಲಸುಮೇಲೋಗರವಾದರೆ ಪ್ರಯೋಜನವಿಲ್ಲ ; ಕೈಗಾರಿಕೆಯ ಶಿಕ್ಷಣದ ದ್ವಾರಾ ಅಕ್ಷರಶಿಕ್ಷಣ ಕೊಡುವುದೇ ಸರಿ ಎಂಬ ನಿರ್ಧಾರಕ್ಕೆ ಬಂದೆ. ಆಗ ಕೈಗಾರಿಕೆ ಬರೀ ಬೇಸರ, ಬರೀ ಜಡ ಆಗದು ; ಅಕ್ಷರಶಿಕ್ಷಣಕ್ಕೆ ಒಂದು ಹೊಸ ತಿರುಳು, ಒಂದು ಹೊಸ ಪ್ರಯೋಜನ ಲಭಿಸುತ್ತದೆ.

'ಮಕ್ಕಳ ಕಾಲವೆಲ್ಲ ಇಂಗ್ಲಿಷ್ ಶಬ್ದಗಳನ್ನು ಪ್ರಯೋಗಗಳನ್ನು ಗಟ್ಟಿ

ಮಾಡುವುದರಲ್ಲಿಯೆ ಕಳೆದುಹೋಗುತ್ತದೆ. ಅಷ್ಟಾದರೂ ತಾವು ಕಲಿತುದನ್ನು ತನ್ನ ಭಾಷೆಯಲ್ಲಿ ಸರಿಯಾಗಿ ಹೇಳಲು ಅವರಿಗೆ ಬಾರದು. ಶಿಕ್ಷಕರು ಹೇಳಿದುದನ್ನು ಸರಿಯಾಗಿ ತಿಳಿದುಕೊಳ್ಳಲಾರರು. ಇದಕ್ಕಾಗಿ ಇಂಗ್ಲಿಷನ್ನು ಕೈಬಿಡಲು ತೀರ್ಮಾನಿಸಿದೆವು. ತಮ್ಮ ಭಾಷೆಯನ್ನು ಮಕ್ಕಳು ಬರೀ ಉದಾಸೀನತೆಯಿಂದಲೇ ಮರೆತುಬಿಟ್ಟರು. ಈ ಎರಡೂ ದೋಷಗಳನ್ನು ಸರಿಪಡಿಸಲು ಕೈಗಾರಿಕೆಯ ಮೂಲಕ ಶಿಕ್ಷಣ ಕೊಡುವುದೊಂದೇ ಮಾರ್ಗ ಎಂದು ತೋರಿತು.

'ಮೊದಲನೆಯ ದಿನ ಹುಡುಗರ ಯೋಗ್ಯತೆಯನ್ನು ಕಂಡುಹಿಡಿಯಬೇಕು ನಾನು—ಅವರಿಗೆ ಓದುಬರೆಹ ಭೂಗೋಳ ಏನಾದರೂ ಗೊತ್ತಿದೆಯೋ ಇಲ್ಲವೋ ಎಂತ. ಆಮೇಲೆ ತಕಲಿಯನ್ನು ಪ್ರಾರಂಭಿಸಿ ಅವರಿಗೆ ತಿಳಿದುದಕ್ಕೆ ಹೊಸದಾಗಿ ಸೇರಿಸುತ್ತ ಹೋಗಬೇಕು.

'ಕೈಗೆಲಸ ಇರಲು, ತಕಲಿಯನ್ನೇ ಏಕೆ ಆರಿಸಿಕೊಂಡಿರಿ ಎಂದು ನೀವು ಕೇಳಬಹುದು. ನಾವು ಕಂಡುಕೊಂಡ ಕೈಗೆಲಸಗಳಲ್ಲಿ ತಕಲಿಯೆ ಮೊದಲನೆಯದು. ಸಾವಿರಾರು ವರ್ಷಗಳಾದರೂ ಇನ್ನೂ ಅದು ಬದುಕಿದೆ: ಇದೇ ಕಾರಣ. ಮೊದಮೊದಲು ನಮ್ಮ ಬಟ್ಟೆ ಎಲ್ಲವೂ ತಕಲಿ ನೂಲಿನದೇ ಆಗಿತ್ತು. ರಾಟೆ ಆಮೇಲೆ ಬಂತು. ಆದರೂ ರಾಟೆಯಲ್ಲಿ ಅತಿ ನವುರಾದ ದಾರ ತೆಗೆಯಲು ಸಾಧ್ಯವಿಲ್ಲ ಎಂದು ಮತ್ತೆ ತಕಲಿಯನ್ನೇ ಆಶ್ರಯಿಸಬೇಕಾಯಿತು. ತಕಲಿಯನ್ನು ನಿರ್ಮಿಸಿದಾಗ ಮನುಷ್ಯನ ಕಲ್ಪನಾಶಕ್ತಿ ಬಹಳ ಮೇಲೇರಿತು. ಅಷ್ಟು ಎತ್ತರಕ್ಕೆ ಹಿಂದೆ ಎಂದೂ ಮುಟ್ಟಿರಲಿಲ್ಲ. ಕೈಬೆರಳಿನ ಕೌಶಲವನ್ನು ಸಾಧ್ಯವಾದಷ್ಟು ಅತ್ಯುತ್ತಮವಾಗಿ ಉಪಯೋಗಿಸಿದೆವು. ಆದರೆ ತಕಲಿ ಬರೀ ಅವಿದ್ಯಾವಂತ ಕಸಬುದಾರರ ಪಾಲಾಗಿ ಮೂಲೆಗೆ ಬಿತ್ತು. ಅದನ್ನು ಮತ್ತೊಮ್ಮೆ ಪೂರ್ಣ ವೈಭವದೊಂದಿಗೆ ಪ್ರತಿಷ್ಠಿಸಬೇಕೆಂದರೆ, ಗ್ರಾಮಜೀವನವನ್ನು ಪುನಃ ಚೇತನಗೊಳಿಸಿ ಪುನರ್ನಿರ್ಮಾಣ ಮಾಡಬೇಕಾದರೆ, ಮಕ್ಕಳ ಶಿಕ್ಷಣವನ್ನು ತಕಲಿಯ ಮೂಲಕ ಪ್ರಾರಂಭಿಸಬೇಕು. ಆದುದರಿಂದ ನಮ್ಮ ನಿತ್ಯಜೀವನದಲ್ಲಿ ತಕಲಿಗೆ ಯಾವ ಸ್ಥಾನವಿತ್ತು ಎಂಬುದನ್ನು ತಿಳಿಸುವುದು ಎರಡನೆ ಪಾಠ. ಆಮೇಲೆ ಇತಿಹಾಸದಲ್ಲಿ ಸ್ವಲ್ಪ ಪ್ರವೇಶಮಾಡಿಸಿ ತಕಲಿಯ ವಿದ್ಯೆ ಹೇಗೆ ಅಳಿಯಿತೋ ತಿಳಿಸುತ್ತೇನೆ. ಅಲ್ಲಿಂದ ಮುಂದೆ ಸಂಕ್ಷೇಪವಾಗಿ ಭಾರತದ ಇತಿಹಾಸ. ಈಸ್ಟ್ ಇಂಡಿಯಾ ಕಂಪೆನಿಯಿಂದ ಅಥವಾ ಅದಕ್ಕೂ ಹಿಂದಿನ ಮುಸ್ಲಿಂ ಪ್ರಭುತ್ವದ ಕಾಲದಿಂದ ಮೊದಲಿಡುತ್ತೇನೆ. ಈಸ್ಟ್ ಇಂಡಿಯಾ ಕಂಪೆನಿ ಹೇಗೆ ಶೋಷಣದ

ವ್ಯಾಪಾರವನ್ನು ನಡೆಸಿತೋ, ಹೇಗೆ ಒಂದು ತಂತ್ರ ಮಾಡಿ ನಮ್ಮ ಮುಖ್ಯ ಕೈಗಾರಿಕೆಯನ್ನು ಹಿಸುಕಿ ಉಸಿರುಗಟ್ಟಿಸಿ, ಕಡೆಗೆ ಕೊಂದೇ ಹಾಕಿದರೋ ವಿವರಿಸುತ್ತೇನೆ. ತರುವಾಯ ಸಂಗ್ರಹವಾಗಿ ಯಂತ್ರಶಾಸ್ತ್ರ—ತಕಲಿಯ ರಚನೆ. ಮೊಟ್ಟಮೊದಲು ಒಂದು ಚಿಕ್ಕ ಮಣ್ಣಿನ ಮುದ್ದೆಯನ್ನೋ ಕಲಸಿದ ಹಿಟ್ಟಿನ ಉಂಡೆಯನ್ನೋ ಮಾಡಿ ಅದರ ನಡುವೆ ಒಂದು ಬಿದಿರಿನ ಸಿಬರನ್ನು ನೆಟ್ಟು ತಕಲಿಮಾಡಿರಬೇಕು. ಈಗಲೂ ಇಂಥದು ಬಂಗಾಳದಲ್ಲಿ, ಬಿಹಾರದ ಕೆಲವು ಭಾಗಗಳಲ್ಲಿ ಇದೆ. ಕ್ರಮೇಣ ಮಣ್ಣಿನ ಮುದ್ದೆಯ ಬದಲು ಇಟ್ಟಿಗೆ ತುಂಡು ಬಂದಿರಬೇಕು. ನಮ್ಮ ಕಾಲದಲ್ಲಿ ಕಬ್ಬಿಣ, ಉಕ್ಕು, ಹಿತ್ತಾಳೆ ಬಂದಿದೆ. ಮಧ್ಯೆ ಬಿದಿರಿನ ಬದಲು ಉಕ್ಕಿನ ಕಡ್ಡಿಯಾಗಿದೆ. ಈ ಸಂದರ್ಭದಲ್ಲಿ ತಕಲಿಯ ಚಕ್ರದ ಪ್ರಮಾಣ, ನಡುವಿನ ಕಡ್ಡಿಯ ಪ್ರಮಾಣಗಳ ಬಗ್ಗೆ, ಆ ಪ್ರಮಾಣವೇ ಏಕೆ, ಹೆಚ್ಚು ಕಡಿಮೆ ಏಕೆ ಬೇಡ ಎಂಬುದನ್ನು ಹೇಳಿಯೇನು. ಆಮೇಲೆ ಹತ್ತಿಯ ಪಾಠ ಕೆಲವು, ಹತ್ತಿ ಬೆಳೆಯುವ ಸೀಮೆ, ಬೇರೆ ಬೇರೆ ಬಗೆಯ ಹತ್ತಿ, ಹಿಂದುಸ್ಥಾನದಲ್ಲಿ ಈಗ ಹತ್ತಿ ಎಲ್ಲೆಲ್ಲಿ ಬೆಳೆಯುತ್ತಿದೆ, ಇತ್ಯಾದಿ. ತರುವಾಯ ಹತ್ತಿಯ ಬೇಸಾಯದ ಜ್ಞಾನ, ಅದಕ್ಕೆ ಅನುಕೂಲವಾದ ಉತ್ತಮ ಭೂಮಿ, ಇತ್ಯಾದಿ. ಅದರಿಂದ ವ್ಯವಸಾಯ ಶಾಸ್ತ್ರಕ್ಕೆ ಬರುತ್ತೇವೆ.

ಇಷ್ಟನ್ನೆಲ್ಲ ವಿದ್ಯಾರ್ಥಿಗಳಿಗೆ ತಿಳಿಸಲು ಶಿಕ್ಷಕನಿಗೆ ಚೆನ್ನಾಗಿ ಜೀರ್ಣವಾದ ಜ್ಞಾನಸಂಗ್ರಹ ಬೇಕು. ನೂಲಿನ ಅಳತೆ ಅದರ ನಂಬರನ್ನು ಕಂಡುಹಿಡಿಯುವುದು, ಲಡಿ ಸುತ್ತುವುದು, ಮಗ್ಗಕ್ಕೆ ಅದನ್ನು ಅಣಿ ಮಾಡುವುದು, ಯಾವ ಯಾವ ಬಗೆಯ ಬಟ್ಟೆಗೆ ಎಷ್ಟು ಎಳೆ ದಾರ ಹಾಸು ಹೊಯ್ಯಬೇಕು. ಮುಂತಾದ ಕ್ರಿಯೆಗಳಲ್ಲಿ ಇಡೀ ಅಂಕಗಣಿತವನ್ನು ಕಲಿಸಬಹುದು. ಹತ್ತಿ ಬೆಳೆಯುವುದರಿಂದ ಬಟ್ಟೆಯ ನಿರ್ಮಾಣದವರೆಗೆ—ಹತ್ತಿ ಬಿಡಿಸುವುದು, ಕಾಳು ಅರೆಯುವುದು, ಹಿಂಜುವುದು, ನೂಲುವುದು, ಉಂಕಿ ಮಾಡುವುದು, ನೇಯುವುದು—ಎಲ್ಲಕ್ಕೂ ಯಂತ್ರಶಾಸ್ತ್ರ, ಇತಿಹಾಸ, ಗಣಿತಗಳ ಸಂಬಂಧ, ಸಮನ್ವಯ ಇದೆ.

'ಮುಖ್ಯ ಉದ್ದೇಶ ಇಷ್ಟು: ಶರೀರ ಮನಸ್ಸು, ಆತ್ಮಗಳ ಸರ್ವ ಶಿಕ್ಷಣವನ್ನೂ ಮಕ್ಕಳಿಗೆ ಕಲಿಸುವ ಕೈಕೆಲಸದ ಮೂಲಕವೇ ಕೊಡಬೇಕು. ಕೈಗಾರಿಕೆಯ ಸಮಸ್ತ ಕ್ರಿಯೆಗಳನ್ನೂ ಕಲಿಸಿ, ತನ್ಮೂಲಕ ಮಕ್ಕಳಲ್ಲಿ ಅಡಗಿರುವ ಶಕ್ತಿಯನ್ನು ಹೊರಗೆಳೆಯಬೇಕು. ನಿಮ್ಮ ಇತಿಹಾಸ, ಭೂಗೋಳ, ಗಣಿತಗಳ ಪಾಠಗಳೆಲ್ಲವೂ ಆ ಕೈಗಾರಿಕೆಗೆ ಪೋಣಿಸಿರಬೇಕು. ಸಂಬಂಧಿಸಿರಬೇಕು.'[೨೫]

## ೩

## ಬುದ್ಧಿ ವಿಕಾಸವೋ ವಿನಾಶವೋ ?

ಈಚೆಗೆ ತಿರುವಾಂಕೂರು ಮದರಾಸುಗಳಲ್ಲಿ ಪ್ರವಾಸ ಮಾಡಿದಾಗ ಅನೇಕ 'ಬುದ್ಧಿ ಜೀವಿ'ಗಳನ್ನೂ ವಿದ್ಯಾರ್ಥಿಗಳನ್ನೂ ಕಂಡೆ. ಅವರನ್ನು ನೋಡಿದರೆ ಇದು ಬುದ್ಧಿಯ ಬೆಳೆವಣಿಗೆಯಲ್ಲ, ಬುದ್ಧಿನಾಶ ಎನಿಸಿತು. ಇದು ಆಧುನಿಕ ಶಿಕ್ಷಣದ ತಪ್ಪು. ಈ ಶಿಕ್ಷಣ ಈ ಕೆಟ್ಟ ಪದ್ಧತಿಯನ್ನು ಬೆಳೆಸುತ್ತದೆ. ಮನಸ್ಸನ್ನು ಅಡ್ಡದಾರಿಗೆ ಎಳೆದು, ಬುದ್ಧಿಯ ವಿಕಾಸಕ್ಕೆ ನೆರವಾಗುವ ಬದಲು ಇದಿರು ನಿಲ್ಲುತ್ತದೆ. ಸೇವಾಗ್ರಾಮದಲ್ಲಿ ನಾನು ನಡೆಸಿದ ಪ್ರಯೋಗಗಳು ಇದಕ್ಕೆ ಪುಷ್ಟಿ ಕೊಡುತ್ತಿವೆ. ಆದರೆ ಅವು ಇನ್ನೂ ಅಪೂರ್ಣವಾದುದರಿಂದ ಈಗಲೇ ಆ ಪ್ರಯೋಗಗಳನ್ನು ಆಧಾರವಾಗಿ ಹಿಡಿಯಲಾರೆ. ಶಿಕ್ಷಣದ ಬಗ್ಗೆ ಈಗ ನಾನು ಹೇಳುತ್ತಿರುವ ಅಭಿಪ್ರಾಯಗಳು ೧೯೦೪ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ ಫೀನಿಕ್ಸ್ ಆಶ್ರಮವನ್ನು ಸ್ಥಾಪಿಸಿದಾಗಿನಿಂದಲೂ ನನ್ನ ಮನಸ್ಸಿನಲ್ಲಿ ಇದ್ದೇ ಇವೆ.

ಶರೀರದ ಅವಯವಗಳಿಗೆ, ಕೈಕಾಲು ಕಣ್ಣು ಕಿವಿ ಮೂಗು ಮುಂತಾದುವಕ್ಕೆ, ಕ್ರಮವಾದ ಶಿಕ್ಷಣ ಕೊಟ್ಟು ಅವನ್ನು ಸರಿಯಾಗಿ ಉಪಯೋಗಿಸಿದಾಗಲೇ ನಿಜವಾದ ಬೌದ್ಧಿಕ ಶಿಕ್ಷಣ ಸಿಗುತ್ತದೆ ಎಂದು ನನ್ನ ಅಭಿಪ್ರಾಯ. ಇನ್ನೊಂದು ರೀತಿಯಲ್ಲಿ ಹೇಳುತ್ತೇನೆ: ಮಗುವಿನ ಮೈಯ ಬೇರೆ ಬೇರೆ ಅವಯವಗಳನ್ನು ಜಾಣತನದಿಂದ ಉಪಯೋಗಿಸಬೇಕು. ಮಗುವಿನ ಬುದ್ಧಿ ಶೀಘ್ರವಾಗಿ ವಿಕಾಸಗೊಳ್ಳಲು ಅದೇ ಉತ್ತಮ ಮಾರ್ಗ. ಆದರೆ ಈ ದೇಹ, ಬುದ್ಧಿಗಳ ಬೆಳವಣಿಗೆಗೆ ಆತ್ಮವಿಕಾಸವೂ ಜೊತೆಗೂಡಬೇಕು. ಬರೀ ದೇಹ–ಬುದ್ಧಿಗಳ ಬೆಳವಣಿಗೆ ಮಾತ್ರವೇ ಆದರೆ ಅದು ಅಸಮತೋಲ ಆಗುತ್ತದೆ. ನನ್ನ ಅರ್ಥದಲ್ಲಿ ಆತ್ಮವಿಕಾಸ ಎಂದರೆ ಹೃದಯದ ಶಿಕ್ಷಣ. ಆದುದರಿಂದ ಬುದ್ಧಿಯ ವಿಕಾಸ ಸಮರ್ಪಕವೂ ಸಮಗ್ರವೂ ಆಗಬೇಕಾದರೆ ದೈಹಿಕ, ಆತ್ಮಿಕ ಶಿಕ್ಷಣವೂ ಜೊತೆಯಲ್ಲೇ ಆಗಬೇಕು. ಇವೆಲ್ಲವೂ ಸೇರಿ ಒಂದು ಅಖಂಡ ವಸ್ತು. ಅವನ್ನು ಬಿಡಿಬಿಡಿಯಾಗಿ ಬೇರೆ ಬೇರೆಯಾಗಿ ವಿಕಾಸಗೊಳಿಸುತ್ತೇವೆ ಎಂಬುದು ಈ ಸಿದ್ಧಾಂತದ ಪ್ರಕಾರ ಪೂರಾ ತಿಳಿಗೇಡಿತನ.

ದೇಹ ಮನಸ್ಸು ಆತ್ಮಗಳ ಗುಣಗಳನ್ನು ಸರಿಯಾಗಿ ಮೇಳಗೂಡಿಸದಿದ್ದರೆ, ಸಮನ್ವಯ ಮಾಡದಿದ್ದರೆ ಆಗುವ ಹಾನಿ ಸ್ಪಷ್ಟ. ನಮ್ಮ ಈಗಿನ ತಿರುಗು

ಮುರುಗು ಪರಿಸ್ಥಿತಿಯಲ್ಲಿ ನಾವು ಅದನ್ನು ನೋಡುತ್ತಿಲ್ಲ. ನಮ್ಮ ಹಳ್ಳಿಯ ಜನರನ್ನೆ ನೋಡಿ. ಬಾಲ್ಯದಿಂದಲೂ ಅವರು ತಮ್ಮ ಹೊಲಗಳಲ್ಲಿ ಮುಂಜಾನೆಯಿಂದ ಸಂಜೆಯವರೆಗೆ, ರಾತ್ರಿಯವರೆಗೆ ಕಷ್ಟಪಟ್ಟು ದುಡಿಯುತ್ತಾರೆ—ತಮ್ಮ ದನಗಳ ನಡುವೆ ತಾವೂ ಆ ದನಗಳಂತೆಯೇ. ಅವರ ಬಾಳು ಒಂದು ಕೊನೆಗಾಣದ ಬೇಸರದ ದುಡಿತ; ಬರೀ ಗಾಣದೆತ್ತಿನ ಬಾಳು; ಬಾಳಿನ ಔನ್ನತ್ಯದ ಒಂದು ಝುಳಕಾಗಲಿ ಬುದ್ಧಿಯ ಪ್ರಭೆಯ ಒಂದು ಕಿಡಿಯಾಗಲಿ ಅವರ ಪಾಲಿಗಿಲ್ಲ. ಮನಸ್ಸು ಆತ್ಮಗಳ ವಿಕಾಸಮಾಡಿಕೊಳ್ಳುವ ಅವಕಾಶವೇ ಇಲ್ಲದೆ ದನದ ಮಟ್ಟಕ್ಕೆ ಇಳಿದಿದ್ದಾರೆ, ಪಶುಪ್ರಾಯರಾಗಿದಾರೆ ಅವರು. ಅವರ ಬದುಕಿನಲ್ಲಿ ಎಲ್ಲೋ ತಾಳ ತಪ್ಪಿತು, ಇದಿರು ದಾಳ ಬಿತ್ತು. ಹೇಗೋ ಈ ದುಃಖದಿಂದ ಪಾರಾಗಬೇಕು. ಇತ್ತ ಅವರಿಗೆ ಸಿಗುವ ಶಿಕ್ಷಣವೋ? ಶಾಲೆ ಕಾಲೇಜುಗಳಲ್ಲಿ ಅವರಿಗೆ ಸಿಗುವ ಶಿಕ್ಷಣ ಬರೀ ಬುದ್ಧಿನಾಶ. ಬೌದ್ಧಿಕ ಶಿಕ್ಷಣಕ್ಕೆ ಶರೀರಶ್ರಮದ ಸಂಪರ್ಕ ಸ್ವಲ್ಪವೂ ಇರಬಾರದು, ಇದು ಕೀಳು ಎಂಬುದು ಅವರ ದೃಷ್ಟಿ. ಆದರೆ ಈ ದೇಹ ಕೇಳಬೇಕಲ್ಲ. ಆರೋಗ್ಯವಾಗಿ ಇರಲು ಅದಕ್ಕೆ ಸ್ವಲ್ಪವಾದರೂ ವ್ಯಾಯಾಮ ಬೇಕು. ಅದಕ್ಕಾಗಿ ಒಂದು ನಿಷ್ಫಲ, ಕೃತ್ರಿಮ ವ್ಯಾಯಾಮ ಪದ್ಧತಿಯನ್ನು ಕಲ್ಪಿಸಿಕೊಂಡಿದ್ದಾರೆ. ಅದರ ಪರಿಣಾಮ ಇಷ್ಟು ವಿನಾಶಕರವಾಗಿರದಿದ್ದರೆ ಅದನ್ನು ನೋಡಿ ನಗಬಹುದಾಗಿತ್ತು. ಈ ಬಗೆಯ ವ್ಯಾಯಾಮ ಮಾಡಿದ ತರುಣ ಒಬ್ಬ ಸಾಮಾನ್ಯ ಶ್ರಮಿಕ(ಕೂಲಿ) ಸಹಿಸುವಷ್ಟು ದೇಹ ಕಷ್ಟವನ್ನು ಸಹಿಸಲಾರ. ಸ್ವಲ್ಪ ಮೈ ಆಡಿಸಿದರೆ ಅವನಿಗೆ ತಲೆನೋವು ಪ್ರಾರಂಭ; ಬಿಸಿಲಿಗೆ ಸ್ವಲ್ಪ ಮೈಯೊಡ್ಡಿದರೆ ತಲೆ ತಿರುಗುತ್ತದೆ. ಇದೆಲ್ಲವೂ 'ಸ್ವಾಭಾವಿಕ' ಎಂಬ ಜಂಭ ಬೇರೆ! ಇನ್ನು ಹೃದಯದ ರಸ ಗುಣಗಳೋ, ಬತ್ತಿಹೋಗಬೇಕು ಇಲ್ಲವೆ ದಿಕ್ಕೆಟ್ಟು ದಾರಿ ಕಂಡತ್ತ ಹರಿಯಬೇಕು. ಇದರ ಫಲ—ನೈತಿಕ ಆತ್ಮಿಕ ಉಚ್ಛೃಂಖಲತೆ. ಇದು ಒಂದು ಶ್ರೇಷ್ಠ ಸಾಧನೆಯೆಂಬ ಭ್ರಾಂತಿ ಬೇರೆ!!

ಇದಕ್ಕೆ ಪ್ರತಿಯಾಗಿ, ಪ್ರಾರಂಭದಿಂದಲೂ ಹೃದಯದ ಶಿಕ್ಷಣಕ್ಕೆ ಗಮನ ಕೊಟ್ಟ ಮಗುವಿನ ದೃಷ್ಟಾಂತವನ್ನು ನೋಡಿ. ಅವನಿಗೆ ಯಾವುದಾದರೂ ಪ್ರಯೋಜನಕರ ಉದ್ಯೋಗವನ್ನು ಕೊಡಿ: ನೂಲುವುದೋ ಬಡಗಿ ಕೆಲಸವೋ ಬೇಸಾಯವೋ ಮತ್ತೊಂದೋ. ಅದರ ಮೂಲಕ ಶಿಕ್ಷಣ ಕೊಡಿ. ಅದರಲ್ಲಿ ಅವನು ಏನೇನು ಕ್ರಿಯೆಗಳನ್ನು ಮಾಡಬೇಕೋ ಅವನ್ನೆಲ್ಲ ಕೂಲಂಕಷವಾಗಿ ಸಂಪೂರ್ಣವಾಗಿ ತಾತ್ವಿಕವಾಗಿ ಕಲಿಸಿ, ಅದರ ಸಿದ್ಧಾಂತವನ್ನು ಹೇಳಿ. ಅವನು

ಬಳಸುವ ಉಪಕರಣಗಳನ್ನು ಹೇಗೆ ನಿರ್ಮಿಸಬೇಕೋ ತೋರಿಸಿ. ಅವನ ಮೈ ಸೊಗಸಾಗಿ ಆರೋಗ್ಯವಂತವಾಗಿ ಬೆಳೆದೀತು; ಬುದ್ಧಿಯೂ ಪಕ್ವ, ತೇಜೋವಂತ ಆದೀತು. ಬರೀ ಪುಸ್ತಕ ಪಾಂಡಿತ್ಯದ ಬುದ್ಧಿಯಲ್ಲ, ದಿನದಿನದ ಅನುಭವದಿಂದ ಬೆಳೆದು ಪುಷ್ಟಿಗೊಂಡ ವಿವೇಕ ಅದು. ಅವನ ಕಸಬಿಗೆ ಬೇಕಾದ ಗಣಿತ, ಇತರ ಶಾಸ್ತ್ರಜ್ಞಾನ ಎಲ್ಲವೂ ಅವನ ಶಿಕ್ಷಣದಲ್ಲಿ ಇರುತ್ತವೆ. ಇದಕ್ಕೆ ವಿನೋದ–ಸಂತೋಷಗಳಿಗಾಗಿ ಸಾಹಿತ್ಯವನ್ನು ಸೇರಿಸಿದರೆ ಅವನ ಶಿಕ್ಷಣ ಸಮಗ್ರವೂ ಸರ್ವಾಂಗೀಣವೂ ಸಂಪೂರ್ಣವೂ ಆಯಿತು. ಅದರಿಂದ ಬುದ್ಧಿ ದೇಹ ಆತ್ಮ ಮೂರೂ ಪೂರ್ಣ ವಿಕಾಸಗೊಂಡು ಒಟ್ಟಾಗಿ ಸಹಜವಾಗಿ ಸಮರಸವಾಗುತ್ತವೆ. ಮನುಷ್ಯ ಬರೀ ಬುದ್ಧಿಯೂ ಅಲ್ಲ, ಬರೀ ಜಡ ದೇಹವೂ ಅಲ್ಲ, ಕೇವಲ ಹೃದಯ ಆತ್ಮವೂ ಅಲ್ಲ. ಪೂರ್ಣ ಮನುಷ್ಯನಾಗಲು ಈ ಮೂರೂ ಮೇಳಗೂಡಬೇಕು. ಅದೇ ನಿಜವಾಗಿ ಶಿಕ್ಷಣದ ಪುರುಷಾರ್ಥಸಿದ್ಧಿ ; ಅದರ ಸಾರ್ಥಕತೆ. ಸ್ವಾತಂತ್ರ್ಯ ಬಂದ ಮೇಲೆಯೇ ಈ ತೆರದ ಶಿಕ್ಷಣ ಸಾಧ್ಯ ಎಂದರೆ ಗಾಡಿ ಮುಂದೆ, ಎತ್ತು ಹಿಂದೆ ಆದೀತೇನೋ ಎಂದು ನನಗೆ ಭಯ. ನಮ್ಮ ಕೋಟ್ಯಂತರ ಜನರಿಗೆ ತಮ್ಮ ತಮ್ಮ ಕಸಬನ್ನು ಕೌಶಲದಿಂದ ನಡೆಸುವಂತೆ, ತಮ್ಮ ಬಾಳು ಬದುಕು ಸಮಸ್ತ ಜಗತ್ತಿನ ಸಾಮೂಹಿಕ ಹಿತಕ್ಕಾಗಿ ಎಂದು ಅವರಿಗೆ ಅನಿಸುವಂತೆ, ಶಿಕ್ಷಣ ಕೊಟ್ಟರೆ ಸ್ವಾತಂತ್ರ್ಯೋದಯ ಇನ್ನೂ ಬೇಗನೆ, ನಾವು ನಂಬಲಾರದಷ್ಟು ಬೇಗನೆ ಆದೀತು.೨೬

## ೪

## ರಾಷ್ಟ್ರೀಯ ಶಿಕ್ಷಣದ ಮುಖ್ಯಾಂಶ

ಗುಜರಾತಿನ ರಾಷ್ಟ್ರೀಯ ಶಾಲೆಗಳ ಅಧ್ಯಾಪಕರದೊಂದು ಚಿಕ್ಕ ಸಮ್ಮೇಳನ ಮೇ ೨೨ ರಲ್ಲಿ ಟಿಥಾಲ್‌ನಲ್ಲಿ ನಡೆಯಿತು. ಸಭೆಗೆ ಆಹ್ವಾನಿಸಲಾದವರೆಲ್ಲರಿಗೂ ಸಮ್ಮೇಳನದ ಸಂಚಾಲಕರು ಒಂದು ಪ್ರಶ್ನಾವಳಿಯನ್ನು ಕಳಿಸಿದ್ದರು :

೧) ನಮ್ಮ ಹಳ್ಳಿಗಳಿಗೆ ಉಪಯುಕ್ತ ಲಾಭಕರ ಆದ ಉತ್ತಮ ಶಿಕ್ಷಣ ಪದ್ಧತಿ ಯಾವುದು? ಅಂಥ ಶಿಕ್ಷಣವನ್ನು ಹಳ್ಳಿಗಳಲ್ಲಿ ಹೇಗೆ ಹರಡಬೇಕು ?

೨) ಜನತೆಯ ಅಪಾರ ಅಜ್ಞಾನ, ಅನಕ್ಷರತೆಗಳನ್ನು ಹೋಗಲಾಡಿಸುವುದು ಹೇಗೆ ?

೩) ಬುದ್ಧಿಯ ವಿಕಾಸಕ್ಕೆ ಅಕ್ಷರಜ್ಞಾನ ಅನಿವಾರ್ಯವೆ? ಅಕ್ಷರಜ್ಞಾನ

ವನ್ನೂ ಓದು ಬರೆಹವನ್ನೂ ಓಂ ಪ್ರಥಮ ಎಂದು ಪ್ರಾರಂಭಿಸಿದರೆ ಆ ವಿದ್ಯಾಭ್ಯಾಸ ಬುದ್ಧಿವಿಕಾಸಕ್ಕೆ ಅಡ್ಡವಾಗುತ್ತದೆಯೆ ?

೪) ಸಮಸ್ತ ಶಿಕ್ಷಣಕ್ಕೂ ವೃತ್ತಿ ಶಿಕ್ಷಣವನ್ನೇ ತಿರುಗಲಿಯಾಗಿ ಮಾಡುವ ಅಗತ್ಯ.

೫) ಈಗಿನ ರಾಷ್ಟ್ರೀಯ ಶಾಲೆಗಳ ಭವಿಷ್ಯ.

೬) ಶಿಕ್ಷಣವನ್ನು ಮೊದಲಿನಿಂದ ಕಡೆಯವರೆಗೂ ಮಕ್ಕಳ ತಾಯಿನುಡಿಯ ಮೂಲಕವೇ ಕೊಡಲಾದೀತೆ ?

೭) ಈಗಿನ ಶಾಲೆಗಳಲ್ಲಿ ರಾಷ್ಟ್ರೀಯ ಶಿಕ್ಷಣದ ಯಾವ ಯಾವ ಮುಖ್ಯಾಂಶಗಳ ಅಭಾವವಿದೆ ?

೮) ಪ್ರಾಥಮಿಕ–ಪ್ರೌಢ ತರಗತಿಗಳಲ್ಲಿ ಹಿಂದಿ ಹಿಂದೂಸ್ತಾನಿಯನ್ನು ಬಲಾತ್ಕಾರವಾಗಿ ಕಲಿಸುವ ಅಗತ್ಯ.

ಈ ಪ್ರಶ್ನೆಗಳ ಬಗ್ಗೆ ಗಾಂಧೀಜಿಯ ಅಭಿಪ್ರಾಯವನ್ನು ಕೇಳಲಾಯಿತು. ಅವರು ಹೇಳಿದುದರ ಸಾರಾಂಶ ಇದು :

"ನಮ್ಮ ಹಳ್ಳಿಗಳಿಗೆ ಅತ್ಯುತ್ತಮವಾಗಿ ಹೊಂದಿಕೊಳ್ಳುವ ಶಿಕ್ಷಣವನ್ನು ಕೊಡಬೇಕೆಂದರೆ, ನಮ್ಮ ವಿದ್ಯಾಪೀಠವನ್ನು ಹಳ್ಳಿಗಳಿಗೇ ಒಯ್ಯಬೇಕು. ನಮ್ಮ ಹಳ್ಳಿಗಳ ಅಗತ್ಯಕ್ಕೆ ತಕ್ಕಂತೆ ಶಿಕ್ಷಕರಿಗೆ ಕ್ರಿಯಾತ್ಮಕ ಶಿಕ್ಷಣವನ್ನು ಕೊಡಲು ವಿದ್ಯಾಪೀಠವನ್ನು ಅಧ್ಯಾಪಕ ಶಿಕ್ಷಣ ಶಾಲೆಯನ್ನಾಗಿ ಮಾಡಬೇಕು. ಪಟ್ಟಣಗಳಲ್ಲಿ ಅಧ್ಯಾಪಕ ಶಾಲೆ ನಡೆಸಿ ಹಳ್ಳಿಗಳಿಗೆ ಬೇಕಾದ ಶಿಕ್ಷಣವನ್ನು ಶಿಕ್ಷಕರಿಗೆ ಕೊಡಲು ಸಾಧ್ಯವಿಲ್ಲ. ಹಳ್ಳಿಗಳ ಸ್ಥಿತಿಯ ಬಗ್ಗೆ ಅವರಿಗೆ ಆಸಕ್ತಿಯನ್ನು ಹುಟ್ಟಿಸಲೂ ಸಾಧ್ಯವಿಲ್ಲ. ಪಟ್ಟಣಿಗರಿಗೆ ಹಳ್ಳಿಗಳಲ್ಲಿ ರುಚಿ ಹುಟ್ಟಿಸಿ ಅವರು ಹಳ್ಳಿಗಳಲ್ಲಿ ಬಾಳುವಂತೆ ಮಾಡುವುದು ಸುಲಭವಲ್ಲ. ಸೇವಾಗ್ರಾಮದಲ್ಲಿ ದಿನದಿನವೂ ನನಗೆ ಇದು ಅನುಭವವಾಗುತ್ತಿದೆ. ಒಂದು ವರ್ಷವಾಯಿತು ನಾವು ಇಲ್ಲಿಗೆ ಬಂದು ನೆಲೆಸಿ. ನಾವು ಇನ್ನೂ ಹಳ್ಳಿಗರಾಗಿಲ್ಲ. ಸಮಷ್ಟಿ ಹಿತಕ್ಕಾಗಿ ನಾವು ಅವರೊಡನೆ ಬೆರೆತು ಹೋಗಿದೇವೆ ಎನ್ನುವ ಹಾಗೂ ಇಲ್ಲ.

"ಇನ್ನು ಪ್ರಾಥಮಿಕ ಶಿಕ್ಷಣದ ವಿಷಯ-ಅಕ್ಷರಾಭ್ಯಾಸ, ಓದು ಬರೆಹಗಳಿಂದ ಶಿಕ್ಷಣವನ್ನು ಮೊದಲಿಟ್ಟರೆ ಬುದ್ಧಿಯ ವಿಕಾಸಕ್ಕೆ ಅಡ್ಡಿಯಾಗುತ್ತದೆ ಎಂದು ನನ್ನ ದೃಢಾಭಿಪ್ರಾಯ. ಮಕ್ಕಳಿಗೆ ಸ್ವಲ್ಪಮಟ್ಟಿಗೆ ಇತಿಹಾಸ, ಭೂಗೋಳ, ಮನೋಗಣಿತಗಳ ಜ್ಞಾನ, ಕಲಾಪರಿಚಯ-ನೂಲುವ ಕಲೆ ಎನ್ನಿ-

ಆಗುವವರೆಗೆ ನಾನು ಅವರಿಗೆ ಅಕ್ಷರ ಕಲಿಸುವುದಿಲ್ಲ. ಈ ಮೂರರ ಮೂಲಕ ಅವರ ಬುದ್ಧಿಯನ್ನು ವಿಕಾಸಗೊಳಿಸುತ್ತೇನೆ. ತಕಲಿಯಿಂದ ರಾಟೆಯಿಂದ ಬುದ್ಧಿಯನ್ನು ಹೇಗೆ ಬೆಳೆಸುತ್ತೀರಿ ಎಂದು ಕೇಳಬಹುದು. ಬರೀ ಯಾಂತ್ರಿಕವಾಗಿ ಕಲಿಸದಿದ್ದರೆ ಅದರಿಂದ ಅತ್ಯಾಶ್ಚರ್ಯಕರವಾಗಿ ಬುದ್ಧಿ ಬೆಳೆಯುತ್ತದೆ. ಪ್ರತಿಯೊಂದು ಕ್ರಿಯೆಗೂ ಕಾರಣ ಹೇಳಿ, ತಕಲಿ-ರಾಟೆಗಳ ರಚನೆಯ ವಿವರಗಳನ್ನು ತಿಳಿಸಿ, ಹತ್ತಿಯ ಇತಿಹಾಸವನ್ನೂ ಅದಕ್ಕೂ ನಾಗರಿಕತೆಗೂ ಇರುವ ಸಂಬಂಧವನ್ನೂ ವರ್ಣಿಸಿ, ಮಗುವನ್ನು ಹತ್ತಿಯ ಹೊಲಕ್ಕೇ ಕರೆದೊಯ್ದು, ಅವನು ನೂತ ನೂಲಿನ ಸುತ್ತುಗಳನ್ನು ಎಣಿಸಲು, ಅವನ ನೂಲಿನ ಬಲ ಸಮಾನತೆಗಳನ್ನು ಅರಿತುಕೊಳ್ಳಲು ಕಲಿಸಿದರೆ ಅವನಿಗೆ ಕಲಿತದಲ್ಲಿ ರುಚಿ ಹುಟ್ಟುತ್ತದೆ. ಅವನ ಕೈ ಕಣ್ಣು ಮನಸ್ಸುಗಳನ್ನು ಒಂದೇ ಸಲ ಒಟ್ಟಿಗೆ ತರಬೇತು ಮಾಡುತ್ತೀರಿ. ಈ ಪ್ರಾಥಮಿಕ ಶಿಕ್ಷಣಕ್ಕೆ ಆರು ತಿಂಗಳು ಸಾಕು. ಅಷ್ಟು ಹೊತ್ತಿಗೆ ಮಗು ಅಕ್ಷರ ಓದುವುದನ್ನು ಕಲಿಯಲು ಪಕ್ವವಾಗಿರುತ್ತದೆ. ಅಕ್ಷರಗಳನ್ನು ವೇಗವಾಗಿ ಓದುವ ಹೊತ್ತಿಗೆ ಚಿಕ್ಕಪುಟ್ಟ ಸರಳ ಚಿತ್ರಲೇಖನವನ್ನು ಪ್ರಾರಂಭಿಸಿದ್ದರೆ, ಪಶು ಪಕ್ಷಿಗಳ ರೇಖಾಗಣಿತದ ಆಕೃತಿಗಳ ಚಿತ್ರಗಳನ್ನು ಬರೆಯತೊಡಗಿ, ಅಕ್ಷರಗಳನ್ನು ಈಗಿನಂತೆ ತಿದ್ದದ ತೀಡದೆ ಮುದ್ದಾಗಿ ಚಿತ್ರಿಸುತ್ತಾನೆ. ಚಿಕ್ಕಂದಿನಲ್ಲಿ ನನಗೆ ಅಕ್ಷರಾಭ್ಯಾಸ ಮಾಡಿಸುತ್ತಿದ್ದುದು ನೆನಪಿದೆ. ಎಷ್ಟು ಬೇಸರದ ಕೆಲಸ ! ನನ್ನ ಬುದ್ಧಿಗೆ ಏಕೆ ಮಂಕು ಹಿಡಿದಿತ್ತೋ ಯಾರೂ ವಿಚಾರಿಸಲೇ ಇಲ್ಲ. ಬರೆವಣಿಗೆ ಒಂದು ಚಿತ್ರಕಲೆ. ಎಳೆಯ ಮಕ್ಕಳ ಮೇಲೆ ವರ್ಣಮಾಲೆಯ ಭಾರ ಹೊರಿಸಿ ಅಕ್ಷರಾಭ್ಯಾಸದಿಂದ ವಿದ್ಯಾಭ್ಯಾಸವನ್ನು ಮೊದಲಿಟ್ಟು, ಆ ಕಲೆಯನ್ನು ನಿರ್ನಾಮಮಾಡಿದೇವೆ. ಇತ್ತ ಆ ಕಲೆಯೂ ನಾಶ ; ಕಾಲಕ್ಕೆ ಮುಂಚೆಯೇ ಅಕಾಲದಲ್ಲಿ ಅಕ್ಷರ ಕಲಿಸಿ ಅತ್ತ ಮಗುವಿನ ಬೆಳವಣಿಗೆಗೂ ಅಡ್ಡಿ.

"ನಮ್ಮ ಅನಕ್ಷರತೆಗೆ ನಾವೇನು ನಾಚಬೇಕಾಗಿಲ್ಲ. ನಮ್ಮ ಅಜ್ಞಾನಕ್ಕೆ ತಲೆ ತಗ್ಗಿಸಬೇಕು. ಆದುದರಿಂದ ಅಜ್ಞಾನ ನಿರ್ಮೂಲನಕ್ಕಾಗಿ ವಯಸ್ಕರ ಶಿಕ್ಷಣದ ತೀವ್ರ ಕಾರ್ಯಕ್ರಮವನ್ನು ಕೈಗೊಳ್ಳಬೇಕು. ಯೋಗ್ಯರಾದ ಶಿಕ್ಷಕರನ್ನು ಆರಿಸಿ, ಜಾಗರೂಕತೆಯಿಂದ ಒಂದು ಪಾಠಕ್ರಮವನ್ನು ಅಣಿಮಾಡಿ, ಅದರ ಪ್ರಕಾರ ಗ್ರಾಮಸ್ಥರ ಮನಸ್ಸನ್ನು ತಿದ್ದಿ ಎನ್ನಬೇಕು. ಹಳ್ಳಿಯವರಿಗೆ ಅಕ್ಷರ ಕಲಿಸುವುದಿಲ್ಲವೆಂದಲ್ಲ. ವರ್ಣಮಾಲೆಯನ್ನು ಸುಲಭವಾಗಿ ಕಲಿಯಲು ಪ್ರೊ. ಲಾಬಾಕ್ ಮಾಡಿರುವ ಪ್ರಯೋಗಗಳನ್ನೂ, ಅದೇ ಮಾರ್ಗದಲ್ಲಿ ಪ್ರೊ.

ಭಾಗವತರು ಮಾಡಿರುವ ಕೆಲಸವನ್ನೂ ನಾನು ಒಪ್ಪಿದೇನೆ. ಬಿಡುವಿದ್ದಾಗ ಸೇವಾಗ್ರಾಮಕ್ಕೆ ಬಂದು ಇಲ್ಲಿನ ಗಂಡಸರಿಗೆ ಹೆಂಗಸರಿಗೆ, ಮಕ್ಕಳಿಗೆ ಕೂಡ, ನಿಮ್ಮ ಕಲೆಯ ಪರಿಚಯಮಾಡಿಕೊಡಿ ಎಂದು ಭಾಗವತರಿಗೆ ಬರೆದಿದ್ದೇನೆ.

"ಶಿಕ್ಷಣದ ಮಧ್ಯಬಿಂದುವಾಗಿ ಗ್ರಾಮೋದ್ಯೋಗಗಳನ್ನು ಕಲಿಸುವುದು ಅಗತ್ಯ, ಪ್ರಯೋಜನಕರ ಎಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ಹಿಂದುಸ್ತಾನದ ಪಾಠಶಾಲೆಗಳಲ್ಲಿ ಇರುವ ಪದ್ಧತಿಯನ್ನು ನಾನು ಶಿಕ್ಷಣ-ಎಂದರೆ ಮನುಷ್ಯನೊಳಗಿರುವ ಉತ್ತಮ ಗುಣಗಳ ವಿಕಾಸ-ಎನ್ನುವುದಿಲ್ಲ; ಇದು ಹೇಗೋ ಅಂತೂ ಮನಸ್ಸಿಗೆ ತುರುಕುತ್ತದೆ. ಅದೇ ಗ್ರಾಮೋದ್ಯೋಗಗಳ ಮೂಲಕ ಮೊದಲಿನಿಂದಲೇ ಪ್ರಧಾನವಾಗಿ ಮನಸ್ಸನ್ನು ತಿದ್ದಿದರೆ, ಮನಸ್ಸು ವಾಸ್ತವವಾಗಿ ಸಂಯಮಪೂರ್ಣವಾಗಿ ವಿಕಸಿಸಿ, ಬುದ್ಧಿಶಕ್ತಿಯ ಅಪವ್ಯಯವಾಗದೆ ಸಂರಕ್ಷಣೆಯಾಗುತ್ತದೆ. ಅಪ್ರತ್ಯಕ್ಷವಾಗಿ ಆತ್ಮಿಕ ಶಕ್ತಿಯ ಸಂಗ್ರಹವೂ ಆಗುತ್ತದೆ. ಹೀಗೆಂದರೆ ನಾನು ಕುಶಲ ಕಲೆಗಳನ್ನು ಗೌಣ ಎಂದಂತೆ ಅಲ್ಲ. ಆದರೆ ಅದನ್ನು ಇಡಬಾರದ ಕಡೆ ನಾನು ಇಡಲಾರೆ. ಸಿಕ್ಕಾಪಟ್ಟೆ ಬಿಸಾಡಿದ ಪದಾರ್ಥಗಳನ್ನು ಕಸ ಎನ್ನುತ್ತಾರೆ. ನಮ್ಮ ಮೇಲೆ ಮಳೆಗರೆದಂತೆ ಸುರಿಯುತ್ತಿರುವ ಗಾಡಿಗಟ್ಟಲೆ ಅಶ್ಲೀಲ, ಅಪ್ರಯೋಜಕ ಗ್ರಂಥರಾಶಿಯನ್ನು, ಅದರ ಪರಿಣಾಮವನ್ನು ನೋಡಬಾರದೆ? ಇದಕ್ಕಿಂತ ಬೇರೆ ಸಾಕ್ಷ್ಯ ಬೇಕೆ?"[೨೭]

೫೫

## ಸಾಕ್ಷರತೆಯ ಬಗ್ಗೆ

ಶಿಕ್ಷಣದ ಬಗ್ಗೆ ಬರೆಯುತ್ತಿದೇನಲ್ಲ. ಅದರ ಬಗ್ಗೆ ಅನೇಕರು ಅಭಿಪ್ರಾಯ ಸೂಚಿಸಿದ್ದಾರೆ. ಕೆಲವನ್ನು ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದಿದೇನೆ. ಒಬ್ಬ ವಿದ್ವಾವಂತ ನಾನು ಸಾಕ್ಷರತೆಯನ್ನು ಅಸಡ್ಡೆ ಮಾಡಿದ್ದೇನೆ ಎಂದು ದೂರಿದ್ದಾನೆ. ನಿಜವಾಗಿ ನಾನು ಬರೆದುದರಲ್ಲಿ ಈ ದೂರಿಗೆ ಅವಕಾಶವೇ ಇಲ್ಲ. ನಾನು ಕಲ್ಪಿಸಿಕೊಂಡ ಶಾಲೆಗಳಲ್ಲಿ ಕೈಗಾರಿಕೆಯ ಮೂಲಕ ಎಲ್ಲಾ ಶಿಕ್ಷಣವೂ ಸಿಗುತ್ತದೆ ಎಂದಿಲ್ಲವೆ? ಅದರಲ್ಲಿ ಅಕ್ಷರಾಭ್ಯಾಸವೂ ಬಂತು. ನನ್ನ ಯೋಜನೆಯಲ್ಲಿ ಅಕ್ಷರ ತಿದ್ದುವ ಮೊದಲು, ಚಿತ್ರ ಬರೆಯುವ ಮೊದಲು, ಮಗುವಿನ ಕೈ ಉಪಕರಣಗಳನ್ನು ಮುಟ್ಟನ್ನು ಹಿಡಿಯುತ್ತದೆ. ಕಣ್ಣು ಅಕ್ಷರ-ಚಿತ್ರವನ್ನು ಶಬ್ದಗಳನ್ನು ಓದುತ್ತದೆ. ಆ ಪದಾರ್ಥಗಳೆಲ್ಲ ಬದುಕಿನಲ್ಲಿ ಗುರುತಾಗಿವೆಯಲ್ಲ.

ಕಿವಿಗೆ ಆ ಪದಾರ್ಥಗಳ ಹೆಸರು, ವಾಕ್ಯಗಳ ಅರ್ಥ ತಿಳಿಯುತ್ತದೆ. ಈ ಶಿಕ್ಷಣ ವೆಲ್ಲವೂ ಸ್ವಾಭಾವಿಕ, ಮಕ್ಕಳು ಇದಕ್ಕೆ ಶ್ರುತಿಗೂಡಿಸುತ್ತಾರೆ, ಸಮರಸರಾಗು ತ್ತಾರೆ. ಆದುದರಿಂದ ಈ ಶಿಕ್ಷಣ ಬಹಳ ಶೀಘ್ರಫಲದಾಯಕ. ಬಹಳ ಅಗ್ಗ. ನನ್ನ ಶಾಲೆಯ ಹುಡುಗರು ಬಲು ಬೇಗ ಓದುವುದನ್ನು ಕಲಿತಾರು. ಬರೆಯುವು ದನ್ನು ನಿಧಾನವಾಗಿ ಕಲಿತಾರು. ಬರೆಯಲು ಮೊದಲಿಟ್ಟಾಗ, ಈಗಲೂ ನಾನು ಗೀಚುವ ಸೊಟ್ಟ ಸೊಟ್ಟ ಅಕ್ಷರಗಳ ಹಾಗೆ, ಅವರು ಗೀಚರು; ಕಣ್ಣೆದಿರಿನ ಪದಾರ್ಥಗಳನ್ನು ಚಿತ್ರಿಸುವಂತೆ ಸುಂದರವಾಗಿ ಅಕ್ಷರ ಬರೆದಾರು. ನಾನು ಕಲ್ಪಿಸಿಕೊಂಡಂಥ ಶಾಲೆಗಳು ಹುಟ್ಟಿದುದೇ ಆದರೆ, ಓದುವುದರಲ್ಲಿ ಎಂಥ ಮುಂಬರಿದ ಶಾಲೆಗೂ ಸಮನಾದಾವು. ಈಗಿರುವ ಹಾಗೆ ಏನೋ ಸೊಟ್ಟು ಸೊಟ್ಟಾಗಿ ಗೀಚದೆ ಚೆನ್ನಾಗಿ ಸರಿಯಾಗಿ ಬರೆದುದೇ ಬರೆವಣಿಗೆ ಎಂದರೆ ಅದರಲ್ಲಿಯೂ ಸಮನೇ. ಸೇವಾಗ್ರಾಮದ ಶಾಲೆಯ ಮಕ್ಕಳು ಸಾಂಪ್ರದಾಯಿಕ ರೀತಿಯಲ್ಲಿ ಬರೆಯುತ್ತಾರೆ. ನನ್ನ ಅಭಿಪ್ರಾಯದಲ್ಲಿ ಕಾಗದ ಹಲಗೆಗಳನ್ನು ಹಾಳುಮಾಡುತ್ತಾರೆ.೨೮

೭

## ಹೊಸ ಶಿಕ್ಷಣದಿಂದ ಏನು ಲಾಭ ?

[ನಯೀ ತಾಲೀಂ ಎಂಬ ಪತ್ರಿಕೆಯನ್ನು ವರ್ಧಾದ ತಾಲೀಮೀ ಸಂಘ ಪ್ರಾರಂಭಿಸಿತು. ಆಗ ಅದಕ್ಕೆ ಕಳಿಸಿದ ಸಂದೇಶ]

**ನಯೀ ತಾಲೀಂ**ನ ಹೊಸತನವನ್ನೂ ಸ್ವತಂತ್ರತೆಯನ್ನೂ ಅರಿಯ ಬೇಕಾದುದು ಆವಶ್ಯಕ. ಹಿಂದಿನ ಶಿಕ್ಷಣದಲ್ಲಿ ಒಳ್ಳೆಯದು ಏನೇನಿತ್ತೋ ಅದೆಲ್ಲವೂ ಹೊಸ ಶಿಕ್ಷಣದಲ್ಲಿ ಇದ್ದೇ ಇರುತ್ತದೆ. ಅದಲ್ಲದೆ ಬೇಕಾದಷ್ಟು ಹೊಸ ವಸ್ತುವೂ ಇರುತ್ತದೆ. ಹೊಸ ಶಿಕ್ಷಣ ನಿಜವಾಗಿಯೂ ಹೊಸದಾದರೆ ಈ ಫಲ ಗಳನ್ನು ಕೊಡಬೇಕು; ಈಗಿನ ನಮ್ಮ ಹತಾಶಾವಾದ ಹೋಗಿ ಆಸೆ ಚಿಗುರ ಬೇಕು ; ನಮ್ಮ ಬಡತನ ಉಪವಾಸ ಕಳೆದು ನಮ್ಮ ಬದುಕಿಗೆ ಅಗತ್ಯವಾದಷ್ಟು ಸಿಗಬೇಕು ; ನಿರುದ್ಯೋಗ ನೀಗಿ ಉದ್ಯೋಗ, ಕೆಲಸ ಕಾಣಬೇಕು ; ವಿರಸ ಅಳಿದು ಸಮರಸ ಹುಟ್ಟಬೇಕು. ನಮ್ಮ ಮಕ್ಕಳು ಓದು ಬರೆಹವನ್ನೂ ಅದರ ಮೂಲಕ ಜ್ಞಾನವನ್ನೂ ಗಳಿಸಬೇಕು.೨೯

———

## ಅಧ್ಯಾಯ ೨

# ಶಿಕ್ಷಣ ಪ್ರಯೋಗಗಳು

### ಮನೆಯಲ್ಲಿ ಶಿಕ್ಷಣ

ಡರ್ಬನ್‌ನಲ್ಲಿ ಇಳಿದಾಗ ನನ್ನ ಸಂಗಡ ಮೂವರು ಹುಡುಗರು ಇದ್ದರು. ನಮ್ಮ ಅಕ್ಕನ ಮಗ ಹತ್ತು ವರ್ಷದವನು; ಒಂಬತ್ತು ವರ್ಷದವನೊಬ್ಬ, ಐದು ವರ್ಷದವನೊಬ್ಬ-ನನ್ನ ಮಕ್ಕಳು. ಅವರ ಶಿಕ್ಷಣಕ್ಕೆ ಏನು ವ್ಯವಸ್ಥೆ ?

ಹಿಂದುಸ್ಥಾನಕ್ಕೆ ಅವರನ್ನು ಹಿಂದಕ್ಕೆ ಕಳಿಸಲು ನನಗೆ ಇಷ್ಟವಿರಲಿಲ್ಲ. ಚಿಕ್ಕ ಮಕ್ಕಳನ್ನು ತಂದೆ ತಾಯಿಗಳಿಂದ ಅಗಲಿಸಬಾರದೆಂದು ಆಗಿನಿಂದಲೂ ನನಗೆ ದೃಢಾಭಿಪ್ರಾಯ. ಸುವ್ಯವಸ್ಥಿತವಾದ ಕುಟುಂಬದಲ್ಲಿ ಸಹಜವಾಗಿಯೆ ಮಕ್ಕಳು ಪಡೆಯುವ ಶಿಕ್ಷಣ ವಿದ್ಯಾರ್ಥಿ ನಿಲಯಗಳಲ್ಲಿ ಸಾಧ್ಯವಿಲ್ಲ. ಆದ್ದರಿಂದ ಮಕ್ಕಳನ್ನು ನನ್ನ ಬಳಿಯಲ್ಲೇ ಇಟ್ಟುಕೊಂಡೆ.

ಆದರೆ ನಾನು ಎಷ್ಟು ವೇಳೆಯನ್ನು ಕೊಡಬೇಕೆಂದು ಬಯಸಿದೆನೋ ಅಷ್ಟು ವೇಳೆಯನ್ನು ಅವರಿಗೆ ಕೊಡಲಾಗಲಿಲ್ಲ. ಸಾಕಷ್ಟು ಗಮನ ಕೊಡಲು ನನಗೆ ಆಗದಿದ್ದರೂ ಇತರ ಅನಿವಾರ್ಯ ಕಾರಣಗಳೂ ಸೇರಿ ನನಗೆ ಇಷ್ಟವಿದ್ದಷ್ಟು ಅಕ್ಷರಜ್ಞಾನವನ್ನು ಅವರಿಗೆ ಕೊಡಲಾಗಲಿಲ್ಲ ಈ ವಿಷಯದಲ್ಲಿ ನನ್ನ ಮಕ್ಕಳೆಲ್ಲರೂ ನನ್ನ ವಿರುದ್ಧ ದೂರಿದಾರೆ. ಒಬ್ಬ ಎಂ.ಎ., ಬಿ.ಎ., ಅಥವಾ ಮೆಟ್ರಿಕ್ ಆದವರನ್ನು ಕಂಡರೆ ತಮಗೆ ಶಾಲಾ ಶಿಕ್ಷಣವಿಲ್ಲದೆ ಹೋಯಿತಲ್ಲ ಎಂದುಕೊಂಡಿದಾರೆ.

ಆದರೆ ನನ್ನ ಅಭಿಪ್ರಾಯದಲ್ಲಿ, ಹೇಗಾದರೂ ಮಾಡಿ ಅವರನ್ನು ಸಾರ್ವಜನಿಕ ಶಾಲೆಗಳಿಗೆ ಕಳಿಸಿ ಓದಿಸಲು ನಾನು ಹಟ ತೊಟ್ಟಿದ್ದರೆ ಅನುಭವದ ಶಾಲೆಯಲ್ಲಿ ಅಥವಾ ತಂದೆ ತಾಯಿಗಳ ಸಹವಾಸದಿಂದ ದೊರೆಯುವ ಶಿಕ್ಷಣ ಅವರಿಗೆ ತಪ್ಪಿ ಹೋಗುತ್ತಿತ್ತು, ನನ್ನ ಮಕ್ಕಳ ಓರಗೆಯವರು ಅನೇಕರಿದಾರೆ-ಅವರು ನಮ್ಮ ಹುಡುಗರಿಗಿಂತ ವ್ಯಕ್ತಿಶಃ ಉತ್ತಮರೆಂದಾಗಲಿ ಅವರಿಂದ ನಮ್ಮ ಹುಡುಗರು ಕಲಿಯಬೇಕಾದುದು ಇದೆ ಎಂದಾಗಲಿ ನನಗನಿಸದು.

ಆದರೆ ನನ್ನ ಪ್ರಯೋಗದ ಅಂತಿಮ ಫಲ ಕಾಲಗರ್ಭದಲ್ಲಿ. ಇದನ್ನು ಇಲ್ಲಿ ಚರ್ಚಿಸಲು ಕಾರಣ, ನಾಗರಿಕತೆಯ ಇತಿಹಾಸದ ವಿದ್ಯಾರ್ಥಿಗೆ ಸಂಯಮ-

ಪೂರ್ಣ ಗೃಹಶಿಕ್ಷಣಕ್ಕೂ ಶಾಲಾ ಶಿಕ್ಷಣಕ್ಕೂ ಇರುವ ವ್ಯತ್ಯಾಸ ತಿಳಿಯಲಿ ಎಂದು.

ಆತ್ಮಗೌರವಕ್ಕೆ ಗಮನ ಕೊಡದೆ ಯಾವುದೋ ಒಂದು ಶಾಲೆಯಲ್ಲಿ ನಮ್ಮ ಹುಡುಗರಿಗೆ ಶಿಕ್ಷಣ ಕೊಡಿಸಿದ್ದರೆ, ಅಕ್ಷರ ಶಿಕ್ಷಣ ಸಿಗದಿದ್ದರೂ ಸಾಕು ಅವರಿಗೆ ಕೊಟ್ಟ ಸ್ವಾತಂತ್ರ್ಯ–ಆತ್ಮ ಗೌರವಗಳ ಶಿಕ್ಷಣ ಸಿಗುತ್ತಿರಲಿಲ್ಲ. ಅವರಲ್ಲಿ ಸೇವಾಭಾವ, ಸರಳತೆಗಳು ಮೂಡುತ್ತಿರಲಿಲ್ಲ. ಸ್ವಾತಂತ್ರ್ಯ ಬೇಕೆ, ಶಿಕ್ಷಣ ಬೇಕೆ ಎಂದರೆ ಸಾವಿರ ಪಾಲಿಗೂ ಸ್ವಾತಂತ್ರ್ಯವೇ ಬೇಕು ಎನ್ನುವವರು ಯಾರು ?

## ಟಾಲ್‌ಸ್ಟಾಯ್ ಫಾರಂನಲ್ಲಿ

ಫಾರಂ ಬೆಳೆದಂತೆ ಬಾಲಕ ಬಾಲಕಿಯರಿಗೆ ಶಿಕ್ಷಣ ಒದಗಿಸುವುದು ಅನಿವಾರ್ಯವಾಯಿತು. ಈಗಿನ ಶಿಕ್ಷಣ ಪದ್ಧತಿಯಲ್ಲಿ ನನಗೆ ನಂಬಿಕೆಯಿರಲಿಲ್ಲ. ಪ್ರಯೋಗಮಾಡಿ ಅನುಭವದಿಂದ ನಿಜವಾದ ಪದ್ಧತಿಯನ್ನು ತಿಳಿದುಕೊಳ್ಳಬೇಕೆಂದು ನನಗೆ ಮನಸ್ಸಿತ್ತು. ಇಷ್ಟು ಮಾತ್ರ ನನಗೆ ಗೊತ್ತಿತ್ತು- ಆದರ್ಶ ಪರಿಸ್ಥಿತಿಯಲ್ಲಿ ನಿಜವಾದ ಶಿಕ್ಷಣ ತಂದೆ ತಾಯಿಗಳೇ ನೀಡಬಲ್ಲವರು, ಹೊರಗಿನ ಸಹಾಯ ಆದಷ್ಟು ಕಡಮೆ ಇರಬೇಕು. ಟಾಲ್‌ಸ್ಟಾಯ್ ಫಾರಂ ಒಂದು ಕುಟುಂಬ, ನಾನು ಅದರಲ್ಲಿ ತಂದೆ ಇದ್ದ ಹಾಗೆ, ಆದ್ದರಿಂದ ಮಕ್ಕಳ ಶಿಕ್ಷಣದ ಜವಾಬ್ದಾರಿಯನ್ನು ನಾನು ಹೊರಬೇಕು.

ಗುಣವಿಕಾಸಕ್ಕೆ, ಹೃದಯದ ಶಿಕ್ಷಣಕ್ಕೆ ನಾನು ಯಾವಾಗಲೂ ಮೊದಲಿನ ಸ್ಥಾನಕೊಡುತ್ತಿದ್ದೆ. ಆದ್ದರಿಂದ ವಯೋ ಭೇದ ಸಂಪ್ರದಾಯ ಭೇದ ಎಷ್ಟೇ ಇದ್ದರೂ ಎಲ್ಲರಿಗೂ ಒಂದೇ ಬಗೆಯ ನೈತಿಕ ಶಿಕ್ಷಣವನ್ನು ಕೊಡಬಹುದು ಎಂಬ ವಿಶ್ವಾಸವಿತ್ತು. ಅವರ ನಡುವೆ ಇಪ್ಪತ್ತುನಾಲ್ಕು ಗಂಟೆಯೂ ಇರೋಣ ಎಂದು ತೀರ್ಮಾನಿಸಿದೆ. ಗುಣವಿಕಾಸವೆ ಶಿಕ್ಷಣದ ತಳಹದಿ, ತಳಹದಿಯನ್ನು ಭದ್ರವಾಗಿ ಹಾಕಿದರೆ ಉಳಿದದ್ದೆಲ್ಲ ತಾನೇ ಬರುತ್ತದೆ, ಸ್ನೇಹಿತರಿಂದ ಕಲಿತರೂ ಸರಿ.

ಆದರೆ ಇದರ ಜೊತೆಗೆ ಅಕ್ಷರ ಜ್ಞಾನವೂ ಇರಲೇಬೇಕೆಂದು ತಿಳಿದು ಕಾಲೆನ್‌ಬಾಕ್, ಪ್ರಾಗ್ಜೀ ದೇಸಾಯಿಗಳ ಸಹಾಯದಿಂದ ಕೆಲವು ತರಗತಿಗಳನ್ನು ಪ್ರಾರಂಭಿಸಿದೆ. ದೃಢಶರೀರದ ಬೆಳವಣಿಗೆಗೂ ಗಮನ ಕೊಡದೆ ಇರಲಿಲ್ಲ. ದಿನ

ಚರಿಯಲ್ಲಿ ಅದು ಇರುತ್ತಿತ್ತು. ಫಾರಂನಲ್ಲಿ ಆಳುಕಾಳು ಇರಲಿಲ್ಲ. ಅಡಿಗೆ ಯಿಂದ ಕಸಗುಡಿಸುವವರೆಗೆ ಎಲ್ಲಾ ಕೆಲಸವನ್ನೂ ಫಾರಂ ನಿವಾಸಿಗಳೇ ಮಾಡ ಬೇಕು. ಹಣ್ಣಿನ ಗಿಡಗಳು ಹೆಚ್ಚಾಗಿ ಇದ್ದವು. ಅವನ್ನು ನೋಡಿಕೊಳ್ಳ ಬೇಕಾಗಿತ್ತು. ತೋಟದ ಕೆಲಸವೂ ಸಾಕಷ್ಟು ಇತ್ತು. ಅಡಿಗೆ ಮನೆಯಲ್ಲಿ ಕೆಲಸವಿಲ್ಲದ ಹುಡುಗರು ದೊಡ್ಡವರು ಎಲ್ಲರೂ ತೋಟದ ಕೆಲಸವನ್ನು ಮಾಡ ಬೇಕು. ಹೆಚ್ಚಾಗಿ ಕೆಲಸವೆಲ್ಲ ಮಕ್ಕಳದೇ-ಗುಂಡಿ ಅಗೆಯುವುದು, ಮರಗಳನ್ನು ಕಡಿಯುವುದು, ಹೊರೆ ಹೊರುವುದು. ಇದರಿಂದ ಅವರಿಗೆ ಸಾಕಷ್ಟು ವ್ಯಾಯಾಮ ವಾಗುತ್ತಿತ್ತು. ಆ ಕೆಲಸದಲ್ಲಿ ಅವರಿಗೆ ಸಂತೋಷವಿದ್ದುದರಿಂದ ಅವರಿಗೆ ಬೇರೆ ಆಟ ವ್ಯಾಯಾಮ ಅಗತ್ಯವಿರಲಿಲ್ಲ. ಕೆಲವು ಹುಡುಗರು ಕೆಲಸಕ್ಕೆ ತಪ್ಪಿಸಿಕೊಳ್ಳು ತ್ತಿದ್ದರು, ಒಮ್ಮೊಮ್ಮೆ ಎಲ್ಲರೂ ತಪ್ಪಿಸಿಕೊಳ್ಳುತ್ತಿದ್ದರು, ಕೆಲವು ಸಲ ಅವರ ಚೇಷ್ಟೆ ಗಳನ್ನು ಕಂಡೂ ಕಾಣದಂತಿದ್ದೆ. ಕೆಲವು ಸಲ ನಿಷ್ಠುರನಾಗಿರುತ್ತಿದ್ದೆ. ಕೆಲಸಕ್ಕೆ ತಪ್ಪಿಸಿಕೊಳ್ಳಬಾರದೆಂದು ತಿಳಿಸಿ ಹೇಳುತ್ತಿದ್ದೆ. ಮರುಗಳಿಗೆ ಮತ್ತೆ ಅದೇ ಹಾಡೇ. ಕೆಲಸಬಿಟ್ಟು ಆಟಕ್ಕೆ ಹೋಗುತ್ತಿದ್ದರು. ಆದರೂ ಮುಂದೆ ಸಾಗಿದೆವು. ಒಳ್ಳೇ ದೃಢಕಾಯರಾದರು ಹುಡುಗರು. ಫಾರಂನಲ್ಲಿ ಯಾವ ಕಾಯಿಲೆಯೂ ಇರಲಿಲ್ಲ. ಒಳ್ಳೇ ಗಾಳಿ, ನೀರು, ಹೊತ್ತಿಗೆ ಸರಿಯಾಗಿ ಅನ್ನ ಇವೂ ಅದಕ್ಕೆ ಬಹಳಮಟ್ಟಿಗೆ ಕಾರಣವೇ.

ಔದ್ಯೋಗಿಕ ಶಿಕ್ಷಣದ ಬಗ್ಗೆ ಒಂದು ಮಾತು. ಯಾವುದಾದರೊಂದು ಉಪಯೋಗಕರ ಕೈಗಾರಿಕೆಯನ್ನು ಹುಡುಗರಿಗೆ ಕಲಿಸೋಣ ಎಂದು ನನ್ನ ಉದ್ದೇಶ್ಯ. ಕಾಲೆನ್‌ಬಾಕ್ ಮೆಟ್ಟು ಹೊಲಿಯುವುದನ್ನು ಕಲಿತಿದ್ದರು. ಅವ ರಿಂದ ನಾನು ಕಲಿತೆ, ಇಷ್ಟ ಪಟ್ಟವರಿಗೆಲ್ಲ ಆ ವಿದ್ಯೆಯನ್ನು ಹೇಳಿಕೊಟ್ಟೆ. ಕಾಲೆನ್‌ಬಾಕರಿಗೆ ಮರಗೆಲಸದ ಅನುಭವವೂ ಇತ್ತು. ಇನ್ನೊಬ್ಬ ಇದ್ದ ಮರ ಗೆಲಸ ಬಲ್ಲವನು. ಬಡಗಿ ತರಗತಿ ಪ್ರಾರಂಭವಾಯಿತು. ಹುಡುಗರೆಲ್ಲರಿಗೂ ಅಡಿಗೆ ಬರುತ್ತಿತ್ತು.

ಇದೆಲ್ಲಾ ಅವರಿಗೆ ಹೊಸದು, ಇವನ್ನೆಲ್ಲ ಎಂದಾದರೂ ಕಲಿಯಬೇಕಾ ದೀತು ಎನಿಸಿರಲಿಲ್ಲ ಅವರಿಗೆ. ಏಕೆಂದರೆ ಸಾಧಾರಣವಾಗಿ ಭಾರತೀಯ ಬಾಲಕ ರಿಗೆ ಶಿಕ್ಷಣವೆಂದರೆ ಓದು ಬರೆಹ ಅಂಕಗಣಿತಗಳೆ.

ಶಿಕ್ಷಕರು ಮಾಡದುದನ್ನು ವಿದ್ಯಾರ್ಥಿಗಳಿಗೆ ಮಾಡಲು ಹೇಳಬಾರದೆಂದು ಟಾಲ್‌ಸ್ಟಾಯ್ ಫಾರಂನಲ್ಲಿ ನಿಯಮ ಮಾಡಿದೆವು. ಆದ್ದರಿಂದ ಅವರಿಗೇನು

ಕೆಲಸ ಹೇಳಿದರೂ ಅವರ ಜೊತೆಯಲ್ಲಿ ಕೆಲಸ ಮಾಡಲು ಒಬ್ಬ ಶಿಕ್ಷಕ ಇದ್ದೇ ಇರುತ್ತಿದ್ದ. ಆದ್ದರಿಂದ ಹುಡುಗರು ಏನೇ ಕಲಿತರೂ ಸಂತೋಷವಾಗಿ ಕಲಿತರು.

ಪುಸ್ತಕ ಶಿಕ್ಷಣ ಸ್ವಲ್ಪ ಹೆಚ್ಚು ಕಷ್ಟದ ವಿಷಯವಾಯಿತು. ನನಗೆ ಅದಕ್ಕೆ ಬೇಕಾದ ಯೋಗ್ಯತೆಯೂ ಇರಲಿಲ್ಲ, ಅನುಕೂಲತೆಯೂ ಇರಲಿಲ್ಲ. ನಾನು ಮಾಡುತ್ತಿದ್ದ ಶರೀರ ಶ್ರಮದ ಕೆಲಸದಿಂದ ಸಂಜೆಯ ವೇಳೆಗೆ ಪೂರಾ ದಣಿದು ಹೋಗುತ್ತಿದ್ದೆ. ನನಗೆ ಯಾವಾಗ ವಿರಾಮ ಬೇಕೋ ಆಗಲೇ ನನ್ನ ಪಾಠದ ತರಗತಿ. ಆದ್ದರಿಂದ ತರಗತಿಯಲ್ಲಿ ಚುರುಕಾಗಿರುತ್ತಿರಲಿಲ್ಲ. ನಿದ್ದೆ ಮಾಡದಿದ್ದರೆ ಸಾಕಾಗಿತ್ತು. ಬಹಳ ಕಷ್ಟ ಪಟ್ಟು ಎಚ್ಚರವಾಗಿರುತ್ತಿದ್ದೆ. ಬೆಳಗ್ಗೆ ಫಾರಂ ಕೆಲಸ, ಮನೆ ಕೆಲಸ. ಆದ್ದರಿಂದ ಶಾಲೆ ಮಧ್ಯಾಹ್ನ. ಬೇರೆ ಯಾವ ಕಾಲವೂ ಅನುಕೂಲವಿರಲಿಲ್ಲ.

ಬಹಳ ಹೆಚ್ಚು ಎಂದರೆ ಪುಸ್ತಕ ಶಿಕ್ಷಣಕ್ಕೆ ಮೂರು ಗಂಟೆ ಕೊಡುತ್ತಿದ್ದೆವು. ಮಾತೃಭಾಷೆಯಲ್ಲಿ ಪಾಠ ಹೇಳುತ್ತಿದ್ದೆವು. ಇಂಗ್ಲೀಷನ್ನೂ ಕಲಿಯುತ್ತಿದ್ದರು. ಗುಜರಾತಿ, ಹಿಂದೂ ಹುಡುಗರಿಗೆ ಸ್ವಲ್ಪ ಸಂಸ್ಕೃತ ಹೇಳುತ್ತಿದ್ದೆವು. ಎಲ್ಲರಿಗೂ ಪ್ರಾಥಮಿಕ ಇತಿಹಾಸ, ಭೂಗೋಳ, ಗಣಿತಗಳನ್ನು ಕಲಿಸುತ್ತಿದ್ದೆವು.

ಪಠ್ಯ ಪುಸ್ತಕಗಳ ವಿಷಯವನ್ನು ಬಹಳ ಕೇಳುತ್ತೀರಲ್ಲ. ನನಗಂತೂ ಪಠ್ಯ ಪುಸ್ತಕ ಬೇಕು ಎನಿಸಲೇ ಇಲ್ಲ. ಇದ್ದ ಒಂದೆರಡನ್ನೂ ಉಪಯೋಗಿಸಿದಂತೆ ನೆನಪಿಲ್ಲ. ಹೊರೆ ಹೊರೆ ಪುಸ್ತಕಗಳನ್ನು ಹುಡುಗರಿಗೆ ಹೊರಿಸಬೇಕಾದ ಸಂಭವವೇ ಇರಲಿಲ್ಲ. ವಿದ್ಯಾರ್ಥಿಗಳಿಗೆ ನಿಜವಾದ ಪಠ್ಯಪುಸ್ತಕ ಶಿಕ್ಷಣವೇ. ಯಾವಾಗಲೂ ನನಗೆ ಹೀಗೇ ಅನಿಸಿದೆ. ನನ್ನ ಗುರುಗಳು ನನಗೆ ಪುಸ್ತಕದಿಂದ ಹೇಳಿಕೊಟ್ಟದ್ದು ಏನೂ ನೆನಪಿಲ್ಲ. ಅವರು ಸ್ವತಂತ್ರವಾಗಿ ತಾವೇ ಹೇಳಿದೆಲ್ಲವೂ ಚೆನ್ನಾಗಿ ನೆನಪಿದೆ.

ಮಕ್ಕಳು ಕಣ್ಣಿಗಿಂತ ಕಿವಿಯ ಮೂಲಕ ಹೆಚ್ಚು ನಿರಾಯಾಸವಾಗಿ ಗ್ರಹಿಸುತ್ತಾರೆ. ಯಾವ ಪುಸ್ತಕವನ್ನೂ ಮೊದಲಿನಿಂದ ಕೊನೆಯವರೆಗೆ ಹುಡುಗರಿಗೆ ನಾನು ಓದಿ ಹೇಳಿದ ನೆನಪಿಲ್ಲ. ನಾನು ಓದಿದ್ದ ಅನೇಕ ಪುಸ್ತಕಗಳ ಸಾರವನ್ನು ನನ್ನ ಮಾತಿನಲ್ಲಿ ಅವರಿಗೆ ಹೇಳಿದೆ. ಅದು ಅವರಿಗೆ ಇನ್ನೂ ನೆನಪಿದೆಯೆಂದು ಧೈರ್ಯವಾಗಿ ಹೇಳಬಲ್ಲೆ. ಪುಸ್ತಕದಿಂದ ಕಲಿತವನ್ನು ನೆನಪಿಡುವುದು ಅವರಿಗೆ ಕಷ್ಟವಾಗಿತ್ತು. ನಾನು ಬಾಯಿಂದ ಹೇಳಿದುದನ್ನು ಬಹಳ ಸುಲಭ

ವಾಗಿ ಆಯಾಸವಿಲ್ಲದೆ ತಿರುಗಿ ಹೇಳುತ್ತಿದ್ದರು. ಓದುವುದು ಅವರಿಗೆ ಏನೋ ಕಷ್ಟ ಎನಿಸುತ್ತಿತ್ತು. ನಾನು ಹೇಳಿದ್ದನ್ನು ಕೇಳುವುದೆಂದರೆ ಬಹಳ ಸಂತೋಷ.

ಶಾರೀರಕ ಮಾನಸಿಕ ಶಿಕ್ಷಣಕ್ಕಿಂತ ಹುಡುಗರ ಆಧ್ಯಾತ್ಮಿಕ ಶಿಕ್ಷಣ ಬಹಳ ಕಷ್ಟದ್ದು. ಅದಕ್ಕೆ ನಾನು ಯಾವ ಧಾರ್ಮಿಕ ಗ್ರಂಥಗಳನ್ನೂ ಉಪಯೋಗಿಸಿಲ್ಲ. ಪ್ರತಿಯೊಬ್ಬ ವಿದ್ಯಾರ್ಥಿಗೂ ತನ್ನ ಧರ್ಮದ ಮೂಲ ತತ್ವಗಳ ಪರಿಚಯವಿರಬೇಕು, ತನ್ನ ಧರ್ಮ ಗ್ರಂಥಗಳ ಸಾಮಾನ್ಯ ಜ್ಞಾನವಿರಬೇಕು ಎಂದು ನನ್ನ ನಂಬಿಕೆ. ಅದಕ್ಕೆ ನನಗೆ ಸಾಧ್ಯವಿದ್ದಷ್ಟು ಏರ್ಪಾಡು ಮಾಡಿದೆ. ಅದೆಲ್ಲ ಬೌದ್ಧಿಕ ಶಿಕ್ಷಣವೆಂದೇ ನನ್ನ ಭಾವನೆ. ಆಧ್ಯಾತ್ಮಿಕ ಶಿಕ್ಷಣವೆಂದರೆ ಗುಣವಿಕಾಸ, ಆತ್ಮಸಾಕ್ಷಾತ್ಕಾರ ಬ್ರಹ್ಮಜ್ಞಾನಗಳಿಗೆ ದಾರಿ. ಶಿಕ್ಷಣದಲ್ಲಿ ಇದು ಬಹಳ ಮುಖ್ಯ, ಆಧ್ಯಾತ್ಮಿಕ ಶಿಕ್ಷಣವಿಲ್ಲದ ಎಲ್ಲ ಶಿಕ್ಷಣವೂ ವ್ಯರ್ಥ, ಅಷ್ಟೇ ಅಲ್ಲ, ಹಾನಿಕರ ಎಂದು ನನ್ನ ಅಭಿಪ್ರಾಯ.

ಈ ಶಿಕ್ಷಣವನ್ನು ಕೊಡುವುದು ಹೇಗೆ? ಹುಡುಗರಿಗೆ ಸ್ತೋತ್ರಗಳನ್ನು ಬಾಯಿಪಾಠ ಮಾಡಿಸಿದೆ, ನೈತಿಕ ಶಿಕ್ಷಣದ ವಿಷಯವಾಗಿ ಪುಸ್ತಕಗಳಿಂದ ಓದಿ ಹೇಳಿದೆ. ಇದು ನನಗೆ ತೃಪ್ತಿಕೊಡಲಿಲ್ಲ, ಸಂಪರ್ಕ ಹೆಚ್ಚು ಆದಂತೆ ಈ ಶಿಕ್ಷಣ ಪುಸ್ತಕಗಳ ಮೂಲಕ ಸಾಧ್ಯವಿಲ್ಲ ಎನಿಸಿತು. ಶರೀರ ವ್ಯಾಯಾಮದ ಮೂಲಕ ಶಾರೀರಿಕ ಶಿಕ್ಷಣ ಕೊಡುವಂತೆ, ಮಾನಸಿಕ ವ್ಯಾಯಾಮದ ಮೂಲಕ ಮಾನಸಿಕ ಶಿಕ್ಷಣ ಕೊಡುವಂತೆ, ಆಧ್ಯಾತ್ಮಿಕ ಶಿಕ್ಷಣವನ್ನು ಆತ್ಮದ ವ್ಯಾಯಾಮದ ಮೂಲಕ ಕೊಡಬೇಕು. ಈ ಆತ್ಮ ವ್ಯಾಯಾಮಕ್ಕೆ ಶಿಕ್ಷಕನ ಜೀವನ-ಚಾರಿತ್ರ್ಯಗಳೇ ಸರ್ವಾಧಾರ. ಹುಡುಗರ ನಡುವೆ ಇರಲಿ ಇಲ್ಲದಿರಲಿ, ಶಿಕ್ಷಕ ಸದಾ ತನ್ನ ನಡೆ ನುಡಿಯಲ್ಲಿ ಜಾಗರೂಕನಾಗಿರಬೇಕು.

ನೂರಾರುಮೈಲಿ ದೂರದಲ್ಲಿದ್ದರೂ ಶಿಕ್ಷಕ ತನ್ನ ಚಾರಿತ್ರ್ಯದಿಂದ ವಿದ್ಯಾರ್ಥಿಗಳ ಆಧ್ಯಾತ್ಮಿಕ ಪ್ರಗತಿಗೆ ನೆರವಾಗಬಹುದು. ನಾನೇ ಸುಳ್ಳನಾಗಿ ಹುಡುಗರನ್ನು ನಿಜ ಹೇಳುವಂತೆ ಮಾಡಲು ಸಾಧ್ಯವಿಲ್ಲ. ಹೇಡಿಯಾದ ಶಿಕ್ಷಕ ತನ್ನ ವಿದ್ಯಾರ್ಥಿಗಳನ್ನು ಧೀರರನ್ನಾಗಿ ಮಾಡಬಲ್ಲನೆ? ಸಂಯಮವಿಲ್ಲದವನು ಸಂಯಮ ಕಲಿಸಬಲ್ಲನೆ? ಆದ್ದರಿಂದ ನನ್ನ ಜೊತೆಯಲ್ಲಿದ್ದ ಹುಡುಗರಿಗೆ ನಾನು ಮೇಲ್ಪಂಕ್ತಿಯಾಗಿರಬೇಕು ಎಂದು ಗೊತ್ತಾಯಿತು. ಹೀಗಾಗಿ ಅವರೇ ನನಗೆ ಗುರುಗಳಾದರು. ಅವರಿಗಾಗಿಯಾದರೂ ನಾನು ಒಳ್ಳೆಯವನಾಗಿ ಪ್ರಾಮಾಣಿಕನಾಗಿ ಇರಬೇಕು. ಟಾಲ್‌ಸ್ಟಾಯ್ ಫಾರಂನಲ್ಲಿ ನಾನು ಬೆಳೆಸಿಕೊಂಡ ಶಿಸ್ತು-ಸಂಯಮ

ಅವರ ದೆಸೆಯಿಂದಲೇ ಎನ್ನಬೇಕು.

ಅವರಲ್ಲೊಬ್ಬ ಸ್ವಲ್ಪ ಒರಟ, ಅವಿಧೇಯ, ಸುಳ್ಳ, ಜಗಳಗಂಟಿ. ಒಂದು ಸಲ ಬಹಳ ತೀಕ್ಷ್ಣವಾಗಿ ತುಂಬಾ ಒರಟಾಗಿ ನಡೆದುಕೊಂಡ. ನನಗೆ ಸಾಕು ಸಾಕಾಗಿ ಹೋಯಿತು. ಎಂದೂ ನಾನು ಹುಡುಗರನ್ನು ದಂಡಿಸುತ್ತಿರಲಿಲ್ಲ, ಈಗ ಮಾತ್ರ ಬಹಳ ಸಿಟ್ಟು ಬಂದಿತ್ತು, ಎಷ್ಟೋ ಹೇಳಿನೋಡಿದೆ. ಆದರೆ ಅವನು ಮೊಂಡುತನ ಮಾಡಿದ, ನನ್ನ ಮೇಲೇ ಕೈಮಾಡಲು ಬಂದ. ಅಲ್ಲಿದ್ದ ಒಂದು ರೂಲುದೊಣ್ಣೆ ಎತ್ತಿಕೊಂಡು ಅವನ ಕೈಮೇಲೆ ಹೊಡೆದೆ. ಹೊಡೆಯುವಾಗ ನನ್ನ ಕೈ ನಡುಗಿತು. ಅವನೂ ಅದನ್ನು ನೋಡಿದ ಎಂದುಕೊಂಡಿದೇನೆ. ಎಲ್ಲರಿಗೂ ಇದು ಹೊಸ ಅನುಭವ. ಆ ಹುಡುಗ ಚೀರಿದ, ಕ್ಷಮಿಸಿ ಎಂದು ಬೇಡಿದ. ಅವನಿಗೆ ನೋವು ಆಯಿತು ಎಂದು ಅವನು ಚೀರಲಿಲ್ಲ. ಹದಿನೇಳು ವರ್ಷದ ಗಟ್ಟಿಮುಟ್ಟಾದ ಹುಡುಗ. ಮನಸ್ಸು ಮಾಡಿದ್ದರೆ ತಿರುಗಿ ಹೊಡೆಯ ಬಹುದಾಗಿತ್ತು. ಆದರೆ ಈ ಹಿಂಸೆಯ ಕೆಲಸವನ್ನು ಮಾಡಬೇಕಾಯಿತಲ್ಲ ಎಂದು ನನಗೆ ಆಗುತ್ತಿದ್ದ ನೋವನ್ನು ಅರಿತುಕೊಂಡ. ಈ ಪ್ರಸಂಗ ನಡೆದಮೇಲೆ ಮತ್ತೆ ಎಂದೂ ಅವನು ನನ್ನ ಮಾತನ್ನು ಮೀರಲಿಲ್ಲ. ನನಗೇನೋ ಇಂದಿಗೂ ಆ ಹಿಂಸೆಯ ಬಗ್ಗೆ ಪಶ್ಚಾತ್ತಾಪವೇ. ಆವತ್ತು ಪ್ರಕಟವಾದದ್ದು ನನ್ನ ಆತ್ಮವಲ್ಲ, ನನ್ನ ಮೃಗಸ್ವಭಾವ.

ದೇಹದಂಡನೆಗೆ ನಾನು ಯಾವಾಗಲೂ ವಿರೋಧಿಯೆ. ಒಂದೇ ಒಂದುಸಲ ನನ್ನ ಮಕ್ಕಳಲ್ಲಿ ಒಬ್ಬನನ್ನು ಒದೆದ ನೆನಪು ಇದೆ. ಆದ್ದರಿಂದ ಆಗ ನಾನು ರೂಲುದೊಣ್ಣೆ ಉಪಯೋಗಿಸಿದ್ದು ಸರಿಯೋ ತಪ್ಪೋ ನಿರ್ಧರಿಸಲಾಗಿಲ್ಲ. ಬಹುಶಃ ಅನುಚಿತ ; ಸಿಟ್ಟಿನಿಂದ ದಂಡಿಸಬೇಕೆಂಬ ಮನಸ್ಸಿನಿಂದ ಮಾಡಿದ್ದರಿಂದ. ನನ್ನ ಸಂಕಟವೇ ಹಾಗೆ ಹೊರಬಿದ್ದಿದ್ದರೆ ಅದನ್ನು ನ್ಯಾಯ ಎನ್ನುತ್ತಿದ್ದೆ. ಆದರೆ ನನ್ನ ಉದ್ದೇಶ್ಯ ಮಿಶ್ರವಾಗಿತ್ತು.

ಈ ಪ್ರಸಂಗ ನನ್ನನ್ನು ಯೋಚಿಸುವ ಹಾಗೆ ಮಾಡಿತು. ಹುಡುಗರನ್ನು ತಿದ್ದಲು ಉತ್ತಮ ಉಪಾಯವೇನು ? ಮುಂದೆ ಹುಡುಗರು ತಪ್ಪಿನಡೆದರೂ ನಾನು ಅವರನ್ನು ಹೊಡೆಯಲಿಲ್ಲ. ಹುಡುಗರಿಗೆ ಆತ್ಮಿಕ ಶಿಕ್ಷಣವನ್ನು ಕೊಡಲು ಹೋಗಿ ಆತ್ಮಬಲವನ್ನು ನಾನೇ ಮತ್ತಿಷ್ಟು ಚೆನ್ನಾಗಿ ಅರಿತುಕೊಳ್ಳುತ್ತ ಬಂದೆ.

ಮಕ್ಕಳನ್ನು ಸರಿಯಾದ ರೀತಿಯಲ್ಲಿ ಬೆಳೆಸುವುದು, ಅವರಿಗೆ ಸರಿಯಾದ ಶಿಕ್ಷಣ ಕೊಡುವುದು ಎಷ್ಟು ಕಷ್ಟವೆಂಬುದು ದಿನೇ ದಿನೇ ನನಗೆ ತಿಳಿಯಿತು,

ಅವರಿಗೆ ನಿಜವಾದ ಶಿಕ್ಷಕ, ಪಾಲಕ ಆಗಲು ನಾನು ಅವರ ಹೃದಯವನ್ನು ಸ್ಪರ್ಶಿಸಬೇಕು, ಅವರ ಸುಖ ದುಃಖವನ್ನು ಹಂಚಿಕೊಳ್ಳಬೇಕು. ಅವರ ಸಮಸ್ಯೆಗಳನ್ನು ಎದುರಿಸಲು ನೆರವು ನೀಡಬೇಕು.

ವಿದ್ಯಾರ್ಥಿಗಳ ಅವಿನಯ ಅಶಿಸ್ತುಗಳಿಗಾಗಿ ಕೆಲವುಸಲ ಶಿಕ್ಷಕರು ಉಪವಾಸ ಮಾಡಲೂ ಬೇಕಾದೀತು. ಅಂಥ ತೀವ್ರತರ ಉಪಾಯವನ್ನೂ ಮಾಡಬೇಕಾದೀತು. ಆದರೆ ಅದಕ್ಕೆ ನಿಚ್ಚಳವಾದ ದೃಷ್ಟಿ, ಆಧ್ಯಾತ್ಮಿಕ ಅರ್ಹತೆ ಬೇಕು. ವಿದ್ಯಾರ್ಥಿಗೂ ಶಿಕ್ಷಕರಿಗೂ ವಿಶ್ವಾಸವಿಲ್ಲದಿದ್ದರೆ, ಹುಡುಗನ ಅವಿನಯ ಶಿಕ್ಷಕನ ಜೀವಾಳಕ್ಕೇ ಧಕ್ಕೆ ಕೊಡದಿದ್ದರೆ, ವಿದ್ಯಾರ್ಥಿಗೆ ಶಿಕ್ಷಕನಲ್ಲಿ ಗೌರವವಿಲ್ಲದಿದ್ದರೆ, ಉಪವಾಸ ಮಾಡಕೂಡದು. ಅದರಿಂದ ಹಾನಿಯಾದೀತು, ಅಂಥ ಸಂದರ್ಭದಲ್ಲಿ ಉಪವಾಸದ ಔಚಿತ್ಯದ ವಿಷಯದಲ್ಲಿ ಸಂದೇಹ ಹುಟ್ಟಬಹುದಾದರೂ ವಿದ್ಯಾರ್ಥಿಯ ತಪ್ಪಿಗೆ ಶಿಕ್ಷಕನೇ ಹೊಣೆ ಎಂಬುದರಲ್ಲಿ ಸಂದೇಹವಿಲ್ಲ.[೧೦]

---

## ಅಧ್ಯಾಯ ೨

# ಮೂಲಶಿಕ್ಷಣದ ಹುಟ್ಟು

## ೧

### ಶಿಕ್ಷಣ ಸಮ್ಮೇಳನದ ಸಮಸ್ಯೆಗಳು

ಈಗ ನವಭಾರತ ವಿದ್ಯಾಲಯ ಎನ್ನುವ ವರ್ಧಾದ ಮಾರ್ವಾಡಿ ಹೈಸ್ಕೂಲು ತನ್ನ ರಜತ ಮಹೋತ್ಸವ ನಡಸುತ್ತಿದೆ. ಈ ಸಮಯದಲ್ಲಿ ರಾಷ್ಟ್ರೀಯ ಮನೋವೃತ್ತಿಯ ಶಿಕ್ಷಣ ಪಂಡಿತರ ಸಮ್ಮೇಳನವೊಂದನ್ನು ಕರೆದು, ನಾನು ಈ ಪತ್ರಿಕೆಯಲ್ಲಿ ವಿವರಿಸುತ್ತಿರುವ ಶಿಕ್ಷಣ ಯೋಜನೆಯನ್ನು ಚರ್ಚಿಸೋಣ ಎಂದು ಅದರ ವ್ಯವಸ್ಥಾಪಕರು ಯೋಚಿಸಿದರು. ಅದರ ಕಾರ್ಯದರ್ಶಿ ಶ್ರೀಮನ್ನಾರಾಯಣ ಅಗರವಾಲ್ ಇಂಥ ಸಮ್ಮೇಳನವನ್ನು ಕರೆಯೋಣವೆ ಎಂದು ನನ್ನನ್ನು ಕೇಳಿದರು. ನಿಮಗೆ ಇದು ಒಪ್ಪಿಗೆಯಾದರೆ ನೀವೇ ಅಧ್ಯಕ್ಷರಾಗಿರಿ ಎಂದರು. ನಾನು ಎರಡು ಸೂಚನೆಗಳಿಗೂ ಒಪ್ಪಿದೆ. ಈ ಸಮ್ಮೇಳನ ವರ್ಧಾದಲ್ಲಿ ಅಕ್ಟೋಬರ್ ೨೨-೨೩ರಲ್ಲಿ ನಡೆಯುತ್ತದೆ. ಆಹ್ವಾನಿತರು ಮಾತ್ರ ಸಮ್ಮೇಳನಕ್ಕೆ ಬರುತ್ತಾರೆ. ಈ ಸಮಸ್ಯೆಯಲ್ಲಿ ಗಾಢವಾದ ಅಭಿರುಚಿ ಆಸಕ್ತಿ ಇರುವ ಕೆಲವರನ್ನೂ ಚರ್ಚೆಯಲ್ಲಿ ಭಾಗವಹಿಸಬಲ್ಲವರನ್ನೂ ಮಾತ್ರ ಕರೆದಿದೆ. ಸಮ್ಮೇಳನ ಕಣ್ಣಿಗೆ ಹಬ್ಬವಾಗಬೇಕೆಂದಲ್ಲ. ಪ್ರೇಕ್ಷಕರು ಯಾರೂ ಇದಕ್ಕೆ ಇಲ್ಲ. ಬರೀ ಕಾರ್ಯಸಭೆ. ಪತ್ರಿಕೆಗಳಿಗೆ ಕೆಲವಕ್ಕೆ ಮಾತ್ರ ಪ್ರವೇಶ. ಪತ್ರಿಕಾ ಪ್ರತಿನಿಧಿಗಳು ತಮ್ಮಲ್ಲಿ ಒಬ್ಬಿಬ್ಬರನ್ನು ಆರಿಸಿ ಕಳಿಸಲಿ. ಅವರಿಂದ ಎಲ್ಲರೂ ವರದಿಯನ್ನು ಹಂಚಿಕೊಳ್ಳಲಿ.

ಈ ಕೆಲಸದಲ್ಲಿ ನನಗೆ ಎಷ್ಟು ಆತ್ಮವಿಶ್ವಾಸವೋ ಅಷ್ಟು ವಿನಯವಿದೆ. ನನ್ನ ಮನಸ್ಸು ಮುಕ್ತದ್ವಾರ. ಅಗತ್ಯವಾದಲ್ಲೆಲ್ಲ ಹೊಸದನ್ನು ಕಲಿತು ನನ್ನ ಅಭಿಪ್ರಾಯಗಳನ್ನು ತಿದ್ದಿಕೊಳ್ಳುತ್ತೇನೆ.

ಸಮ್ಮೇಳನದ ಮುಂದೆ ನಾನು ಇಡುವ ವಿಷಯ—ಈಗ ತೋಚುತ್ತಿರುವಂತೆ—ಇದು :

೧.) ಈಗಿನ ಶಿಕ್ಷಣ ಪದ್ಧತಿ ದೇಶದ ಅವಶ್ಯಕತೆಗೆ ಯಾವ ವಿಧದಲ್ಲೂ ಸರಿಹೋಗುತ್ತಲಿಲ್ಲ. ಪ್ರೌಢಶಿಕ್ಷಣಕ್ಕೆ ಇಂಗ್ಲೀಷು ಭಾಷೆಯನ್ನು ಮಾಧ್ಯಮವಾಗಿ ಮಾಡಿದುದರಿಂದ ಸುಶಿಕ್ಷಿತರಾದ ವಿದ್ಯಾವಂತರಿಗೂ ಅಶಿಕ್ಷಿತ ಅವಿದ್ಯಾವಂತ ಜನಸ್ತೋಮಕ್ಕೂ ನಡುವೆ ಒಂದು ಗೋಡೆ ಕಟ್ಟಿದಂತಾಗಿದೆ. ಅದರಿಂದ ಜನತೆಗೆ ಜ್ಞಾನ ಹರಿದು ಬರುತ್ತಿಲ್ಲ. ಇಂಗ್ಲೀಷಿಗೆ ಕೊಟ್ಟ ಈ ಅತಿ ಪ್ರಾಧಾನ್ಯ ವಿದ್ಯಾವಂತರಿಗೆ ಭಾರವಾಗಿ ಅವರ ಮನಸ್ಸು ಊನವಾಗಿದೆ. ಅವರು ತಮ್ಮ ದೇಶದಲ್ಲಿ ತಾವೇ ಪರದೇಶಿಗಳಾಗಿದಾರೆ. ವೃತ್ತಿಶಿಕ್ಷಣದ ಲೋಪದಿಂದ ವಿದ್ಯಾವಂತರು ಉತ್ಪಾದಕ ಕಾರ್ಯಕ್ಕೆ ನಿಷ್ಪ್ರಯೋಜಕರಾಗಿ, ದೈಹಿಕವಾಗಿ ವ್ಯರ್ಥಜೀವಿಗಳಾಗಿದಾರೆ. ಪ್ರಾಥಮಿಕ ಶಿಕ್ಷಣದಲ್ಲಿ ಕಲಿಸಿದ ಅಲ್ಪಸ್ವಲ್ಪವೂ ಬೇಗ ಮರೆತು ಹೋಗುತ್ತದೆ; ಗ್ರಾಮಜೀವನ, ನಗರಜೀವನ ಯಾವುದಕ್ಕೂ ಇದರಿಂದ ಪ್ರಯೋಜನವಿಲ್ಲ. ಹೀಗಾಗಿ ಇದಕ್ಕೆ ವೆಚ್ಚ ಮಾಡಿದ ಹಣವೆಲ್ಲ ಹಾಳು. ಈ ಶಿಕ್ಷಣದಿಂದ ಸಿಗುವ ಅಲ್ಪ ಲಾಭವೂ ಇದಕ್ಕಾಗಿ ಹಣ ತೆರುವವನಿಗೆ ಸಿಗುತ್ತಿಲ್ಲ. ಅವನ ಮಕ್ಕಳಿಗೆ ಆಗುವ ಪ್ರಯೋಜನ ಅತ್ಯಲ್ಪ.

೨.) ಪ್ರಾಥಮಿಕ ಶಿಕ್ಷಣದ ಅವಧಿ ಕನಿಷ್ಠ ಪಕ್ಷ ಏಳು ವರ್ಷಗಳಾದರೂ ಆಗಬೇಕು. ಮೆಟ್ರಿಕ್ಯುಲೇಷನ್ ಓದಿನಲ್ಲಿ ಬರುವ ಸಾಮಾನ್ಯ ಜ್ಞಾನವೆಲ್ಲ ಇದರಲ್ಲಿ ಬರಬೇಕು. ಇಂಗ್ಲೀಷು ಬೇಕಾಗಿಲ್ಲ. ಒಂದು ಉಪಯುಕ್ತ ಉದ್ಯೋಗ ಬರಬೇಕು.

೩.) ಹುಡುಗ ಹುಡುಗಿಯರ ಸರ್ವತೋಮುಖ ವಿಕಾಸವಾಗಬೇಕಾದರೆ ಲಾಭಕರ ಉದ್ಯೋಗವೊಂದನ್ನು ಅವರಿಗೆ ಕಲಿಸಬೇಕು. ಆ ಉದ್ಯೋಗದಿಂದ ಎರಡು ಬಗೆಯ ಲಾಭವಾಗಬೇಕು: ವಿದ್ಯಾರ್ಥಿ ತನ್ನ ಪರಿಶ್ರಮದಿಂದ ಉತ್ಪತ್ತಿ ಮಾಡಿದುದು ಅವನ ಶಿಕ್ಷಣದ ಶುಲ್ಕಕ್ಕೆ ಆಗಬೇಕು; ಶಾಲೆಯಲ್ಲಿ ಕಲಿತ ಉದ್ಯೋಗದ ಮೂಲಕ ವಿದ್ಯಾರ್ಥಿಯ ಪೂರ್ಣ ಮಾನವೀಯ ವಿಕಾಸವಾಗಬೇಕು.

ಶಾಲೆಯ ಕಟ್ಟಡ, ಸಲಕರಣೆಗಳ ವೆಚ್ಚ ವಿದ್ಯಾರ್ಥಿಗಳ ಶ್ರಮದಿಂದ ಬರಬೇಕಾಗಿಲ್ಲ.

ಹತ್ತಿ, ಉಣ್ಣೆ, ರೇಷ್ಮೆಗಳ ಎಲ್ಲಾ ಕ್ರಿಯೆಗಳನ್ನೂ-ಹತ್ತಿ ಬಿಡಿಸುವುದು, ಕಾಳು ಅರೆಯುವುದು, ಹಿಂಜುವುದು, ನೂಲುವುದು, ಬಣ್ಣ ಹಾಕುವುದು, ದುಬಟ್ಟಾ ಮಾಡುವುದು, ನೇಯ್ಗೆ, ಮಾದರಿ ಜೋಡಿಸುವುದು, ಕಸೂತಿ,

ಹೊಲಿಗೆ, ಕಾಗದ ಮಾಡುವುದು, ಪುಸ್ತಕಕ್ಕೆ ರಟ್ಟು ಕಟ್ಟುವುದು, ಗೊಂಬೆ ಮಾಡುವುದು, ಮನೆಯ ಮುಟ್ಟು ಮಾಡುವುದು, ಬೆಲ್ಲ ಮಾಡುವುದು ಇವನ್ನೂ ಸುಲಭವಾಗಿ ಕಲಿಯಬಹುದು. ಇವಕ್ಕೆ ಹೆಚ್ಚು ಬಂಡವಾಳವೂ ಬೇಡ.

ಪ್ರಾಥಮಿಕ ವಿದ್ಯಾಭ್ಯಾಸದಲ್ಲಿ ಹುಡುಗ ಹುಡುಗಿಯರು ಕಲಿತ ಕೈಗಾರಿಕೆಯಿಂದ ಅವರ ಬದುಕು ನಡೆಯುತ್ತದೆ ಎಂಬ ಭರವಸೆಯನ್ನು ಸರಕಾರ ಕೊಡಬೇಕು. ಸರಕಾರವೇ ಆದರೂ ಅವರು ಮಾಡಿದ ಪದಾರ್ಥವನ್ನು ಕೊಳ್ಳಬೇಕು. ಹೊಟ್ಟೆ ಹೊರೆಯುವ ಈ ಸಾಧನವನ್ನು ಪ್ರಾಥಮಿಕ ಶಿಕ್ಷಣ ಮಕ್ಕಳಿಗೆ ನೀಡಬೇಕು.

೪. ಉದ್ಯೋಗ, ಕಲೆ, ಸಾಹಿತ್ಯ, ಯಂತ್ರವಿದ್ಯೆ ಎಲ್ಲದರಲ್ಲೂ ಪ್ರೌಢ ಶಿಕ್ಷಣವನ್ನು ಖಾಸಗೀ ಉದ್ಯಮಕ್ಕೆ ಬಿಡಬೇಕು.

ಸರಕಾರದ ವಿಶ್ವವಿದ್ಯಾನಿಲಯಗಳು ಬರೀ ಪರೀಕ್ಷಾ ಸಂಸ್ಥೆಗಳಾಗಬೇಕು. ಅವುಗಳ ವೆಚ್ಚ ಆ ಪರೀಕ್ಷಾ ಶುಲ್ಕದಿಂದ ಸರಿತೂಗಬೇಕು.

ವಿಶ್ವವಿದ್ಯಾನಿಲಯಗಳು ಇಡೀ ಶಿಕ್ಷಣ ಕ್ಷೇತ್ರದ ಮೇಲ್ವಿಚಾರಣೆ ನಡೆಸಬೇಕು. ಶಿಕ್ಷಣದ ಬೇರೆ ಬೇರೆ ವಿಭಾಗಗಳಿಗೆ ಪಾಠ ಪ್ರವಚನಗಳ ಪಟ್ಟಿಯನ್ನು ಅಣಿಮಾಡಬೇಕು. ವಿಶ್ವವಿದ್ಯಾನಿಲಯದ ಅನುಮತಿಯಿಲ್ಲದೆ ಯಾವ ಖಾಸಗಿ ಶಾಲೆಯೂ ಪ್ರಾರಂಭವಾಗಕೂಡದು. ಗುಣ, ಯೋಗ್ಯತೆ ಉಳ್ಳವರು ಯಾರು ಬೇಕಾದರೂ ಒಂದು ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಲು ಅವಕಾಶ ಕೊಡಬೇಕು. ವಿಶ್ವವಿದ್ಯಾನಿಲಯ ಸರಕಾರಕ್ಕೆ ಹೊರೆಯಾಗಕೂಡದು. ಒಂದು ಕೇಂದ್ರ ಶಿಕ್ಷಣ ಶಾಖೆಯನ್ನು ಮಾತ್ರ ಸರಕಾರ ನಡಸೀತು.

ಹೀಗೆಂದ ಮಾತ್ರಕ್ಕೆ ರಾಜ್ಯಭಾರಕ್ಕೆ ಅಗತ್ಯವಾದ ಶಿಕ್ಷಣವನ್ನು ಕೊಡಲು ಶಿಕ್ಷಣದ ಸತ್ರಗಳನ್ನು ನಡೆಸುವ ಜವಾಬುದಾರಿ ಸರಕಾರಕ್ಕೆ ತಪ್ಪದು.

ಈ ಇಡೀ ಯೋಜನೆಯನ್ನು ಒಪ್ಪಿದರೆ ಸರಕಾರದ ಅತ್ಯಂತ ದೊಡ್ಡ ಚಿಂತೆಯನ್ನು—ದೇಶದ ತರುಣರನ್ನು, ಮುಂದಿನ ಪೀಳಿಗೆಯ ದೇಶ ನಿರ್ಮಾಪಕರನ್ನು ತರಬೇತುಮಾಡುವ ಸಮಸ್ಯೆಯನ್ನು—ಬಗೆಹರಿಸಬಹುದು.೧೧

೨

# ಪ್ರಥಮ ಪ್ರಶ್ನೆ

[ವರ್ಧಾ ಶಿಕ್ಷಣ ಸಮ್ಮೇಳನದ ಪ್ರಾರಂಭ ಭಾಷಣ]

ಆಹ್ವಾನವನ್ನು ಆದರಿಸಿ ಸಮ್ಮೇಳನಕ್ಕೆ ಬಂದವರನ್ನೆಲ್ಲ ಗಾಂಧೀಜೀ ವಂದಿಸಿದರು. ತಾನು ಅವರನ್ನು ಬರಮಾಡಿದುದು ತನ್ನ ಯೋಜನೆಯ ಬಗ್ಗೆ ಅವರ ಅಭಿಪ್ರಾಯ, ಸಲಹೆ ಕೇಳಲಿಕ್ಕೆ; ಅದರಲ್ಲಿಯೂ ತನ್ನ ವಿಚಾರಸರಣಿಗೆ ವಿರುದ್ಧವಾದವರ ಅಭಿಪ್ರಾಯ ಕೇಳಲಿಕ್ಕೆ. ನಿಸ್ಸಂಕೋಚವಾಗಿ, ಸ್ಪಷ್ಟವಾಗಿ ಸಮಗ್ರವಾಗಿ ಚರ್ಚೆಮಾಡಿ. ತನ್ನ ಆರೋಗ್ಯ ಚೆನ್ನಾಗಿಲ್ಲದೆ ಸಭೆಯ ತರುವಾಯ ಪ್ರತ್ಯೇಕವಾಗಿ ಒಬ್ಬೊಬ್ಬರೊಡನೆ ಚರ್ಚಿಸಲು ಸಾಧ್ಯವಿಲ್ಲ ಎಂದರು.

ತಮ್ಮ ಸೂಚನೆಗಳಿಗೆ ಪ್ರಾಥಮಿಕ ಶಿಕ್ಷಣ, ಕಾಲೇಜು ಶಿಕ್ಷಣ ಎರಡೂ ಸಂಬಂಧಿಸಿವೆ. ಆದರೂ ಮುಖ್ಯವಾಗಿ ಪ್ರಾಥಮಿಕ ಶಿಕ್ಷಣದ ಚರ್ಚೆಯಾಗಲಿ. ಪ್ರೌಢ ಶಿಕ್ಷಣವನ್ನೂ (ಸೆಕೆಂಡರಿ) ಪ್ರಾಥಮಿಕ ಶಿಕ್ಷಣದಲ್ಲಿಯೆ ತಾವು ಸೇರಿಸಿದಾರೆ. ೧೯೧೫ ರಿಂದಲೂ ಈ ದೇಶದ ಹಳ್ಳಿಗಳಲ್ಲಿ ಸುತ್ತಾಡಿ ನೋಡಿದಾರೆ. ನಮ್ಮ ಜನ ಕೋಟಿಯಲ್ಲಿ ಎಲ್ಲೋ ಸ್ವಲ್ಪ ಜನಕ್ಕೆ ಮಾತ್ರ ಪ್ರಾಥಮಿಕ ಶಿಕ್ಷಣ—ಅದೊಂದೇ—ಸಿಗುತ್ತಿದೆ. ತಾವು ಹೇಳುವುದು ಅನಕ್ಷರಸ್ಥರಾದ ಹಳ್ಳಿಯ ಮಕ್ಕಳ ವಿಷಯ. ನೂರಾರು ಜನ ಕಾಲೇಜು ವಿದ್ಯಾರ್ಥಿಗಳ ಸಂಪರ್ಕ ತಮಗಾಗಿದ್ದರೂ ತಮಗೆ ಕಾಲೇಜು ಶಿಕ್ಷಣದ ಪರಿಚಯವಿಲ್ಲ. ಕಾಲೇಜು ವಿದ್ಯಾರ್ಥಿಗಳೊಡನೆ ಹೃದಯ ತೆರೆದು ಮಾತಾಡಿದಾರೆ, ಪತ್ರವ್ಯವಹಾರ ಮಾಡಿದಾರೆ; ಅವರ ಆವಶ್ಯಕತೆಗಳು, ಅವರ ದೌರ್ಬಲ್ಯ ಬೇನೆ ಬೇಸರಿಕೆ ತಮಗೆ ಗೊತ್ತು. ಆದರೂ ಸದ್ಯ ಪ್ರಾಥಮಿಕ ಶಿಕ್ಷಣದ ಚರ್ಚೆ ನಡೆಯಲಿ. ಇದನ್ನು ಪರಿಹರಿಸಿದರೆ ಕಾಲೇಜು ಶಿಕ್ಷಣದ ಪ್ರಶ್ನೆ ತಾನೇ ಹರಿಯುತ್ತದೆ.

## ಕೈಗೆಲಸದ ಮೂಲಕ ಶಿಕ್ಷಣ

ಈಗಿನ ಪ್ರಾಥಮಿಕ ಶಿಕ್ಷಣ ಬರೀ ವ್ಯರ್ಥವಷ್ಟೇ ಅಲ್ಲ, ಹಾನಿಕರ ಎಂಬುದು ತಮ್ಮ ದೃಢಾಭಿಪ್ರಾಯ. ಹುಡುಗರನೇಕರು ತಮ್ಮ ತಂದೆ ತಾಯಿಗಳಿಗೂ ತಮ್ಮ ಹುಟ್ಟು ಕಸುಬಿಗೂ ದೂರವಾಗುತ್ತಾರೆ. ಅಡ್ಡದಾರಿ ಹಿಡಿದು ಕೆಟ್ಟ ಚಾಳಿ ಕಲಿತು ಪಟ್ಟಣದ ರೀತಿ ಹಿಡಿದು ಏನೋ ಚೂರು ಪಾರು ಕಲಿಯು

ತ್ತಾರೆ. ಅವರು ಕಲಿತುದು ಏನೋ, ಅಂತೂ ಶಿಕ್ಷಣವಲ್ಲ. ಅದಕ್ಕೆ ಉಪಾಯ ವೃತ್ತಿಶಿಕ್ಷಣ, ಉದ್ಯೋಗದ ಮೂಲಕ ಶಿಕ್ಷಣ ಎಂದು ತಮ್ಮ ವಿಚಾರ. ಟಾಲ್‌ಸ್ಟಾಯ್ ಫಾರಂನಲ್ಲಿ ತಮ್ಮ ಮಕ್ಕಳಿಗೆ, ಇತರ ಮಕ್ಕಳಿಗೆ ಶಿಕ್ಷಣ ಕೊಟ್ಟ ಅನುಭವ ತಮಗಿದೆ. ಅದರಲ್ಲಿ ಎಲ್ಲಾ ಜಾತಿಯವರೂ ಇದ್ದರು, ಒಳ್ಳೆಯವರು ದುಷ್ಟರು ಉದಾಸೀನರು ಎಲ್ಲರೂ ಇದ್ದರು. ತಾವು ಕಾಲೆನ್‌ಬಾಕರ ಬಳಿ ಕಲಿತ ಕೈಗೆಲಸದ–ಬಡಗಿ, ಚಮ್ಮಾರಗೆಲಸಗಳ–ಮೂಲಕ ಅವರಿಗೆ ಶಿಕ್ಷಣಕೊಟ್ಟರು. ತಮಗೆ ಆಗ ಸಮಯ ಸಾಲದು, ಬಹಳ ಕೆಲಸ. ತಾವು ಆಗ ಕೊಟ್ಟ ಆ ಶಿಕ್ಷಣ ತಮಗೂ ಸಮರ್ಪಕವಾಗಲಿಲ್ಲ, ಆ ಮಕ್ಕಳಿಗೂ ಸಮಾಧಾನಕರವಾಗಲಿಲ್ಲ. ಆದರೂ ಅವರಿಗೆ ಏನೂ ನಷ್ಟವಾಗಲಿಲ್ಲವೆಂದು ತಮ್ಮ ವಿಶ್ವಾಸ.

ಗಾಂಧೀಜೀ ಒತ್ತಿ ಹೇಳಿದುದು ಉದ್ಯೋಗ ಶಿಕ್ಷಣವಲ್ಲ, ಕೈಗೆಲಸದ ಮೂಲಕ ಶಿಕ್ಷಣ ; ಇತಿಹಾಸ, ಭೂಗೋಳ, ಗಣಿತ, ವಿಜ್ಞಾನ, ಸಾಹಿತ್ಯ, ಎಲ್ಲಾ ಕೈಗೆಲಸದ ಮೂಲಕವೇ. ಮಧ್ಯಯುಗದಲ್ಲಿ ಇದನ್ನೇ ಕಲಿಸಿದರಲ್ಲ ಎಂದು ಆಕ್ಷೇಪಿಸಬಹುದು. ಆಗ ಕೊಟ್ಟ ವೃತ್ತಿಶಿಕ್ಷಣ, ಉದ್ಯೋಗದ ತರಬೇತು, ಶಿಕ್ಷಣದ ದೃಷ್ಟಿಯಿಂದ ಕೊಟ್ಟುದಲ್ಲ. ಈ ಕಾಲದಲ್ಲಿ ಜನ ಹುಟ್ಟುಕಸಬನ್ನು ಮರೆತಿದಾರೆ, ಗುಮಾಸ್ತೆಗಳಾಗಿದಾರೆ, ಹಳ್ಳಿಗಳನ್ನು ಬಿಟ್ಟಿದಾರೆ. ಇದರಿಂದ ಯಾವ ಹಳ್ಳಿಯಲ್ಲೂ ಒಬ್ಬ ದಕ್ಷನಾದ ಬಡಗಿ, ಕಮ್ಮಾರ ಸಿಗದಂತೆ ಆಗಿದೆ. ಕೈಗಾರಿಕೆಗಳು ಮಾಯವಾದ ಹಾಗೇ. ನಾವು ಅಸಡ್ಡೆ ಮಾಡಿದ ರಾಟೆಯನ್ನು ಲಂಕಾಷೈರಿಗೆ ಒಯ್ದು ಅಲ್ಲಿ ಅದನ್ನು ಉತ್ತಮಗೊಳಿಸಿದರು. ಇಂಗ್ಲೀಷರ ಪ್ರತಿಭೆ ದೊಡ್ಡದು. ಕೈಗಾರಿಕೆಯನ್ನು ಇಷ್ಟುಮಟ್ಟಿಗೆ ಬೆಳೆಸಿದರು. ಗಿರಣಿ ಕೈಗಾರಿಕೆಯ ಬಗ್ಗೆ ತಮ್ಮ ಅಭಿಪ್ರಾಯವೇನೇ ಇದ್ದರೂ ಈ ಮಾತನ್ನು ಹೇಳಿದರು.

## ತಕಲಿ—ಒಂದು ಉತ್ಪಾದಕ ಆಟಿಗೆ

ಇದಕ್ಕೆ ಉಪಾಯ, ಒಂದು ಕೈಗಾರಿಕೆಯ ಕಲೆ–ಶಾಸ್ತ್ರ ಎರಡನ್ನೂ ಪೂರ್ಣವಾಗಿ ಕೈಯಾರೆ ಮಾಡಿಸಿ ಕಲಿಸಬೇಕು ; ಅದರ ಮೂಲಕ ಶಿಕ್ಷಣ ಕೊಡಬೇಕು. ತಕಲಿಯಿಂದ ನೂಲುವುದರಲ್ಲಿ ಹತ್ತಿಯ ವಿವಿಧ ಜಾತಿ, ಹಿಂದೂಸ್ತಾನದ ಪ್ರಾಂತಗಳ ಭಿನ್ನ ಭಿನ್ನ ಭೂಗುಣ, ಈ ಕೈಗಾರಿಕೆಯ ವಿನಾಶದ ಇತಿಹಾಸ, ಅದರ ರಾಜಕೀಯ ಕಾರಣ–ಅದರಲ್ಲಿ ಭಾರತದಲ್ಲಿ ಬ್ರಿಟಿಷರ

ಪ್ರಭುತ್ವದ ವಿಷಯ ಬರುತ್ತದೆ, ಗಣಿತ ಇತ್ಯಾದಿ ಎಲ್ಲವೂ ಸೇರಿ ಬರುತ್ತವೆ. ತಮ್ಮ ಮೊಮ್ಮಗನ ಶಿಕ್ಷಣದಲ್ಲಿ ತಾವು ಈ ಪ್ರಯೋಗ ಮಾಡುತ್ತಿದಾರೆ. ಆ ಮಗುವಿಗೆ ತಾನು ಕಲಿಯುತ್ತಿದೇನೆ ಎನಿಸುವುದೇ ಇಲ್ಲ; ಸದಾ ಆಟ, ಹಾಡು, ನಗೆಯಲ್ಲೇ ಇರುತ್ತಾನೆ.

ತಾವು ತಕಲಿಯ ಮಾತನ್ನು ಒತ್ತಿ ಹೇಳುತ್ತಿರುವುದು—ತನಗೆ ಅದು ಬಹಳ ಸಂಬಂಧಿಸಿದುದು, ತಾನು ಅದರ ಶಕ್ತಿ-ರಸಗಳನ್ನು ಕಂಡಿರುವುದು, ಅದರ ಬಗ್ಗೆ ಪ್ರಶ್ನೆ ಕೇಳಲಿ ಎಲ್ಲರೂ ಎಂತ. ಅಲ್ಲದೆ, ಬಟ್ಟೆಯ ಕೈಗಾರಿಕೆಯೊಂದೇ ಸಾರ್ವತ್ರಿಕವಾಗಿ ಕಲಿಸಬಲ್ಲಂಥದು; ತಕಲಿಗೆ ವೆಚ್ಚವೂ ಇಲ್ಲ. ತಕಲಿ ತನ್ನ ಸಾಮರ್ಥ್ಯವನ್ನು ತೋರಿಸಿದೆ. ಅಷ್ಟೋ ಇಷ್ಟೋ ರಚನಾತ್ಮಕ ಕಾರ್ಯವನ್ನು ಮಾಡಿದುದರಿಂದಲೇ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳಾಗಿವೆ. ರಚನಾತ್ಮಕ ಕಾರ್ಯವನ್ನು ಎಷ್ಟುಮಟ್ಟಿಗೆ ನಾವು ಮಾಡಿದರೆ ಅಷ್ಟುಮಟ್ಟಿಗೆ ಆ ಮಂತ್ರಿಮಂಡಲಗಳಿಗೆ ಯಶಸ್ಸು.

ಏಳು ವರ್ಷದ ಶಿಕ್ಷಣವನ್ನು ತಾವು ಯೋಚಿಸಿದಾರೆ. ಆ ಅವಧಿಯಲ್ಲಿ ತಕಲಿ ವಿದ್ಯೆಯಲ್ಲಿ ಪರಿಣತಿ ಬರಬೇಕು: ನೇಯಿಗೆ, ಬಣ್ಣ ಹಾಕುವುದರ ವರೆಗೆ ಬರಬೇಕು. ನಾವು ನೇಯಬಹುದಾದ ಎಲ್ಲಾ ಬಟ್ಟೆಗೂ ಅಲ್ಲೇ ಗಿರಾಕಿ ಸಿದ್ಧ.

ವಿದ್ಯಾರ್ಥಿಗಳ ಶ್ರಮದಿಂದ ಬಂದುದು ಅಧ್ಯಾಪಕನ ವೆಚ್ಚಕ್ಕಾಗಬೇಕು. ಇಲ್ಲದಿದ್ದರೆ ನಮ್ಮ ಕೋಟಿಗಟ್ಟಲೆ ಹುಡುಗರಿಗೆ ಶಿಕ್ಷಣ ಕೊಡಲು ಬೇರೆ ದಾರಿ ಇಲ್ಲ. ವೈಸರಾಯ್ ಸೇನೆಯ ವೆಚ್ಚವನ್ನು ಕಡಮೆ ಮಾಡಿಯೋ ಮತ್ತೇನಾದರೂ ಮಾಡಿಯೋ ಸಾಕಷ್ಟು ಹಣ ಸಿಗುವವರೆಗೆ ಈ ಮಕ್ಕಳ ಶಿಕ್ಷಣ ಕಾಯಬೇಕೆ? ಈ ಪ್ರಾಥಮಿಕ ಶಿಕ್ಷಣದಲ್ಲಿ ನೈರ್ಮಲ್ಯ, ಆರೋಗ್ಯ, ಆಹಾರಗಳ ಪ್ರಥಮ ಸೂತ್ರಗಳ ಜ್ಞಾನ, ತಮ್ಮ ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುವುದು, ಮನೆಯಲ್ಲಿ ತಂದೆತಾಯಿಗಳಿಗೆ ನೆರವಾಗುವುದು ಮುಂತಾದವು ಇರುತ್ತವೆ; ನೆನಪಿರಲಿ. ಈಗಿನ ಹುಡುಗರಿಗೆ ಶುಚಿ, ಸ್ವಸಹಾಯ ಸ್ವಲ್ಪವೂ ತಿಳಿಯದು. ದೇಹದಾರ್ಢ್ಯ ಬಹಳ ಕಡಮೆ, ಕನಿಷ್ಠ ತರಗತಿಯದು. ಆದುದರಿಂದ ವಿದ್ಯಾರ್ಥಿಗಳಿಗೆ ಸಂಗೀತ, ಕವಾಯತುಗಳ ಮೂಲಕ ಶಾರೀರಕ ಶಿಕ್ಷಣವನ್ನು ಕಡ್ಡಾಯವಾಗಿ ಕಲಿಸಬೇಕು.

## ಒಂದೇ ದಾರಿ

ತಾವು ಅಕ್ಷರವಿದ್ಯೆಗೆ ಶತ್ರು ಎಂದು ದೂರುತ್ತಾರೆ, ಉಂಟೆ? ತಾವು ಶತ್ರುವಲ್ಲ. ಅದನ್ನು ಹೇಗೆ ಕಲಿಸಬೇಕೋ ಆ ದಾರಿ ತೋರಿಸುವ ಉದ್ದೇಶ ತಮ್ಮದು. ಸ್ವಾವಲಂಬನದ ಮಾತನ್ನೂ ಅಕ್ಷೇಪಿಸಿದಾರೆ. ಪ್ರಾಥಮಿಕ ಶಿಕ್ಷಣಕ್ಕೆ ಕೋಟಿಗಟ್ಟಲೆ ಹಣವನ್ನು ವೆಚ್ಚ ಮಾಡಬೇಕು. ಅದನ್ನು ಬಿಟ್ಟು ಮಕ್ಕಳನ್ನು ಶೋಷಣ ಮಾಡಬೇಕೆ ಎನ್ನುತ್ತಾರೆ. ಇದರಲ್ಲಿ ಅಪವ್ಯಯ, ವ್ಯರ್ಥ ಬಹಳ ಎಂಬ ಅಂಜಿಕೆಯೂ ಇದೆ. ಅನುಭವ ಇದಕ್ಕೆ ವಿರುದ್ಧವಾಗಿದೆ. ಮಕ್ಕಳಿಗೆ ಇದು ಭಾರ, ಇದು ಮಕ್ಕಳ ಶೋಷಣೆ ಎಂಬವರನ್ನು ಆ ಮಕ್ಕಳು ಹಾಳಾಗಿಹೋಗದಂತೆ ಕಾಪಾಡುವುದೂ ಒಂದು ಭಾರವೆ, ಶೋಷಣೆಯೆ ಎಂದು ತಾನು ಕೇಳುತ್ತೇನೆ ಎಂದರು. ತಕಲಿ ಒಂದು ಆಟಗೆಯ ವಸ್ತು. ಅದರಿಂದ ಉತ್ಪಾದನೆಯಾದ ಮಾತ್ರಕ್ಕೆ ಅದು ಆಟಗೆಯಾಗದೆ ಹೋಯಿತೆ? ಇಂದಿಗೂ ಮಕ್ಕಳು ತಂದೆ ತಾಯಿಗೆ ನೆರವಾಗುತ್ತಾರೆ. ಸೇವಾಗ್ರಾಮದ ಮಕ್ಕಳಿಗೆ ತಮಗಿಂತ ಹೆಚ್ಚು ಗೊತ್ತು ಬೇಸಾಯದ ಸಂಗತಿ. ತಾಯಿ ತಂದೆಗಳ ಸಂಗಡ ಅವರು ಹೊಲದಲ್ಲಿ ಕೆಲಸ ಮಾಡಿಲ್ಲವೆ? ನೂಲು ನೂತು, ಹೊಲದಲ್ಲಿ ಕೆಲಸ ಮಾಡಿ ತಾಯಿತಂದೆಗೆ ನೆರವಾಗುವುದಷ್ಟೇ ಅಲ್ಲ, ತನ್ನ ಮನೆಗೆ ಮಾತ್ರವೇ ಅಲ್ಲ, ಇಡೀ ಹಳ್ಳಿಗೆ, ಇಡೀ ದೇಶಕ್ಕೆ ತನ್ನ ಸಂಬಂಧ, ಅವಕ್ಕೆ ತಾನು ಋಣ ತೀರಿಸಬೇಕು ಎಂಬ ಭಾವನೆ ಮಕ್ಕಳಿಗೆ ಬರುವಂತೆ ಮಾಡಬೇಕು. ಅದೊಂದೇ ದಾರಿ. ಅಲ್ಲದೆ ಶಿಕ್ಷಣವನ್ನು ಕೃಪಣತೆಯಿಂದ ಕೊಟ್ಟು ಮಕ್ಕಳನ್ನು ಅಸಹಾಯರಾಗಿ ಮಾಡುತ್ತಿದೀರಿ ಎಂದು ಮಂತ್ರಿಗಳಿಗೆ ಹೇಳಬೇಕು. ತಮ್ಮ ಶ್ರಮದಿಂದ ತಮ್ಮ ಶಿಕ್ಷಣವನ್ನು ಪಡೆದರೆ ಮಕ್ಕಳಿಗೆ ಆತ್ಮವಿಶ್ವಾಸ ಧೈರ್ಯ ಬರುತ್ತವೆ.

ಈ ಪದ್ಧತಿ ಎಲ್ಲರಿಗೂ ಸಮಾನ-ಹಿಂದೂ, ಮುಸಲ್ಮಾನ, ಪಾರಸಿ, ಕ್ರಿಸ್ತಾನರೆಲ್ಲರಿಗೂ. ಧಾರ್ಮಿಕ ಶಿಕ್ಷಣದ ಬಗ್ಗೆ ಏಕೆ ಒತ್ತಿ ಹೇಳುವುದಿಲ್ಲ ಎಂದು ಕೇಳುತ್ತಾರೆ. ತಾವು ಸ್ವಾವಲಂಬನದ ವ್ಯವಹಾರಿಕ ಧರ್ಮವನ್ನೇ ಕಲಿಸುತ್ತಿರುವುದು; ಅದರಿಂದ.

## ಕಡ್ಡಾಯವಾಗಿ ಸೇವೆ

ಹೀಗೆ ಶಿಕ್ಷಣ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೂ ಪ್ರಸಂಗ ಬಂದರೆ ಸರಕಾರ ಉದ್ಯೋಗವನ್ನು ತೋರಿಸಿ ಕೊಡಬೇಕು. ಅಧ್ಯಾಪಕರಿಗೆ ಸೇವೆಯನ್ನು

ಕಡ್ಡಾಯ ಮಾಡಬೇಕೆನ್ನುತ್ತಾರೆ—ಪ್ರೊ. ಷಾ. ಇಟಲಿಯ, ಇತರ ದೇಶಗಳ ಉದಾಹರಣೆ ಕೊಟ್ಟು ಇದರ ಉಪಯೋಗವನ್ನು ಅವರು ವಿವರಿಸಿದರು. 'ಇಟಲಿಯ ಸೇವೆ ಮಾಡಲು ಆ ದೇಶದ ತರುಣರನ್ನು ಮುಸಲೋನಿ ಹುರಿದುಂಬಿಸಿದ. ನಾವೂ ಹಾಗೇಕೆ ಮಾಡಬಾರದು? ಉದ್ಯೋಗ ಮಾಡಲು ಪ್ರಾರಂಭಿಸುವ ಮುನ್ನ ಒಂದೆರಡು ವರ್ಷ ನಮ್ಮ ತರುಣರು ಕಡ್ಡಾಯವಾಗಿ ಸೇವೆ ಮಾಡಬೇಕೆಂದರೆ ಅದು ಗುಲಾಮಗಿರಿಯಾದೀತೆ? ಈ ೧೭ ವರ್ಷದಲ್ಲಿ ಸ್ವಾತಂತ್ರ್ಯದ ಚಳುವಳಿಗೆ ತರುಣರು ಎಷ್ಟೋ ಸೇವೆ ಸಲ್ಲಿಸಿದಾರೆ. ಆದುದರಿಂದ ರಾಷ್ಟ್ರದ ಸೇವೆಗಾಗಿ ಸ್ವೇಚ್ಛೆಯಿಂದ ಒಂದು ವರ್ಷ ಕೊಡಿ ಎನ್ನುತ್ತಾರೆ ಷಾ. ಇದಕ್ಕೆ ಒಂದು ಕಾನೂನು ಮಾಡಿದರೂ ಅದು ಬಲಾತ್ಕಾರವಲ್ಲ; ಬಹು ಜನ ಪ್ರತಿನಿಧಿಗಳು ಒಪ್ಪಿದ ಮೇಲೆ ತಾನೆ ಕಾನೂನು?

ಆದುದರಿಂದ ಕೈಗೆಲಸದ ಮೂಲಕ ಶಿಕ್ಷಣ ಕೊಡುವ ಈ ಪದ್ಧತಿ ಸಭೆಗೆ ಒಪ್ಪಿಗೆಯೆ ಎಂದು ಕೇಳಿದರು ಗಾಂಧೀಜೀ. ಸ್ವಾವಲಂಬನವೆ ಶಿಕ್ಷಣದ ದಕ್ಷತೆಯ ಪರೀಕ್ಷೆ. ಏಳು ವರ್ಷದ ಶಿಕ್ಷಣ ಮುಗಿಸುವ ವೇಳೆಗೆ ಮಕ್ಕಳು ತಮ್ಮ ಶಿಕ್ಷಣದ ಕಾಣಿಕೆಯನ್ನೊಪ್ಪಿಸಿ, ಗಳಿಸುವವರಾಗಬೇಕು.

ಕಾಲೇಜು ಶಿಕ್ಷಣ ಹೆಚ್ಚಾಗಿ ಪಟ್ಟಣಗಳ ವಿಷಯ. ಪ್ರಾಥಮಿಕ ಶಿಕ್ಷಣವಾದ ಹಾಗೆ ಕಾಲೇಜು ಶಿಕ್ಷಣ ಪೂರಾ ಹಾಳು, ಹದಿನಾರಾಣೆಯೂ ವ್ಯರ್ಥ ಎನ್ನದಿದ್ದರೂ ಬಹಳ ಮಟ್ಟಿಗೆ ನಿರಾಶಾದಾಯಕ. ಪದವೀಧರರಾದವರು ಒಬ್ಬನಾದರೂ ಏಕೆ ನಿರುದ್ಯೋಗಿಯಾಗಿರಬೇಕು?

ವಿನೋಬಾ ಸಭೆಯಲ್ಲಿದಾರೆ. ಅವರಿಗೆ ತಕಲಿಯ ಪೂರ್ಣ ಅನುಭವವಿದೆ. ಸದಸ್ಯರ ಆಕ್ಷೇಪಣೆಗಳಿಗೆ ಉತ್ತರ ಕೊಡುತ್ತಾರೆ. ಆದುದರಿಂದ ತಕಲಿಯ ಪ್ರಸ್ತಾಪವನ್ನು ತಾವು ಮಾಡಿದರು. ಕಾಕಾಸಾಹೇಬರಿಗೂ ಪ್ರತ್ಯಕ್ಷಾನುಭವವಿಲ್ಲದಿದ್ದರೂ ತಾತ್ವಿಕ ಅನುಭವವಿದೆ. ಅವರೂ ಹೇಳಬಲ್ಲರು. ಆರ್ಮ್‌ಸ್ಟ್ರಾಂಗ್ ಬರೆದ 'ಜೀವನ ಶಿಕ್ಷಣ'—Education for life—ಎಂಬ ಗ್ರಂಥವನ್ನು, ಅದರಲ್ಲಿನ 'ಕೈಗಳ ಶಿಕ್ಷಣ' ಎಂಬ ಪ್ರಕರಣವನ್ನು ಕಾಕಾಸಾಹೇಬರು ತಮಗೆ ತೋರಿಸಿದರು. ಕೀರ್ತಿಶೇಷ ಮಧುಸೂದನ ದಾಸರು ವಕೀಲರಾಗಿದ್ದರು. ಆದರೂ ಕೈಕಾಲುಗಳನ್ನು ಉಪಯೋಗಿಸದಿದ್ದರೆ ನಮ್ಮ ಮೆದುಳಿಗೆ ಊನವಾಗುತ್ತದೆ, ಎಂದು ಅವರು ನಂಬಿದ್ದರು. ಟಾಲ್‌ಸ್ಟಾಯ್ ಕೂಡ ಅನೇಕ ಕಥೆಗಳ ಮೂಲಕ ಅದನ್ನೇ ಹೇಳಿದರು.

## ಅಹಿಂಸೆಯ ಆಧಾರ

ತಮ್ಮ ಸ್ವಾವಲಂಬಿ ಪ್ರಾಥಮಿಕ ಶಿಕ್ಷಣದ ಆಧಾರಸೂತ್ರಗಳ ಕಡೆ ಸಭೆಯ ಗಮನ ಸೆಳೆಯುತ್ತ ಗಾಂಧೀಜೀ ಕಡೆಯಲ್ಲಿ ಹೇಳಿದರು: 'ನಮ್ಮಲ್ಲಿ ಜಾತಿ ಕಲಹ ಇದೆ–ನಮ್ಮಲ್ಲಿ ಮಾತ್ರವೇ ಇಲ್ಲ, ಇಂಗ್ಲೆಂಡಿನಲ್ಲೂ Wars of the Roses–ಗುಲಾಬಿ ಯುದ್ಧ ನಡೆದುವು. ಈಗ ಬ್ರಿಟಿಷ್ ಸಾಮ್ರಾಜ್ಯ ಲೋಕಕಂಟಕವಾಗಿದೆ. ಈಜಾತಿ ಕಲಹಗಳನ್ನೂ ಅಂತರ ರಾಷ್ಟ್ರೀಯ ಕಲಹಗಳನ್ನೂ ಅಳಿಸಿಹಾಕಬೇಕೆಂದರೆ ನಮ್ಮ ಮಕ್ಕಳನ್ನು ಶುದ್ಧವಾದ ಬಲವಾದ ಆಧಾರದ ಮೇಲೆ, ನಾನು ವಿವರಿಸಿದ ಶಿಕ್ಷಣದ ಪ್ರಕಾರ, ಬೆಳೆಸಬೇಕು. ಆ ಯೋಜನೆ ಅಹಿಂಸೆಯಿಂದ ಹೊರಸೂಸಿದುದು. ಈ ರಾಷ್ಟ್ರ ಸಂಪೂರ್ಣ ಪಾನನಿರೋಧದ ಸಂಕಲ್ಪ ಮಾಡಿದಾಗ ಆ ಯೋಜನೆಯನ್ನು ಸೂಚಿಸಿದೆ. ಒಂದು ವೇಳೆ ರಾಷ್ಟ್ರದ ವರಮಾನ ತಗ್ಗಲಿಲ್ಲ, ಬೊಕ್ಕಸ ತುಂಬಿಯೇ ಇತ್ತು, ಆಗಲೂ ನಮ್ಮ ಹುಡುಗರನ್ನು ಪಟ್ಟಣದ ವ್ಯಾಮೋಹಕ್ಕೆ ತಳ್ಳಬಾರದೆಂದರೆ ಇದೇ ಶಿಕ್ಷಣವೇ ಸರಿ. ನಮ್ಮ ಹುಡುಗರನ್ನು ನಮ್ಮ ಸಂಸ್ಕೃತಿಯ, ನಮ್ಮ ಸಭ್ಯತೆಯ, ನಮ್ಮ ರಾಷ್ಟ್ರದ ಪ್ರತಿಭೆಯ ನಿಜವಾದ ಪ್ರತಿನಿಧಿಗಳನ್ನಾಗಿ ಮಾಡಬೇಕು. ಸ್ವಾವಲಂಬಿಯಾದ ಪ್ರಾಥಮಿಕ ಶಿಕ್ಷಣದಿಂದಲ್ಲದೆ ಬೇರಾವ ಮಾರ್ಗದಿಂದಲೂ ಅದು ಸಾಧ್ಯವಲ್ಲ. ನಮಗೆ ಯೂರೋಪು ಮೇಲ್ಪಂಗ್ತಿಯಲ್ಲ. ಅದಕ್ಕೆ ಹಿಂಸೆಯಲ್ಲಿ ವಿಶ್ವಾಸ. ತನ್ನ ಯೋಜನೆಗಳನ್ನು ಹಿಂಸಾಮಯವಾಗಿ ಮಾಡುತ್ತದೆ. ರಷ್ಯಾದ ಸಾಧನೆಯನ್ನು ನಾನು ಅಲ್ಲಗಳೆಯುತ್ತಿಲ್ಲ. ಆದರೆ ಆ ರಚನೆಯೆಲ್ಲಾ ಬಲಾತ್ಕಾರ, ಹಿಂಸೆಗಳಿಂದ ತುಂಬಿದೆ. ಹಿಂದುಸ್ತಾನ ಹಿಂಸೆಯನ್ನು ವರ್ಜಿಸಲು ನಿರ್ಧರಿಸಿದುದಾದರೆ, ತಾನು ಅನುಸರಿಸಬೇಕಾದ ಶಿಸ್ತಿನ ಒಂದು ಅಂಗ, ಅಂಶ ಈ ಶಿಕ್ಷಣ ಪದ್ಧತಿ. ಇಂಗ್ಲೆಂಡು ಶಿಕ್ಷಣಕ್ಕಾಗಿ ಕೋಟಿಗಟ್ಟಲೆ ವೆಚ್ಚ ಮಾಡುತ್ತದಂತೆ. ಅಮೆರಿಕಾವೂ ಅಷ್ಟೇ. ಈ ಹಣವೆಲ್ಲ ಶೋಷಣದಿಂದ ಬಂದದ್ದು, ಸುಲಿಗೆ ಮಾಡಿದುದು ಎಂಬುದನ್ನು ನಾವು ಮರೆಯುತ್ತೇವೆ. ಶೋಷಣಕಲೆಯದೊಂದು ಶಾಸ್ತ್ರವನ್ನೇ ಮಾಡಿದಾರೆ ಅವರು. ತಮ್ಮ ಮಕ್ಕಳಿಗೆ ಅಷ್ಟು ತುಟ್ಟಿಯ ಶಿಕ್ಷಣ ಕೊಡಬಲ್ಲರು. ನಾವು ಶೋಷಣದ ಗೋಜಿಗೆ ಹೋಗಲಾರೆವು, ಹೋಗಲೊಲ್ಲೆವು. ಆದುದರಿಂದ ಅಹಿಂಸೆಯ ಆಧಾರದ ಮೇಲೆ ರಚಿಸಿದ ಈ ಶಿಕ್ಷಣ ಪದ್ಧತಿಯಲ್ಲದೆ ಬೇರೊಂದು ಇಲ್ಲವೇ ಇಲ್ಲ ನಮಗೆ.'[೪೨]

## ೩

# ಯಂತ್ರಯುಗ

ಮಧ್ಯಾಹ್ನದ ಅಧಿವೇಶನವನ್ನು ಪ್ರಾರಂಭಿಸಿ ಕೆಲವು ಟೀಕೆಗಳಿಗೆ ಉತ್ತರ ಕೊಟ್ಟರು ಗಾಂಧೀಜಿ. ತಕಲಿಯೊಂದೇ ಅಲ್ಲ ಇರುವುದು, ಆದರೆ ಸಾರ್ವತ್ರಿಕವಾಗಿ ಮಾಡಬಹುದಾದುದು ಅದೊಂದೇ. ಕಾಗದ, ತಾಳೆಬೆಲ್ಲ ಮುಂತಾದುವೂ ಇವೆ. ಯಾವ ಶಾಲೆಗೆ ಯಾವ ಕೈಗಾರಿಕೆ ಅತ್ಯುತ್ತಮ ಎಂಬುದನ್ನು ಕಂಡು ಹಿಡಿಯುವುದು ಮಂತ್ರಿಗಳ ಕೆಲಸ. ಯಂತ್ರಗಳನ್ನೇ ಪ್ರಧಾನವಾಗಿ ಮಾಡಿದಿರೋ ಮನುಷ್ಯರೇ ಯಂತ್ರಗಳಾದಾರು, ಜೋಕೆ ಎಂದು ಯಂತ್ರಭಕ್ತರಿಗೆ ಎಚ್ಚರಿಕೆ ಕೊಡುತ್ತೇನೆ ತಾನು. ಯಂತ್ರ ಯುಗದಲ್ಲಿಯೇ ಬದುಕಬೇಕೆನ್ನುವವರಿಗೆ ತನ್ನ ಯೋಜನೆ ನಿಷ್ಪ್ರಯೋಜಕ. ಆದರೆ ಯಂತ್ರಗಳನ್ನು ನಂಬಿ ಹಳ್ಳಿಯಜನ ಸಮೂಹವನ್ನು ಜೀವಂತವಾಗಿಡಲು ಸಾಧ್ಯವಿಲ್ಲ ಎಂಬುದನ್ನು ಅವರಿಗೆ ತಿಳಿಸಬೇಕು. ಇಲ್ಲಿ ೩೦ ಕೋಟಿ ಸಜೀವಯಂತ್ರಗಳಿವೆ. ಆ ನಿರ್ಜೀವ ಯಂತ್ರಗಳನ್ನು ತಂದುಹಾಕುವುದು ಬರೀ ಭ್ರಾಂತಿ. ತಾತ್ವಿಕ ಹಿನ್ನೆಲೆ ಏನೇ ಇರಲಿ, ಈ ಪದ್ಧತಿ ಶಿಕ್ಷಣದ ದೃಷ್ಟಿಯಿಂದ ಯೋಗ್ಯ ಎಂದು ಡಾ. ಜಾಕಿರ್ ಹುಸೇನ್ ಹೇಳಿದರು. ಅದು ತಪ್ಪು. ಪ್ರಾಜೆಕ್ಟ್ ಪದ್ಧತಿಯನ್ನು ಬಲ್ಲ ಒಬ್ಬ ಮಹಿಳೆ ಗಾಂಧೀಜಿಯನ್ನು ನೋಡಲು ಬಂದಿದ್ದಳು. ಪ್ರಾಜೆಕ್ಟ್ ಪದ್ಧತಿಗೂ ಗಾಂಧೀಜಿಯ ಪದ್ಧತಿಗೂ ಬಹಳ ವ್ಯತ್ಯಾಸವೆಂದು ಆಕೆ ಹೇಳಿದಳು. ಆದರೆ ನಿಮಗೆ ಸರಿತೋರದಿದ್ದರೆ ಈ ಯೋಜನೆಯನ್ನು ಒಪ್ಪಬೇಡಿ ಎಂದರು ಗಾಂಧೀಜಿ. ನಮ್ಮ ಜನ ಸರಿಯಾಗಿ ಇದನ್ನು ನಡೆಸಿದರೆ, ನಮ್ಮ ಶಾಲೆಗಳಲ್ಲಿ ಗುಲಾಮರು ಇರರು; ಪೂರ್ಣ ಉದ್ಯೋಗಕುಶಲರು ತಯಾರಾಗುತ್ತಾರೆ. ಮಕ್ಕಳು ಮಾಡಿದ ಶ್ರಮಕ್ಕೆ ಏನೇ ಇರಲಿ, ಗಂಟೆಗೆ ಎರಡು ದುಡ್ಡಾದರೂ ಆಗದೆ ?

ಆದರೆ ತಮ್ಮ ಮೇಲಿನ ಗೌರವಕ್ಕಾಗಿ ಏನನ್ನೂ ಒಪ್ಪಿಕೊಳ್ಳಬೇಡಿ ಎಂದು ಎಚ್ಚರಿಕೆ ಹೇಳಿದರು. ತಮಗೆ ಇಳಿವಯಸ್ಸು, ಕಾಲವಾಯಿತು, ಜನರ ಗಂಟಲೊಳಗೆ ಏನನ್ನೂ ತುರುಕುವ ಇಷ್ಟವಿಲ್ಲ. ಪೂರ್ಣವಾಗಿ ಪಕ್ವವಿಚಾರ ಪೂರ್ವಕವಾಗಿ ಮಥನಮಾಡಿ ಇದನ್ನು ಒಪ್ಪಿಕೊಳ್ಳಿ. ಹಾಗಾದರೆ ಬೇಗನೆ ಇದನ್ನು ಕೈಬಿಡಲಿಕ್ಕಿಲ್ಲ. ತನ್ನ ದೇಶದ ನಿರುದ್ಯೋಗಿಗಳಿಗೆ ಉದ್ಯೋಗ ಕೊಡಲಾರದ ರಾಜ್ಯ ರಾಜ್ಯವಲ್ಲ ಎಂದು ಪ್ರೊ. ಷಾ ಹೇಳಿದುದು ತಮಗೂ ಒಪ್ಪಿಗೆ. ಆದರೆ

ನಿರುದ್ಯೋಗಕ್ಕೆ ಮದ್ದು ದಾನವಲ್ಲ. ಪ್ರತಿಯೊಬ್ಬರಿಗೂ ಕೆಲಸ ಕೊಟ್ಟು ಹಣವಲ್ಲ ದಿದ್ದರೆ ಕಾಳನ್ನೋ ಅನ್ನವನ್ನೋ ಕೊಡಬೇಕು. ದೇವರು ನಮ್ಮನ್ನು ಹುಟ್ಟಿಸಿದುದು ತಿಂದು, ಕುಡಿದು ಹಾಯಾಗಿ ಇರಲಲ್ಲ, ಕೈಯಾರೆ ದುಡಿದು ಬೆವರು ಸುರಿಸಿ ಹಿಟ್ಟು ಗಳಿಸಲು.೩೩

## ೪

## ಶಿಕ್ಷಣ ಸಮ್ಮೇಳನ

### ನಿರ್ಣಯಗಳು

ಎರಡನೆಯ ದಿನ—ಅದೇ ಕಡೆಯದಿನ—ಸಮ್ಮೇಳನದಲ್ಲಿ ಕೆಳಗಿನ ತೀರ್ಮಾನ ಗಳಾದವು :

೧) ರಾಷ್ಟ್ರವ್ಯಾಪಿಯಾಗಿ ಏಳು ವರ್ಷದ ಉಚಿತ, ಬಲಾತ್ಕಾರ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯಾಗಬೇಕೆಂದು ಈ ಸಮ್ಮೇಳನ ಅಭಿಪ್ರಾಯ ಪಡುತ್ತದೆ.

೨) ಶಿಕ್ಷಣದ ಮಾಧ್ಯಮ ತಾಯಿನುಡಿಯಾಗಬೇಕು.

೩) ಈ ಅವಧಿಯಲ್ಲಿ ಶಿಕ್ಷಣ ಕ್ರಮ ಯಾವುದಾದರೊಂದು ಉತ್ಪಾದಕ ಕೈಗೆಲಸವನ್ನು ಮಧ್ಯಬಿಂದುವಾಗಿಟ್ಟುಕೊಂಡು ಸಾಗಬೇಕೆಂದೂ, ಮಕ್ಕಳ ಪರಿಸ್ಥಿತಿಗನುಸಾರವಾಗಿ ಆರಿಸಿದ ಈ ಕೈಗೆಲಸಕ್ಕೆ ಉಳಿದೆಲ್ಲ ಶಕ್ತಿಗಳ ವಿಕಾಸವೂ, ಶಿಕ್ಷಣವೂ ಸಮರಸವಾಗಿ ಹೊಂದಿಕೊಳ್ಳಬೇಕೆಂದೂ ಮಹಾತ್ಮಾ ಗಾಂಧಿಯವರು ಮಾಡಿದ ಸೂಚನೆಯನ್ನು ಈ ಸಮ್ಮೇಳನ ಅನುಮೋದಿಸುತ್ತದೆ.

೪) ಈ ಪದ್ಧತಿಯಿಂದ ಕ್ರಮೇಣ ಶಿಕ್ಷಕರ ಸಂಭಾವನೆಗೆ ಸಾಕಾಗುವಷ್ಟು ಒದಗುತ್ತದೆಂದು ಈ ಸಮ್ಮೇಳನ ನಿರೀಕ್ಷಿಸುತ್ತದೆ.

ಆಮೇಲೆ ಈ ತೀರ್ಮಾನಗಳನ್ನು ಅನುಸರಿಸಿ ಒಂದು ಪಾಠಕ್ರಮದ ಪಟ್ಟಿಯನ್ನು ಸಿದ್ಧಮಾಡಿ ಒಂದು ತಿಂಗಳೊಳಗಾಗಿ ಸಮ್ಮೇಳನದ ಅಧ್ಯಕ್ಷರಿಗೆ ಒಪ್ಪಿಸಲು ಒಂದು ಸಮಿತಿಯನ್ನು ನೇಮಿಸಲಾಯಿತು.೩೪

## ೫

## ಸಮ್ಮೇಳನ ಮುಕ್ತಾಯ

ಸಮ್ಮೇಳನದ ಕಾರ್ಯಕಲಾಪಗಳನ್ನು ಮುಕ್ತಾಯಗೊಳಿಸುತ್ತಾ ಸಮ್ಮೇಳನಕ್ಕೆ ಬಂದು ಸಹಕರಿಸಿದುದಕ್ಕೆ ಎಲ್ಲರಿಗೂ ಕೃತಜ್ಞ ಎಂದರು ಗಾಂಧೀಜೀ. ಈ ಸಮ್ಮೇಳನ ಇಂಥ ಹಲವಕ್ಕೆ ನಾಂದಿ. ಆದುದರಿಂದ ಮುಂದೆಯೂ ಸಹ ಇದೇ

ಸಹಕಾರವನ್ನು ನಿರೀಕ್ಷಿಸುವುದಾಗಿ ತಿಳಿಸಿದರು. ಪಂಡಿತ ಮಾಲವೀಯರು ಎಚ್ಚರಿಕೆಯ ತಂತಿಯನ್ನು ಕಳಿಸಿದ್ದರು. ಈ ಸಮ್ಮೇಳನ ಸತ್ಯಶೋಧಕರದು, ಇದರಲ್ಲಿ ಕಟ್ಟಕಡೆಯ ತೀರ್ಮಾನವೇನೂ ಇಲ್ಲ, ಎಲ್ಲರನ್ನೂ ಸಲಹೆ ಟೀಕೆ ಕೊಡಲೆಂದು ಕರೆಸಿತು. ಆರ್ಭಟ ಮಾಡಿ ಯಾವುದನ್ನೂ ಸಾಗಿಸಿಕೊಂಡು ಹೋಗುವ ಸ್ವಭಾವ ತಮ್ಮದಲ್ಲ. ರಾಷ್ಟ್ರೀಯ ಶಿಕ್ಷಣ, ಪಾನನಿರೋಧ ಎರಡೂ ಅಸಹಕಾರದಷ್ಟೇ ಹಳೆಯವು. ಆದರೆ ಈಗಿನ ಈ ರೂಪು ದೇಶದ ಪರಿವರ್ತಿತ ಪರಿಸ್ಥಿತಿಯಿಂದ ಮೂಡಿಬಂದದ್ದು.೨೫

## ೬
## ಒಂದು ಹೆಜ್ಜೆ ಮುಂದೆ

ಶಿಕ್ಷಣ ಸಮ್ಮೇಳನದ ವರದಿ ಬೇರೆ ಕಡೆ ಇದೆ. ನನ್ನ ಯೋಜನೆಯನ್ನು ಜನತೆಗೆ, ಕಾಂಗ್ರೆಸ್ ಮಂತ್ರಿಗಳಿಗೆ ಒಪ್ಪಿಸುವ ಕೆಲಸದಲ್ಲಿ ಇದೊಂದು ಮುಖ್ಯ ಘಟ್ಟ. ಇಷ್ಟು ಜನ ಮಂತ್ರಿಗಳು ಬಂದಿದ್ದುದೂ ಒಂದು ಶುಭಾರಂಭ. ಅಲ್ಲಿ ಬಂದ ಆಕ್ಷೇಪಣೆ, ಟೀಕೆ ಎಲ್ಲವೂ ಸ್ವಾವಲಂಬನದ ಬಗ್ಗೆಯೇ. ಆದುದರಿಂದಲೇ ಸಮ್ಮೇಳನ ಬಹಳ ಎಚ್ಚರಿಕೆಯಿಂದ ತನ್ನ ನಿರ್ಣಯವನ್ನು ಮಾಡಿದೆ, ಸಮ್ಮೇಳನದ ಕಾರ್ಯಕಲಾಪಕ್ಕೆ ಗೊತ್ತಾದ ಜಾಡು ಯಾವುದೂ ಇರಲಿಲ್ಲ. ಯಾವ ಉದಾಹರಣೆಯೂ ಇರಲಿಲ್ಲ. ಯೋಗ್ಯವಾಗಿದ್ದರೆ ವಿಚಾರ ಆಚರಣೆಯಲ್ಲಿ ತಾನೇ ರೂಪುಗೊಳ್ಳುತ್ತದೆ. ಸ್ವಾವಲಂಬನದ ತತ್ವದಲ್ಲಿ ವಿಶ್ವಾಸವಿದ್ದವರ ಕೆಲಸ ಶಾಲೆಗಳಲ್ಲಿ ಅದನ್ನು ಪ್ರಯೋಗ ಮಾಡಿ ತೋರಿಸುವುದು.

ಸೆಕೆಂಡರಿ ತರಗತಿಗಳೂ ಸೇರಿದ ಪೂರ್ಣ ಪ್ರಾಥಮಿಕ ಶಿಕ್ಷಣವನ್ನು, ಇಂಗ್ಲೀಷು ಬಿಟ್ಟು, ಉದ್ಯೋಗದ ಮೂಲಕ ಕೊಡುವುದರ ವಿಷಯದಲ್ಲಂತೂ ಸಂಪೂರ್ಣ ಏಕಾಭಿಪ್ರಾಯವಿತ್ತು ಸಮ್ಮೇಳನದಲ್ಲಿ. ಉದ್ಯೋಗದ ಮೂಲಕ ಹುಡುಗ ಹುಡುಗಿಯರ ಪೂರ್ಣ ವ್ಯಕ್ತಿತ್ವ ವಿಕಾಸವಾಗಬೇಕೆಂಬುದರಿಂದ, ಶಾಲೆಗಳು ಕಾರಖಾನೆಗಳಾಗುವುದು ತಪ್ಪುತ್ತದೆ. ಉದ್ಯೋಗದಲ್ಲಿ ದಕ್ಷತೆ ಗಳಿಸುವುದರ ಜೊತೆಗೆ ತಾವು ಕಲಿಯಬೇಕಾದ ಇತರ ವಿಷಯಗಳಲ್ಲೂ ಅಷ್ಟೇ ದಕ್ಷತೆಯನ್ನು ತೋರಬೇಕಾಗುತ್ತದೆ.

ಈ ಯೋಜನೆಯನ್ನು ಹೇಗೆ ರೂಢಿಗೆ ತರಬಹುದೋ, ಪ್ರತಿವರ್ಷವೂ ಮಕ್ಕಳು ಏನು ಕಲಿಯುತ್ತಾ ಹೋಗಬೇಕೋ ಡಾ. ಜಾಕಿರ್ ಹುಸೇನ್

ಸಮಿತಿಯ ಪರಿಶ್ರಮ ತಿಳಿಸೀತು.

ಸಮ್ಮೇಳನದಲ್ಲಿ ಇವೇ ತೀರ್ಮಾನಗಳು ಆಗುತ್ತವೆ ಎಂದು ಮೊದಲೇ ಗೊತ್ತಿತ್ತು ಎಂಬ ಟೀಕೆ ಬಂದಿದೆ. ಇದರಲ್ಲಿ ಹುರಳಿಲ್ಲ. ಶಿಕ್ಷಣ ಪಂಡಿತರನ್ನು ಕರೆದು, ಅವರ ಪಾಲಿಗೆ ಕ್ರಾಂತಿಕಾರಿಯೆನಿಸುವ ಒಂದು ಯೋಜನೆಯನ್ನು ಮುಂದಿಟ್ಟು ನಿಮ್ಮ ಅಭಿಪ್ರಾಯ ಹೇಳಿ ಎಂದು ಯಾವ ವ್ಯವಸ್ಥೆಯೂ ಇಲ್ಲದೆ ಕೇಳಲು ಸಾಧ್ಯವಿರಲಿಲ್ಲ. ಆದುದರಿಂದ ಉದ್ಯೋಗ ಶಿಕ್ಷಣಕ್ಕೆ ಸಂಬಂಧಿಸಿದಂಥವರನ್ನು ಮಾತ್ರ ಆಹ್ವಾನಿಸಲಾಯಿತು. ರಾಷ್ಟ್ರೀಯ ಶಿಕ್ಷಣದ ಕೆಲಸ ಮಾಡುತ್ತಿರುವ ಜೊತೆಗಾರರು ಈ ಹೊಸ ವಿಚಾರವನ್ನು ಸಹಾನುಭೂತಿಯಿಂದ ನೋಡಿಯಾರೆಂದು ನನಗೇ ಅನಿಸಿರಲಿಲ್ಲ. ಜಾಕಿರ್ ಹುಸೇನ್ ಸಮಿತಿಯ ಮೂಲಕ ಇನ್ನೂ ಪೂರ್ಣ ರೂಪದಲ್ಲಿ ಸ್ಪಷ್ಟವಾಗಿ ಬಂದಾಗ ಈ ಯೋಜನೆಯನ್ನು ಪರಿಶೀಲಿಸಲು ಶಿಕ್ಷಣ ಪಂಡಿತರ ವಿಶಾಲ ಸಮೂಹವನ್ನು ಕರೆಯಲಾಗುತ್ತದೆ; ಸಂದೇಹವಿಲ್ಲ. ಉಪಯುಕ್ತ ಸಲಹೆಗಳೇನಾದರೂ ಇದ್ದರೆ ಶಿಕ್ಷಣ ಪಂಡಿತರು ಅದನ್ನು ಸಮ್ಮೇಳನದ ಕಾರ್ಯದರ್ಶಿ ಶ್ರೀ ಆರ್ಯನಾಯಕಂಗೆ ಕಳಿಸಲೆಂದು ಕೋರುತ್ತೇನೆ.

ಚಿಕ್ಕ ಮಕ್ಕಳ ಶಿಕ್ಷಣವನ್ನು ಗಂಡಸರಿಗಿಂತ ಹೆಂಗಸರೇ, ಅವಿವಾಹಿತೆಯರಿಗಿಂತ ತಾಯಿಯರೇ, ಚೆನ್ನಾಗಿ ನಡೆಸಬಲ್ಲರೆಂದು ಸಮ್ಮೇಳನದಲ್ಲಿ ಒಬ್ಬರು ಒತ್ತಿ ಹೇಳಿದರು. ಪ್ರೊ. ಷಾ ಅವರ ಕಡ್ಡಾಯದ ಶಿಕ್ಷಕತನದ ಸೂಚನೆಗೆ ಇನ್ನೊಂದು ದೃಷ್ಟಿಯಿಂದಲೂ ಉತ್ತರ ಹೇಳಲು ಅವರು ನನಗಿಂತ ಯೋಗ್ಯರು. ಅತ್ಯುತ್ತಮ, ಘನ ಆದ ಈ ಸೇವೆ ಸಲ್ಲಿಸಲು ಬಿಡುವಿದ್ದ ದೇಶಾಭಿಮಾನಿ ಸ್ತ್ರೀಯರಿಗೆಲ್ಲ ಮಹದವಕಾಶ! ಹಾಗೆ ಸೇವೆಮಾಡಲು ಬರುವವರು ಮೊದಲು ಸರಿಯಾದ ತರಬೇತು ಪಡೆಯಬೇಕು. ಸಂಬಳಕ್ಕಾಗಿ ಇದನ್ನು ಹಿಡಿಯುವ ಹೆಂಗಸರಿಂದ ಏನೂ ಲಾಭವಾಗದು. ಈ ಯೋಜನೆಗೆ ಕೈಹಾಕುವುದಾದರೆ ಸೇವಾಭಾವದಿಂದ ಜೀವನಧರ್ಮವೆಂದು ತಿಳಿದು ಬರಬೇಕು. ಸ್ವಾರ್ಥಕ್ಕಾಗಿ ಬಂದರೆ ವಿಫಲರಾದಾರು, ನಿರಾಶರಾದಾರು. ಹಿಂದುಸ್ತಾನದ ನಾಗರಿಕ ಸ್ತ್ರೀಯರು ಹಳ್ಳಿಯ ಸಮಸ್ಯೆಯನ್ನು, ಹಳ್ಳಿಯ ಮಕ್ಕಳ ಮೂಲಕ ಬಿಡಿಸಲು ಯತ್ನಿಸಿದರೆ, ಹಿಂದುಸ್ತಾನದ ಹಳ್ಳಿಯ ಬಾಳಿನಲ್ಲಿ ಸದ್ದಿಲ್ಲದೆ ಅದ್ಭುತ ಕ್ರಾಂತಿಯನ್ನೆ ಮಾಡಿಯಾರು. ಈ ಕರೆಗೆ ಅವರು ಓಗೊಡುತ್ತಾರೆಯೆ? ೧೬

## ಅಧ್ಯಾಯ ೪

# ಸ್ವಾವಲಂಬಿ ಶಿಕ್ಷಣ

## ೧

### ಶಿಕ್ಷಣ: ಹೆಂಡದ ಹಣ

ಶಿಕ್ಷಣ ಸಮಸ್ಯೆಯ ಪರಿಹಾರಕ್ಕೂ ಹೆಂಡದ ವರಮಾನ ನಿಲ್ಲುವುದಕ್ಕೂ ಗಂಟುಬಿದ್ದುದು ದುರ್ದೈವ. ಹೊಸ ತೆರಿಗೆ ಹಾಕಲು ಯಾವಾಗಲೂ ಅವಕಾಶವಿದೆ; ನಿಜ. ಪ್ರೊ. ಷಾ, ಪ್ರೊ. ಖಾಂಭಟ್ಟರು ಈ ಬಡ ದೇಶದಲ್ಲೂ ಹೊಸ ತೆರಿಗೆ ಹುಟ್ಟಬಲ್ಲದು ಎಂದು ತೋರಿಸಿಕೊಟ್ಟದಾರೆ. ಐಶ್ವರ್ಯಕ್ಕೆ ಇನ್ನೂ ಸಾಕಷ್ಟು ತೆರಿಗೆ ಹಾಕಿಲ್ಲ. ಉಳಿದೆಲ್ಲ ದೇಶಗಳಿಗಿಂತ ಈ ದೇಶದಲ್ಲಿ, ಒಬ್ಬೊಬ್ಬ ವ್ಯಕ್ತಿ ಅಪಾರ ಐಶ್ವರ್ಯವನ್ನು ಸಂಗ್ರಹಿಸುವುದು ಭಾರತೀಯ ಮಾನವಕೋಟಿಗೆ ಎಸಗಿದ ದ್ರೋಹ, ಅಪರಾಧ ಎಂದು ಪರಿಗಣಿಸಬೇಕು. ಒಂದು ಮಿತಿ, ಅದನ್ನು ದಾಟಿದ ಮೇಲೆ ಐಶ್ವರ್ಯದ ತೆರಿಗೆ ಇಷ್ಟೇ ಎಂದು ಲೆಕ್ಕಹಾಕುವಂತಿಲ್ಲ. ಇಂಗ್ಲೆಂಡಿನಲ್ಲಿ ಸಂಗ್ರಹದ ಮಿತಿ ದಾಟಿದಮೇಲೆ ನೂರಕ್ಕೆ ಎಪ್ಪತ್ತರಂತೆ ತೆರಿಗೆ ಕೊಡಬೇಕಂತೆ. ಹಿಂದುಸ್ತಾನದಲ್ಲಿ ಇನ್ನೂ ಹೆಚ್ಚು ತೆರಿಗೆ ಏಕೆ ಹಾಕಬಾರದು? ಸಾವಿನ ತೆರಿಗೆಯೇಕೆ ಬೇಡ? ಕೋಟೀಶ್ವರರ ಮಕ್ಕಳಿಗೆ ವಯಸ್ಸು ಬಂದರೂ, ಪಿತ್ರಾರ್ಜಿತ ಆಸ್ತಿ ಬರುವುದರಿಂದ, ಆ ಕಾರಣದಿಂದಲೇ, ವ್ಯರ್ಥಜೀವಿಗಳಾಗುತ್ತಾರೆ. ಹೀಗಾಗಿ ರಾಷ್ಟ್ರಕ್ಕೆ ಉಭಯ ನಷ್ಟ. ಆ ಸೊತ್ತು ನಿಜವಾಗಿ ರಾಷ್ಟ್ರಕ್ಕೆ ಸೇರಬೇಕಾದುದು; ಅದು ಹೋಯಿತು. ಈ ಐಶ್ವರ್ಯದ ಭಾರಕ್ಕೆ ಬಜ್ಜಿಯಾಗಿ ಶ್ರೀಮಂತರ ಮಕ್ಕಳ ಪೂರ್ಣವಿಕಾಸವಾಗದೆ, ಹಾಗೂ ನಷ್ಟ. ಪ್ರಾಂತೀಯ ಸರಕಾರಗಳು ಸಾವಿನ ತೆರಿಗೆ ಹಾಕುವಂತಿಲ್ಲ ಎಂದರೆ ನನ್ನ ವಾದಕ್ಕೆ ಚ್ಯುತಿಯಿಲ್ಲ.

ನಮ್ಮ ರಾಷ್ಟ್ರ ಶಿಕ್ಷಣದಲ್ಲಿ ಬಹಳ ಹಿಂದುಳಿದಿದೆ. ಶಿಕ್ಷಣದ ಯೋಜನೆ ಹಣವನ್ನು ಅವಲಂಬಿಸಿದರೆ ಈ ಪೀಳಿಗೆಯಲ್ಲೇನು ನಮ್ಮ ಈ ವಿದ್ಯಾಋಣ ತೀರಲಾರದು, ಆದುದರಿಂದ ರಚನಾತ್ಮಕ ಸಾಮರ್ಥ್ಯಕ್ಕೆ ನನಗಿರುವ ಕೀರ್ತಿ ಹೋದರೂ ಚಿಂತೆಯಿಲ್ಲ ಎಂದು ಶಿಕ್ಷಣ ಸ್ವಾವಲಂಬಿಯಾಗಬೇಕು ಎಂಬ ಸೂಚನೆ ಮಾಡಿದೇನೆ. ಶಿಕ್ಷಣವೆಂದರೆ ಮಗುವಿನ, ಮನುಷ್ಯನ ದೇಹ—ಮನ—

ಆತ್ಮಗಳ ಉತ್ತಮ ಶಕ್ತಿಗಳನ್ನೆಲ್ಲ ಸರ್ವತೋಮುಖವಾಗಿ ವಿಕಸನಗೊಳಿಸುವುದು ಎಂದು ನನ್ನ ಅಭಿಪ್ರಾಯ. ಅಕ್ಷರದ ಕಲಿವು ಶಿಕ್ಷಣದ ಕೊನೆಯಲ್ಲ, ಪ್ರಾರಂಭವೂ ಅಲ್ಲ. ಗಂಡು ಹೆಣ್ಣು ಶಿಕ್ಷಣ ಪಡೆಯಲು ಅಕ್ಷರಜ್ಞಾನವೂ ಒಂದು ಸಾಧನ. ಅಷ್ಟೇ. ಅಕ್ಷರ ಜ್ಞಾನವೇ ವಿದ್ಯಾಭ್ಯಾಸವಲ್ಲ, ಆದುದರಿಂದ ಮಗುವಿಗೆ ಒಂದು ಪ್ರಯೋಜನಕರ ಕೈಗಾರಿಕೆಯನ್ನು ಕಲಿಸುತ್ತ ನಾನು ಶಿಕ್ಷಣವನ್ನು ಮೊದಲಿಡುತ್ತೇನೆ. ಶಿಕ್ಷಣದ ಆರಂಭದಲ್ಲಿಯೇ ಮಗು ಉತ್ಪಾದನೆ ಮಾಡುವಂತಿರಬೇಕು. ಹೀಗಾದರೆ ಪ್ರತಿಯೊಂದು ಶಾಲೆಯೂ ಸ್ವಾವಲಂಬಿಯಾದೀತು. ಈ ಶಾಲೆಗಳಲ್ಲಿ ಉತ್ಪತ್ತಿಯಾದುದನ್ನು ಸರಕಾರ ಕೊಳ್ಳಬೇಕೆಂಬ ನಿಯಮ ಇದ್ದರಾಯಿತು.

ಇಂಥ ಶಿಕ್ಷಣದಿಂದ ಮನಸ್ಸು-ಆತ್ಮಗಳ ಅತ್ಯುನ್ನತ ವಿಕಾಸ ಸಾಧ್ಯ ಎಂದು ನನ್ನ ಸಿದ್ಧಾಂತ. ಕೈಗಾರಿಕೆಯನ್ನು ಈಗ ಕಲಿಸುವಂತೆ ಯಾಂತ್ರಿಕವಾಗಿ ಕಲಿಸಿದರೆ ಆಗದು; ಶಾಸ್ತ್ರೀಯವಾಗಿ ಕಲಿಸಬೇಕು. ಅದರ ಪ್ರತಿಯೊಂದು ಕ್ರಿಯೆಯ ಕಾರಣ-ಪರಿಣಾಮಗಳನ್ನೂ ಮಗು ಅರಿತಿರಬೇಕು. ಆತ್ಮವಿಶ್ವಾಸವಿಲ್ಲದೆ ಈ ಮಾತನ್ನು ನಾನು ಬರೆಯುತ್ತಿಲ್ಲ. ಅದಕ್ಕೆ ಅನುಭವದ ಆಧಾರವಿದೆ. ಕೆಲಸಗಾರರಿಗೆ ನೂಲುವುದನ್ನು ಕಲಿಸುವಲ್ಲೆಲ್ಲಾ ಈ ಪದ್ಧತಿಯನ್ನು ಅನುಸರಿಸುತ್ತಿದಾರೆ. ಈ ರೀತಿ ನಾನೇ ಮೆಟ್ಟು ಹೊಲಿಯುವುದನ್ನೂ ನೂಲುವುದನ್ನೂ ಕಲಿಸಿದೇನೆ; ಒಳ್ಳೆಯ ಫಲ ಕೊಟ್ಟಿದೆ. ಈ ಪದ್ಧತಿಯಲ್ಲಿ ಇತಿಹಾಸ, ಭೂಗೋಳಗಳ ಜ್ಞಾನಕ್ಕೆ ಬಹಿಷ್ಕಾರವಿಲ್ಲ. ಆದರೆ ಇಂಥ ಸಾಮಾನ್ಯ ಜ್ಞಾನವನ್ನೆಲ್ಲ ಬಾಯಿಂದ ಹೇಳಿ ಕಲಿಸುವುದು ಉತ್ತಮವೆಂದು ನನಗೆ ಕಂಡುಬಂದಿದೆ. ಓದಿಸಿದರೆ, ಬರೆಸಿದರೆ ಎಷ್ಟೋ ಅದಕ್ಕಿಂತ ಹತ್ತರಷ್ಟು ಹೆಚ್ಚು ಜ್ಞಾನವನ್ನು ಈ ಶ್ರವಣ ಪದ್ಧತಿಯಿಂದ ಕಲಿಸಬಹುದು. ಕೆಲವು ಕಾಲದ ಮೇಲೆ, ವಿದ್ಯಾರ್ಥಿಗೆ ಗಟ್ಟಿ-ಜೊಳ್ಳು ಯಾವುದು ಎಂಬುದು ತಿಳಿಯುವಂತಾದಮೇಲೆ, ಅಭಿರುಚಿ ಬೆಳೆದ ತರುವಾಯ, ಅಕ್ಷರಗಳನ್ನು ಕಲಿಸಬಹುದು. ಈ ಸೂಚನೆ ಕ್ರಾಂತಿಕಾರಿ; ಆದರೆ ಅದರಿಂದ ಅಪಾರ ಶ್ರಮ ಉಳಿಯುತ್ತದೆ. ಸಾಮಾನ್ಯವಾಗಿ ಬಹಳ ಕಾಲ ಹಿಡಿಯುವುದನ್ನು ವಿದ್ಯಾರ್ಥಿ ಒಂದೇ ವರ್ಷದಲ್ಲಿ ಕಲಿಯುತ್ತಾನೆ. ಎಂದರೆ ಎಲ್ಲಾ ರೀತಿಯಲ್ಲೂ ಉಳಿತಾಯ, ಮಿತವ್ಯಯ. ಕೈಗಾರಿಕೆ ಕಲಿಯುವಾಗಲೇ ವಿದ್ಯಾರ್ಥಿ ಗಣಿತವನ್ನೂ ಕಲಿಯುತ್ತಾನೆ.

ಪ್ರಾಥಮಿಕ ಶಿಕ್ಷಣಕ್ಕೆ ನಾನು ಅತ್ಯಂತ ಪ್ರಾಧಾನ್ಯವನ್ನು ಕೊಡುತ್ತೇನೆ. ಪ್ರಾಥಮಿಕ ಶಿಕ್ಷಣ ಈಗಿನ ಮೆಟ್ರಿಕ್ಯುಲೇಷನ್ ಮಟ್ಟದ್ದು-ಇಂಗ್ಲೀಷೊಂದು

ಬಿಟ್ಟು—ಆಗಿರಬೇಕು. ಈಗ ಕಾಲೇಜು ಶಿಕ್ಷಣ ಪಡೆದಿರುವವರಿಗೆಲ್ಲ ಏಕಾಏಕಿ ಏನೋ ಆಗಿ, ಅವರು ಕಲಿತುದನ್ನೆಲ್ಲ ಮರೆತುಬಿಟ್ಟರು ಎನ್ನಿ. ಈ ಹಲವು ಲಕ್ಷ ಜನರ ಮರವಿನಿಂದ ರಾಷ್ಟ್ರಕ್ಕೆ ಆಗುವ ನಷ್ಟಕ್ಕಿಂತ ನಮ್ಮ ಮೂವತ್ತು ಕೋಟಿ ಜನರನ್ನು ಕವಿದಿರುವ ಕತ್ತಲೆಯ ಕಡಲಿನಿಂದ ಆಗುತ್ತಿರುವ ನಷ್ಟ ಅಪಾರ ವಾದುದು. ಅನಕ್ಷರತೆಯೊಂದು ಗುರುತೂ ಅಲ್ಲ, ಅಳತೆಯೂ ಅಲ್ಲ, ನಮ್ಮ ಕೋಟ್ಯಂತರ ಗ್ರಾಮಸ್ಥರ ಅಜ್ಞಾನಕ್ಕೆ.

ಕಾಲೇಜು ಶಿಕ್ಷಣವನ್ನೂ ಪರಿವರ್ತನೆ ಮಾಡಿ ರಾಷ್ಟ್ರದ ಆವಶ್ಯಕತೆಗಳಿಗೆ ಅದನ್ನು ಹೊಂದಿಸಬಯಸುತ್ತೇನೆ ನಾನು. ಯಂತ್ರವಿದ್ಯೆ, ಉಳಿದ ನಿರ್ಮಾಣ ತಂತ್ರ ಕಲಿತ ಇಂಜನೀಯರುಗಳಿಗೆ ಪದವಿಗಳಿರಲಿ. ಆ ಶಾಲೆಗಳನ್ನೆಲ್ಲ ಆ ವಿದ್ಯೆ ಯಾವ ಉದ್ಯೋಗಗಳಿಗೆ ಅಗತ್ಯವೋ ಅವರೇ ನಡೆಸಬೇಕು. ತಾತಾ ಕಂಪನಿ ಯವರು ಸರಕಾರದ ಮೇಲ್ವಿಚಾರಣೆಯಲ್ಲಿ ಇಂಜನೀಯರ್ ಶಿಕ್ಷಣ ಶಾಲೆಯನ್ನು ನಡೆಸಿಯಾರು; ತಮಗೆ ಬೇಕಾದಂಥ ಪದವೀಧರರನ್ನು ಗಿರಣಿಗಳ ಸಂಘ ತರಬೇತು ಮಾಡೀತು. ಉಳಿದ ಉದ್ಯೋಗಗಳಿಗೂ ಹೀಗೇ. ವಾಣಿಜ್ಯದವರು ತಮ್ಮ ಕಾಲೇಜನ್ನು ನಡೆಸಲಿ. ಇನ್ನುಳಿದುದು ಕಾವ್ಯ, ಸಾಹಿತ್ಯ, ಕಲೆ, ವೈದ್ಯ, ವ್ಯವಸಾಯ. ಎಷ್ಟೋ ಕಾವ್ಯ-ಸಾಹಿತ್ಯ-ಕಲೆಯ ಖಾಸಗಿ ಕಾಲೇಜುಗಳು ಈಗ ಸ್ವಾವಲಂಬಿಗಳಾಗಿವೆ. ಆದುದರಿಂದ ಸರಕಾರ ಅದನ್ನು ತಾನು ನಡೆಸಬೇಕಾಗಿಲ್ಲ; ಕೈಬಿಟ್ಟೀತು. ಕೆಲವು ಪ್ರಮಾಣಿತ ಆಸ್ಪತ್ರೆಗಳಿಗೆ ವೈದ್ಯದ ಕಾಲೇಜುಗಳನ್ನು ಜೋಡಿಸಬೇಕು. ಆಸ್ಪತ್ರೆಗಳಲ್ಲಿ ಶ್ರೀಮಂತರಿಗೆ ಆಸ್ಥೆ ಹೆಚ್ಚು. ಆ ವೈದ್ಯದ ಕಾಲೇಜುಗಳನ್ನು ಅವರು ದಾನ ಕೊಟ್ಟು ಪ್ರೋಷಿಸಬಲ್ಲರು. ವ್ಯವಸಾಯದ ಕಾಲೇಜು, ಆ ಹೆಸರಿಗೆ ಯೋಗ್ಯವಾಗಬೇಕಾದರೆ, ಸ್ವಾವಲಂಬಿಯಾಗಿರಬೇಕು. ಕೆಲವರು ವ್ಯವಸಾಯ ಪದವೀಧರರ ದುಃಖಮಯ ಅನುಭವ ನನಗಿದೆ. ಅವರ ಜ್ಞಾನ ಬರೀ ಸಿಪ್ಪೆ: ಕ್ರಿಯಾತ್ಮಕ ಅನುಭವ ಇಲ್ಲವೇ ಇಲ್ಲ. ಈ ದೇಶಕ್ಕೆ ಅನುಗುಣವಾದ ಸ್ವಸಂಪೂರ್ಣ ವ್ಯವಸಾಯಕ್ಷೇತ್ರಗಳಲ್ಲಿ ಕಲಿತಿದ್ದರೆ, ಪದವೀ ಧರರಾದ ಮೇಲೆ ಇವರಿಗೆ ಸಂಬಳ ಕೊಡುವವರ ವೆಚ್ಚದಲ್ಲಿ ಇವರು ಅನುಭವ ಗಳಿಸಬೇಕಾದ ಪ್ರಮೇಯವಿರುತ್ತಿರಲಿಲ್ಲ.

ಇದು ಕಾಲ್ಪನಿಕ ಚಿತ್ರವಲ್ಲ. ನಮ್ಮ ಮನಸ್ಸಿನ ಆಲಸ್ಯವನ್ನು ಬಿಟ್ಟರೆ, ನಮ್ಮ ಶಿಕ್ಷಣ ಸಮಸ್ಯೆಗೆ ಇದು ಯುಕ್ತಿಯುಕ್ತ, ವಾಸ್ತವಿಕ, ಅತ್ಯುತ್ತಮ ಪರಿಹಾರವೆಂದು ಕಂಡೀತು. ಬ್ರಿಟಿಷ್ ಸರಕಾರದ ಪರ ಇತ್ತೀಚೆಗೆ ಮಾಡಿದ

ಘೋಷಣೆಯನ್ನು ನೋಡಿದರೆ, ಮಂತ್ರಿಗಳಿಗೆ ತಮ್ಮ ಧೋರಣೆಯಂತೆ ರಾಜ ನಡೆಸಲು ನೌಕರಶಾಹಿಯ ಸಂಘಟನಾ ಸಾಮರ್ಥ್ಯ ನೆರವಾಗುತ್ತದೆ ಎಂದು ನಂಬಬಹುದು. ವಿಲಕ್ಷಣ ಪ್ರಕೃತಿಯ ವೈಸರಾಯ್-ಗವರ್ನರುಗಳು ಧೋರಣೆಯನ್ನೂ ವ್ಯವಹಾರದಲ್ಲಿ ಚತುರತೆಯಿಂದ ನಡೆಸುವ ಕಲೆ ನೌಕರ ವರ್ಗಕ್ಕೆ ಗೊತ್ತಿದೆ. ಮಂತ್ರಿಗಳು ಚೆನ್ನಾಗಿ ವಿವೇಚಿಸಿ ದೃಢವಾದ ಒಂದು ನೀತಿಯನ್ನು ರೂಪಿಸಲಿ; ಅಧಿಕಾರಿಗಣ ತಮ್ಮ ಪರವಾಗಿ ಕೊಟ್ಟ ವಚನವನ್ನು ಪಾಲಿಸಲಿ, ತಿಂದ ಉಪ್ಪಿಗೆ ತಕ್ಕಹಾಗೆ ನಡೆಯಲಿ.

ಇನ್ನುಳಿದುದು ಶಿಕ್ಷಕರ ಪ್ರಶ್ನೆ; ವಿದ್ಯಾವಂತರಿಂದ ಕಡ್ಡಾಯವಾಗಿ ಸೇವೆ ಮಾಡಿಸುವ ಪ್ರೊ. ಷಾ ಅವರ ವಿಚಾರ ನನಗೆ ಸಮ್ಮತ. ಐದು ವರ್ಷ ತಾವು ಕಲಿತ ವಿದ್ಯೆಯನ್ನು ಹೇಳಿಕೊಡುವಂತೆ ಅವರನ್ನು ಬಲಾತ್ಕಾರಿಸೋಣ. ದೇಶದ ಆರ್ಥಿಕ ಸ್ಥಿತಿಗೆ ಅನುಗುಣವಾಗಿ, ತಮ್ಮ ಉದರ ನಿರ್ವಾಹಕ್ಕಿಂತ ಹೆಚ್ಚು ಆಗದಂತೆ ಸಂಬಳ ತೆಗೆದುಕೊಳ್ಳಲಿ. ಮೇಲಿನ ಹಂತಗಳಲ್ಲಿ ಶಿಕ್ಷಕರು, ಪ್ರಾಧ್ಯಾಪಕರು ಕೇಳುತ್ತಿರುವ ಹೆಚ್ಚು ಸಂಬಳಗಳು ಹೋಗಬೇಕು. ಹಳ್ಳಿಯ ಶಿಕ್ಷಕನ ಸ್ಥಳಕ್ಕೆ ಸಮರ್ಥರನ್ನು ತರಬೇಕು.[೧೭]

## ೭

## ಶಿಕ್ಷಣದ ಒಗಟು

ಕಾಂಗ್ರೆಸ್ ಮಂತ್ರಿಮಂಡಲಗಳು ಅಧಿಕಾರಕ್ಕೆ ಬಂದಾಗಿನಿಂದ ಗಾಂಧೀಜಿ ನಡೆಸಿದ ಸಂವಾದಗಳಲ್ಲಿ ಒಮ್ಮೆ ಹೇಳಿದರು: 'ನಮ್ಮ ಮಕ್ಕಳಿಗೆ ಶಿಕ್ಷಣ ಕೊಡಲು ಹೆಂಡದ ಹಣವೇ ನಮಗೆ ಗತಿ. ಈ ಸುಧಾರಣೆಗಳ ವಕ್ರವಿಡಂಬನ ಇದು. ಇದೇ ಶಿಕ್ಷಣದ ಒಗಟು. ನಾವು ಗಾಬರಿಪಡಬೇಕಾಗಿಲ್ಲ. ಒಗಟನ್ನು ಬಿಡಿಸಬೇಕು. ಆದರೆ ಅದಕ್ಕಾಗಿ ಪಾನನಿರೋಧದ ನಮ್ಮ ಧ್ಯೇಯವನ್ನು ನಾವು ಬಿಡಬಾರದು, ಏನೇ ಬರಲಿ. ಹೆಂಡದ ಹಣ ಬಾರದೆ ಹೋದರೆ ನಮ್ಮ ಮಕ್ಕಳಿಗೆ ವಿದ್ಯಾಭ್ಯಾಸವಿಲ್ಲ ಎಂಬ ವಿಚಾರವೇ ನಾಚಿಕೆಗೇಡು, ಅಪಮಾನಕರ. ಹಾಗೆ ಅನಿವಾರ್ಯವಾಗಿ ಬಂದರೆ ಅದೊಂದು ಆಪದ್ಧರ್ಮ ಎಂದು ಮಾಡಬೇಕು. ಈ ಅಂಕಿ ಅಂಶಗಳ ಮಾಯೆಗೆ ಸಿಕ್ಕದೆ, ಈಗಿರುವಂಥದೇ ಶಿಕ್ಷಣ ಬೇಕು ನಮ್ಮ ಮಕ್ಕಳಿಗೆ ಎಂಬ ಭ್ರಾಂತಿಯನ್ನು ಬಿಟ್ಟರೆ, ಇದು ಬಿಡಿಸಲಾರದ ಒಗಟಲ್ಲ.' ವೆಚ್ಚ ಹೆಚ್ಚಿರಬಾರದು, ನಮ್ಮ ಅಪಾರ ಗ್ರಾಮೀಣ ಜನರ ಅಗತ್ಯಗಳಿಗೆ'ಸರಿ

ಹೋಗಬೇಕು—ಇಂಥ ಶಿಕ್ಷಣ ಯೋಜನೆಯೊಂದನ್ನು ಶಿಕ್ಷಣ ಪಂಡಿತರೆಲ್ಲ ಸೇರಿ ಮಾಡಿ ಎಂದು ಗಾಂಧೀಜೀ ಏಕೆ ಒತ್ತಾಯ ಮಾಡುತ್ತಾರೋ ಇದರಿಂದ ತಿಳಿಯುತ್ತದೆ.

'ಹಾಗಾದರೆ ಪ್ರೌಢಶಾಲಾ ಶಿಕ್ಷಣವನ್ನು ಕಿತ್ತುಹಾಕಿ ಮೆಟ್ರಿಕ್ಯುಲೇಷನ್ ವರೆಗಿನ ಶಿಕ್ಷಣವನ್ನೆಲ್ಲಾ ಹಳ್ಳಿಯ ಶಾಲೆಗಳಿಗೇ ಒಪ್ಪಿಸುತ್ತೀರೋ?' ಅಚ್ಚರಿಗೊಂಡು ಕೇಳಿದ ಒಬ್ಬ.

'ಖಂಡಿತವಾಗಿ. ಏನು ನಿಮ್ಮ ಪ್ರೌಢಶಾಲಾ ಶಿಕ್ಷಣ? ಒಂದೆರಡು ವರ್ಷಗಳಲ್ಲಿ ಹುಡುಗ ತನ್ನ ತಾಯಿನುಡಿಯ ಮೂಲಕ ಕಲಿಯಬಲ್ಲದುದನ್ನು ಪರಭಾಷೆಯಲ್ಲಿ ಏಳು ವರ್ಷಕಾಲ ಕಲಿಸುವುದೇ ತಾನೆ? ಈ ಪರಭಾಷೆಯಲ್ಲಿ ಎಲ್ಲಾ ವಿಷಯಗಳನ್ನೂ ಕಲಿಯಬೇಕು ಎಂಬ ವ್ಯಾಮೋಹವನ್ನು ಬಿಟ್ಟರೋ, ಮಕ್ಕಳು ಕೈಕಾಲನ್ನು ಲಾಭಕರವಾಗಿ ಉಪಯೋಗಿಸುವಂತೆ ಕಲಿಸಿದಿರೊ, ಶಿಕ್ಷಣದ ಒಗಟು ಬಿಡುತ್ತದೆ. ಏನೂ ಬಲಾತ್ಕಾರವಿಲ್ಲದೆಯೆ ಹೆಂಡದ ಹಣವನ್ನು ನೀವು ತ್ಯಜಿಸಬಹುದು. ಮೊಟ್ಟ ಮೊದಲು ಆ ವರಮಾನವನ್ನು ತ್ಯಜಿಸಲು ನಿರ್ಧರಿಸಿ; ಆಮೇಲೆ ಶಿಕ್ಷಣದ ಮಾರ್ಗಗಳನ್ನು ಆಲೋಚಿಸಿ. ಮೊದಲು ದೊಡ್ಡ ಹೆಜ್ಜೆಯಿಟ್ಟು ಪ್ರಾರಂಭಿಸಿ.'[೩೮]

## ೩

## ಸ್ವಾವಲಂಬಿ ಶಿಕ್ಷಣ

ಡಾ. ಆಚಂಟ ಲಕ್ಷ್ಮೀಪತಿ ಹೀಗೆ ಬರೆಯುತ್ತಾರೆ:

'ನಾನು ಕೆಲವು ಮಿಷನ್ ಶಾಲೆಗಳನ್ನು ನೋಡಿದೇನೆ. ಅಲ್ಲಿ ಬೆಳಗ್ಗೆ ಮಾತ್ರವೇ ಪಾಠ. ಸಂಜೆಗೆ ಹುಡುಗರು ಬೇಸಾಯುವನ್ನೋ ಕೈಗಾರಿಕೆಯನ್ನೋ ಮಾಡುತ್ತಾರೆ ಅವರು ಮಾಡಿದ ಕೆಲಸದ ಗುಣ, ಪ್ರಮಾಣಗಳಿಗೆ ತಕ್ಕಂತೆ ಸ್ವಲ್ಪ ಕೂಲಿಯನ್ನೂ ಕೊಡುತ್ತಾರೆ. ಹೀಗೆ ಆ ಸಂಸ್ಥೆ ಸ್ವಲ್ಪಮಟ್ಟಿಗೆ ಸ್ವಾವಲಂಬಿಯಾಗುವಂತೆ ಮಾಡುತ್ತಾರೆ. ಆ ಶಾಲೆಯ ಹುಡುಗರು ಶಾಲೆ ಬಿಟ್ಟಾಗ ನೆಲದಮೇಲೆ ಬಿದ್ದ ಮೀನಿನಂತೆ ಒದೆದಾಡರು. ತಮ್ಮ ಜೀವನ ನಡೆಸುವಷ್ಟು ಮಟ್ಟಿಗೆ ಅವರಿಗೆ ಒಂದು ಕಸಬು ಗೊತ್ತಿರುತ್ತದೆ. ಆ ಶಾಲೆಗಳ ವಾತಾವರಣವೇ ಬೇರೆ, ವಿದ್ಯಾಶಾಖೆಯ ಒಂದೇ ಪಡಿಯಚ್ಚಿನ ಶಾಲೆಗಳ ನೀರಸ ಯಾಂತ್ರಿಕತೆಯೇ ಬೇರೆ—ಎಂಬುದನ್ನು ಕಂಡಿದೇನೆ. ಏನೋ ಪ್ರಯೋಜನಕರ ಕೆಲಸಮಾಡಿದೇವೆ ಎಂದು ಆ ಹುಡುಗರಿಗೆ ಹಿಗ್ಗು. ಅದಂತೆ ಮೈಕಟ್ಟು ಇವರಿಗಿಂತ ಚೆನ್ನ; ಆರೋಗ್ಯ ಹೆಚ್ಚು. ಬೇಸಾಯದ ಕಾಲದಲ್ಲಿ ಹೊಲದ

ಕೆಲಸವೇ ದಿನವೆಲ್ಲಾ ಹಿಡಿಯುತ್ತದೆ. ಆದುದರಿಂದ ಆಗ ಶಾಲೆಗೆ ಬಿಡುವು. ಪಟ್ಟಣಗಳಲ್ಲೂ ಹುಡುಗರನ್ನು ಅವರವರ ಅಭಿರುಚಿಗೆ ತಕ್ಕಂತೆ ವ್ಯಾಪಾರದಲ್ಲಿ, ಉದ್ಯೋಗಗಳಲ್ಲಿ ಸೇರಿಸಿದರೆ ಅವರಿಗೆ ವೈವಿಧ್ಯದ ಹರ್ಷ ಸಿಗುತ್ತದೆ. ಬಡಹುಡುಗರಿಗೆ ಅಥವಾ ಇಷ್ಟಪಟ್ಟವರಿಗೆಲ್ಲಾ ಶಾಲೆಯಲ್ಲೇ ಒಂದು ಹೊತ್ತು ಊಟದ ಏರ್ಪಾಟು ಮಾಡಬಹುದು. ಬೆಳಗಿನ ತರಗತಿಗಳಲ್ಲಿ ಅರ್ಧಗಂಟೆ ಇದಕ್ಕಾಗಿ ಬಿಡುವು ಮಾಡಿಕೊಳಬಹುದು. ಅದರಿಂದ ಬಡಹುಡುಗರು ಶಾಲೆಗೆ ಸಂತೋಷದಿಂದ ಓಡಿ ಬಂದಾರು. ಅವರ ತಂದೆ ತಾಯಿಗಳು ಕೂಡ ಮಕ್ಕಳು ಶಾಲೆಗೆ ತಪ್ಪದೆ ಹೋಗುವಂತೆ ಪ್ರೋತ್ಸಾಹಿಸಿಯಾರು.

'ಈ ಒಂದು ಹೊತ್ತಿನ ಶಾಲೆಗಳನ್ನು ಏರ್ಪಡಿಸಿದರೆ ಅನೇಕ ಶಿಕ್ಷಕರನ್ನು ಬೇರೇನೂ ಸಂಭಾವನೆ ಕೊಡದೆ ಹಳ್ಳಿಗಳಲ್ಲಿ ವಯಸ್ಕರ ಶಿಕ್ಷಣಕ್ಕಾಗಿ ಉಪಯೋಗಿಸಿಕೊಳ್ಳಬಹುದು. ಕಟ್ಟಡವೂ ಇತರ ಸಾಮಗ್ರಿಯೂ ಇದೇ ರೀತಿ ಉಪಯೋಗಕ್ಕೆ ಬರುತ್ತದೆ.

'ಮದರಾಸಿನ ಆರೋಗ್ಯ ಸಚಿವರನ್ನು ಕಂಡು ಒಂದು ಪತ್ರಕೊಟ್ಟೆ: ಈಗಿನ ಹುಡುಗರಿಗೆ ಆರೋಗ್ಯ ಕಡಿಮೆ; ಅದಕ್ಕೆ ಕಾರಣ, ಶಾಲೆಗಳಲ್ಲಿ ಅವರಿಗೆ ವಿದ್ಯೆ ಕಲಿಸುವ ಕಾಲ ಬಹಳ ಅನುಚಿತ. ಶಾಲೆ, ಕಾಲೇಜು ಎಲ್ಲಾ ಬೆಳಿಗ್ಗೆ ೭ ರಿಂದ ೧೧ ರೊಳಗೆ ನಡೆಯಬೇಕೆಂದು ನನ್ನ ಅಭಿಪ್ರಾಯ. ಶಾಲೆಯಲ್ಲಿ ನಾಲ್ಕುಗಂಟೆ ಅಭ್ಯಾಸ ಸಾಕು. ಮಧ್ಯಾಹ್ನ ಮನೆಯಲ್ಲಿರಲಿ. ಸಂಜೆ ವ್ಯಾಯಾಮ, ಕ್ರೀಡೆ. ಕೆಲವರು ವಿದ್ಯಾರ್ಥಿಗಳು ಏನಾದರೂ ಸಂಪಾದನೆ ಮಾಡಿಕೊಳ್ಳಲಿ; ಕೆಲವರು ತಂದೆ ತಾಯಿಗಳಿಗೆ ನೆರವಾಗಲಿ. ಮಕ್ಕಳಿಗೆ ತಂದೆ ತಾಯಿಗಳ ಸಂಪರ್ಕ ಇದರಿಂದ ಹೆಚ್ಚಾಗುತ್ತದೆ. ಉದ್ಯೋಗ ಶಿಕ್ಷಣಕ್ಕೆ, ಆನುವಂಶಿಕ ಅಭಿರುಚಿಯ ವಿಕಾಸಕ್ಕೆ, ಈ ಸಂಪರ್ಕ ಮುಖ್ಯ.

'ದೈಹಿಕ ವಿಕಾಸವೇ ರಾಷ್ಟ್ರವಿಕಾಸ ಎಂಬುದು ನಮಗೆ ತಿಳಿದರೆ ಈಗ ಸೂಚಿಸಿರುವ ಪರಿವರ್ತನೆ ಎಷ್ಟೇ ಕ್ರಾಂತಿಕಾರಿಯಾಗಿ ಕಂಡರೂ, ಭಾರತೀಯ ಸಂಪ್ರದಾಯ–ಋತುಮಾನಗಳಿಗೆ ಅನುಗುಣವಾಗಿದೆ. ಅನೇಕರು ಸ್ವಾಗತಿಸಿಯಾರು.'

ಡಾ. ಲಕ್ಷ್ಮೀಪತಿಯವರ ಬೆಳಗಿನ ಶಾಲೆಯ ಸೂಚನೆಯ ಬಗ್ಗೆ ನಾನೇನೂ ಹೇಳುವುದಿಲ್ಲ. ಶಿಕ್ಷಣದ ಅಧಿಕಾರಿಗಳಿಗೆ ಅದನ್ನು ಬಿಡುತ್ತೇನೆ. ಸ್ವಾವಲಂಬಿ ಸಂಸ್ಥೆಗಳು ತಮ್ಮ ವಿದ್ಯಾರ್ಥಿಗಳನ್ನು ಅಭಿವೃದ್ಧಿಗೆ ತಂದು ಶಿಕ್ಷಣದ ವೆಚ್ಚವನ್ನು ಹೊರಬೇಕೆಂದರೆ ಹೀಗೆ ಮಾಡಲೇಬೇಕು; ಬೇರೆ ದಾರಿಯಿಲ್ಲ. ಆದರೂ ನನ್ನ ಸೂಚನೆ ಕೆಲವರು ಶಿಕ್ಷಣ ಪಂಡಿತರನ್ನು ಗಾಬರಿಗೊಳಿಸಿದೆ. ಅವರಿಗೆ ಬೇರೆ ಪದ್ಧತಿಯೇ ಗೊತ್ತಿಲ್ಲ. ವಿದ್ಯಾಭ್ಯಾಸ ಸ್ವಾವಲಂಬಿಯಾಗಬೇಕೆ! ಹಾಗಾದರೆ ವಿದ್ಯಾಭ್ಯಾಸದ ಬೆಲೆಯೇ ಇಳಿದುಹೋಯಿತು ಅನಿಸುತ್ತದೆ ಅವರಿಗೆ. ಇದೆಲ್ಲಾ

ದುಡ್ಡಿಗೆ ಪರದಾಟ ಅನಿಸುತ್ತದೆ. ಯಹೂದ್ಯರು ಮಾಡಿದ ಶಿಕ್ಷಣ ಪ್ರಯೋಗ-ಪ್ರಯತ್ನಗಳದೇ ಒಂದು ಗ್ರಂಥವನ್ನು ಈಗ ಓದುತ್ತಿದೇನೆ. ಆ ಶಾಲೆಗಳಲ್ಲಿ ಕಲಿಸುವ ಉದ್ಯೋಗ ಶಿಕ್ಷಣದ ಬಗ್ಗೆ :

'ಕೈಗೆಲಸ ಯೋಗ್ಯವಾದುದೆಂದು ಅವರಿಗೆ ತಿಳಿದಿದೆ. ಬೌದ್ಧಿಕ ಪರಿಶ್ರಮವೂ ಜೊತೆಗೂಡಿ ಅದರ ಭಾರ ಕಡಿಮೆಯಾಗುತ್ತದೆ. ಇದು ದೇಶಕ್ಕಾಗಿ ಎಂಬ ಭಾವನೆ ಅದನ್ನು ಪವಿತ್ರಗೊಳಿಸುತ್ತದೆ.'

ಸರಿಯಾದ ಅಧ್ಯಾಪಕರಿದ್ದರೆ ನಮ್ಮ ಮಕ್ಕಳಿಗೆ ದೇಹಶ್ರಮ ಘನವಾದುದೆಂದೂ, ತಮ್ಮ ಬುದ್ಧಿವಿಕಾಸಕ್ಕೆ ಅದು ಅಗತ್ಯವಾದ ಸಾಧನವೆಂದೂ, ತಮ್ಮ ಶಿಕ್ಷಣಕ್ಕಾಗಿ ತಾವು ದುಡಿಯುವುದು ದೇಶಸೇವೆಯೆಂದೂ ತಿಳಿದೀತು. ನನ್ನ ಸೂಚನೆಯ ತಿರುಳು ಮಕ್ಕಳಿಗೆ ಉತ್ಪಾದನ ಕಾರ್ಯಕ್ಕಾಗಿ ಕೈಗಾರಿಕೆ ಕಲಿಸಬೇಕೆಂದಲ್ಲ; ವಿದ್ಯಾರ್ಥಿಗಳ ಬೌದ್ಧಿಕ ವಿಕಾಸಕ್ಕಾಗಿ ಕಲಿಸಿ ಎಂದು. ಏಳರಿಂದ ಹದಿನಾಲ್ಕರೊಳಗಿನ ಮಕ್ಕಳನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡು ಉತ್ಪಾದಕ ಶ್ರಮದ ಮೂಲಕ ಅವರ ದೇಹ ಮನಸ್ಸುಗಳನ್ನು ತರಬೇತು ಮಾಡಿದರೆ, ಅಂಥ ಶಾಲೆಗಳು ಸ್ವಾವಲಂಬಿಗಳಾಗಲಿಲ್ಲವೆಂದರೆ, ಆ ಶಾಲೆಗಳೆಲ್ಲ ಬರೀ ಮೋಸ, ಆ ಶಿಕ್ಷಕರೆಲ್ಲ ಮಂದಮತಿಗಳು ಆಗಿರಬೇಕು.

ಯಂತ್ರದಂತಲ್ಲದೆ ಬುದ್ಧಿವಂತನಂತೆ ಪ್ರತಿಯೊಬ್ಬ ವಿದ್ಯಾರ್ಥಿಯೂ ಸಾಮೂಹಿಕ ಶ್ರಮದಲ್ಲಿ ಭಾಗವಹಿಸಿದರೆ, ತಜ್ಞರ ಮೇಲ್ವಿಚಾರಣೆಯಿದ್ದರೆ, ಮೊದಲನೆ ವರ್ಷ ಮುಗಿದ ಮೇಲೆ ಈ ಸಾಮೂಹಿಕ ಶ್ರಮಕ್ಕೆ ಗಂಟೆಗೆ ಒಂದು ಆಣೆ ಬೆಲೆಯಾಗುತ್ತದೆ. ದಿನಕ್ಕೆ ನಾಲ್ಕು ಗಂಟೆ, ತಿಂಗಳಿಗೆ ಇಪ್ಪತ್ತಾರು ದಿನ ಆದರೆ, ಪ್ರತಿ ಮಗುವೂ ತಿಂಗಳಿಗೆ ೬-೮-೦ ರೂ. ಗಳಿಸುತ್ತದೆ. ನಮ್ಮ ಕೋಟಿಗಟ್ಟಲೆ ಮಕ್ಕಳಿಂದ ಇಷ್ಟು ಲಾಭಕರವಾಗಿ ಕೆಲಸ ಮಾಡಿಸಬಲ್ಲೆವೆ? ಒಂದು ವರ್ಷ ತರಬೇತು ಮಾಡಿದ ಮೇಲೂ, ಗಂಟೆಗೆ ಒಂದಾಣೆ ಬೆಲೆಯಷ್ಟು ದುಡಿತವನ್ನು ನಮ್ಮ ಹುಡುಗರಿಂದ ಮಾಡಿಸಲಾರೆವಾದರೆ ನಮ್ಮ ಬುದ್ಧಿ ದಿವಾಳಿಯಾಗಿದೆ ಎನ್ನಬೇಕು. ಹಳ್ಳಿಗಳಲ್ಲಿ ಗಂಟೆಗೆ ಒಂದಾಣೆಯನ್ನು ಯಾರೂ ಗಳಿಸರು; ನಾ ಬಲ್ಲೆ. ಅದಕ್ಕೆ ಕಾರಣ-ಇದ್ದವರಿಗೂ ಇಲ್ಲದವರಿಗೂ ಇರುವ ಅಗಾಧ ಅಂತರವನ್ನು ನಾವು ಸಹಿಸುತ್ತಿದೇವೆ; ತಿಳಿದೋ ತಿಳಿಯದೆಯೋ ನಮ್ಮ ಪಟ್ಟಣಿಗರೂ ಬ್ರಿಟಿಷರ ಜೊತೆಗೆ ಸೇರಿದಾರೆ ಹಳ್ಳಿಗಳ ಶೋಷಣ ಮಾಡುವುದರಲ್ಲಿ.೪೯

## ೪

## ಸ್ವಾವಲಂಬಿ ಶಿಕ್ಷಣ–ಇನ್ನೂ ಕೆಲವು ಸಂವಾದ

ಗಾಂಧೀಜೀಗೆ ಮೈ ಚೆನ್ನಾಗಿಲ್ಲ ವಿಶ್ರಾಂತಿ ಬಹಳ ಬೇಕು. ಆದರೂ ಸ್ವಾವಲಂಬಿ ಶಿಕ್ಷಣದ ತಮ್ಮ ಸಿದ್ಧಾಂತದ ಬಗ್ಗೆ ವಿಚಾರಮಾಡಿ, ಈ ಹೊಸ ಪ್ರಯೋಗವನ್ನು ಸಫಲಗೊಳಿಸಲು ತಾವೂ ಯತ್ನಮಾಡುವಂಥವರು ಬಂದರೆ ಅವರೊಡನೆ ಇದನ್ನು ಮಥನಮಾಡಲು ಗಾಂಧೀಜೀ ಸಿದ್ಧ. ಅವರ ಅನಾರೋಗ್ಯದ ದೆಸೆಯಿಂದ ಈ ಬಗೆಯ ಚರ್ಚೆಗಳು ಒಂದೆರಡು ಸಲ ಸ್ವಲ್ಪ ಹೊತ್ತು ನಡೆದವು. ಆದರೆ ಒಂದೊಂದು ಸಲವೂ ಒಂದೊಂದು ಹೊಸ ಸೂಚನೆ ಕೊಡುತ್ತಿದ್ದರು. ಹೊಸ ಬೆಳಕು ಚೆಲ್ಲಿದರು. ಒಂದುಸಲ, ಆದಷ್ಟು ಬೇಗ ಸಂಪೂರ್ಣ ಪಾನ ನಿರೋಧವನ್ನು ಸಾಧಿಸಲು ಈ ಸ್ವಾವಲಂಬಿ ಶಿಕ್ಷಣದ ಸಲಹೆ ಬಂತು ಎಂದು ತಿಳಿಯಬೇಡಿ ಎಂಬ ಎಚ್ಚರಿಕೆ ಕೊಟ್ಟರು. "ಎರಡೂ ಅಗತ್ಯ; ಎರಡೂ ಸ್ವತಂತ್ರ ವಿಚಾರ. ತೆರಿಗೆ ಹೋಗಲಿ ಬರಲಿ, ಶಿಕ್ಷಣ ಆಗಲಿ ಆಗದಿರಲಿ, ಪಾನ ನಿರೋಧವಂತೂ ಆಗಲೇಬೇಕು ಎಂಬ ದೃಢವಿರಲಿ. ಹಾಗೆಯೇ, ಇಂದಿನ ಹಿಂದುಸ್ತಾನದ ಹಳ್ಳಿಗಳ ಅಗತ್ಯವನ್ನು ನೋಡಿದರೆ ನಮ್ಮ ಹಳ್ಳಿಗಳ ವಿದ್ಯಾಭ್ಯಾಸ ಸ್ವಾವಲಂಬಿಯಾಗಿರಬೇಕು; ಇಲ್ಲದಿದ್ದರೆ ಬಲಾತ್ಕರ ಶಿಕ್ಷಣ ಸಾಧ್ಯವಿಲ್ಲ ಎಂದು ಅರಿಯಬೇಕು."

ಒಬ್ಬ ಶಿಕ್ಷಣಪಂಡಿತ ಮಾತನ್ನು ಮುಂಬರಿಸಿದ: 'ಮೊದಲನೆ ಮಾತಿನಲ್ಲಿ ನನಗೆ ದೃಢ ಶ್ರದ್ಧೆ. ಸಂಪೂರ್ಣ ನಿರೋಧ ನಮಗೆ ಒಂದು ಸ್ವತಂತ್ರ ಗುರಿ. ಅದೇ ಒಂದು ಶಿಕ್ಷಣ. ಆದುದರಿಂದ ಅದನ್ನು ಸಫಲಗೊಳಿಸಲು ಶಿಕ್ಷಣವನ್ನು ಬೇಕಾದರೂ ಬಲಿ ಕೊಟ್ಟೇನು. ಆದರೆ ಎರಡನೆ ಮಾತಿನಲ್ಲಿ ನನಗೆ ವಿಶ್ವಾಸ ವಿಲ್ಲ. ಶಿಕ್ಷಣವನ್ನು ಸ್ವಾವಲಂಬಿಯಾಗಿ ಮಾಡಬಹುದೆಂದೇ ನಾನು ನಂಬಲಾರೆ.'

'ಅದೂ ಅಷ್ಟೇ. ವಿಶ್ವಾಸದಿಂದ, ದೃಢನಿರ್ಧಾರದಿಂದ ಪ್ರಾರಂಭ ಮಾಡಿ. ಮಾಡಲು ಮೊದಲಿಟ್ಟರೆ ಮಾರ್ಗ ತಾನೇ ಗೋಚರಿಸುತ್ತದೆ. ಕಾಲವೆಲ್ಲ ಕಳೆದ ಮೇಲೆ ನಾನು ಎಚ್ಚರಗೊಂಡೆನಲ್ಲ, ಇದು ಅಗತ್ಯ ಎಂದು; ಅದಕ್ಕೆ ನನಗೆ ದುಃಖವಾಗುತ್ತದೆ. ಇಲ್ಲದಿದ್ದರೆ ನಾನೇ ಈ ಪ್ರಯೋಗ ನಡಸುತ್ತಿದ್ದೆ. ಈಗಲೂ ದೈವಾನುಗ್ರಹವಿದ್ದರೆ ಶಿಕ್ಷಣ ಸ್ವಾವಲಂಬಿಯಾಗಬಲ್ಲದು ಎಂದು ತೋರಿಸಲು ನನ್ನ ಕೈಲಾದುದನ್ನು ಮಾಡುತ್ತೇನೆ. ನನ್ನ ಕಾಲವೆಲ್ಲ ಉಳಿದ

ಅನೇಕ ಕೆಲಸಗಳಲ್ಲಿ ಕಳೆದುಹೋಗಿದೆ ಇಷ್ಟು ವರ್ಷ ; ಅವೂ ಇಷ್ಟೇ ಮುಖ್ಯ ವಾದುವೇ. ಸೇವಾಗ್ರಾಮದಲ್ಲಿ ನೆಲೆಸಿದ ಮೇಲೆ ನನಗೆ ಈ ವಿಶ್ವಾಸ ಹುಟ್ಟಿತು. ಇಲ್ಲಿಯವರೆಗೆ ಮಕ್ಕಳ ಮನಸ್ಸಿನಲ್ಲಿ ನಾನಾ ವಿಧದ ಮಾಹಿತಿಯ ಹಾಳುಮೂಳ ನ್ನೆಲ್ಲಾ ತುರುಕುವುದೊಂದನ್ನೇ ಮಾಡಿದೇವೆ. ಮಕ್ಕಳ ಮನಸ್ಸನ್ನು ಪ್ರಚೋದಿಸಿ ವಿಕಾಸಗೊಳಿಸುವ ಯೋಚನೆಯನ್ನೇ ಮಾಡಿಲ್ಲ. ಇದು ಸಾಕು. ಶರೀರ ಶ್ರಮದ ಮೂಲಕ, ಅದನ್ನು ಗೌಣವಾಗಿಸದೆ ಬೌದ್ಧಿಕ ಶಿಕ್ಷಣಕ್ಕೆ ಮುಖ್ಯ ಸಾಧನವಾಗಿಸಿ ಸರಿಯಾಗಿ ಶಿಕ್ಷಣ ಕೊಡುವ ಕೆಲಸಕ್ಕೆ ತೊಡಗೋಣ.'

"ಅದು ಸರಿ. ಆದರೆ ಅದು ಶಾಲೆಗೆ ವೆಚ್ಚವನ್ನೇಕೆ ಒದಗಿಸಿಕೊಡ ಬೇಕು ?"

"ಅದರ ಯೋಗ್ಯತೆಗೆ ಅದೇ ಒರೆಗಲ್ಲು. ಏಳು ವರ್ಷ ಶಿಕ್ಷಣ ಪಡೆದು ೧೪ ವರ್ಷ ವಯಸ್ಸಿನವನಾಗಿ ಹುಡುಗ ಹೊರಗೆ ಬಂದರೆ ಗಳಿಸಾಳು ಆಗಿರ ಬೇಕು, ಈಗಲೂ ಬಡಹುಡುಗರು ಸಹಜವಾಗಿಯೆ ತಮ್ಮ ತಂದೆತಾಯಿಗಳಿಗೆ ನೆರವಾಗುತ್ತಾರೆ. ನಾನೂ ನನ್ನ ತಂದೆತಾಯಿಗಳ ಜೊತೆಗೆ ಕೆಲಸ ಮಾಡದಿದ್ದರೆ ಅವರು ತಾವೇನು ತಿಂದಾರು, ನನಗೇನು ಕೊಟ್ಟಾರು ಎಂಬ ಯೋಚನೆ ಆ ಹುಡುಗರ ಮನಸ್ಸಿನಲ್ಲಿರುತ್ತದೆ. ಅದೇ ಒಂದು ಶಿಕ್ಷಣ. ಆದುದರಿಂದಲೇ ಮಗುವನ್ನು ಏಳು ವರ್ಷದ ವಯಸ್ಸಿನಲ್ಲಿ ಕೈಗೆ ತೆಗೆದುಕೊಂಡರೆ ಹಿಂದಿರುಗಿ ಕುಟುಂಬಕ್ಕೆ ಅದನ್ನು ಒಪ್ಪಿಸುವಾಗ ಸಂಪಾದನೆ ಮಾಡಬಲ್ಲ ಶಕ್ತಿಯನ್ನು ಕೊಟ್ಟು ಒಪ್ಪಿಸಬೇಕು. ಇತ್ತ ಶಿಕ್ಷಣ ಕೊಡಿ, ಅತ್ತ ನಿರುದ್ಯೋಗವನ್ನು ಅಳಿಯಿಸಿ. ಯಾವುದಾದರೂ ಒಂದು ಉದ್ಯೋಗ ಕಲಿಸಿ ಮಕ್ಕಳಿಗೆ. ಆ ಉದ್ಯೋಗದ ಸುತ್ತಲೂ ಮಗುವಿನ ಮನಸ್ಸು, ದೇಹ, ಲೇಖನ ಶಕ್ತಿ, ಕಲಾಭಿಜ್ಞತೆ ಇತ್ಯಾದಿಗಳನ್ನೆಲ್ಲ ಬೆಳೆಯಿಸಿ. ಅವನು ತಾನು ಕಲಿತ ಉದ್ಯೋಗ ದಲ್ಲಿ ಅತ್ಯಂತ ಕುಶಲನಾದಾನು."

"ಒಬ್ಬ ಹುಡುಗ ಖಾದಿಯ ಶಾಸ್ತ್ರ-ಕಲೆಗಳ ಅಭ್ಯಾಸವನ್ನು ಆರಿಸಿಕೊಂಡ ಎನ್ನಿ. ಆ ಉದ್ಯೋಗದಲ್ಲಿ ಪರಿಣತನಾಗಲು ಅವನಿಗೆ ಏಳು ವರ್ಷಗಳೂ ಬೇಕೆ ?"

"ಖಂಡಿತವಾಗಿ. ಬರೀ ಯಾಂತ್ರಿಕವಾಗಿ ಅದನ್ನು ಕಲಿಯಬಾರದು ಎಂದರೆ ಅಗತ್ಯವಾಗಿ ಅಷ್ಟು ಕಾಲ ಬೇಕು. ಇತಿಹಾಸ ಕಲಿಯಲು ಅಷ್ಟು ಕಾಲವನ್ನೇಕೆ ತೆಗೆದುಕೊಳ್ಳುತ್ತೇವೆ ? ಭಾಷೆಯನ್ನು ಕಲಿಯಲು ಅಷ್ಟು ಕಾಲ

ವೇಕೆ ? ಇಲ್ಲಿಯವರೆಗೆ ಈ ವಿಷಯುಗಳಿಗೆ ಸಲ್ಲದ ಬೆಲೆ ಕೊಟ್ಟಿದೇವೆ. ಇದಕ್ಕಿಂತ ಉದ್ಯೋಗ ಅಪ್ರಧಾನವೆ ?"

"ನೀವು ಬರೀ ನೂಲುವುದನ್ನು ನೇಯುವುದನ್ನು ಲೆಕ್ಕಹಾಕುತ್ತಿದೀರಿ. ಎಂದರೆ ಶಾಲೆಗಳನ್ನೆಲ್ಲ ನೇಯಿಗೆ ಶಾಲೆಗಳನ್ನಾಗಿ ಮಾಡುತ್ತೀರಿ. ಒಂದು ಮಗುವಿಗೆ ನೇಯಿಗೆಯಲ್ಲಿ ಅಭಿರುಚಿಯಿಲ್ಲದಿರಬಹುದು. ಬೇರೆ ಯಾವುದರಲ್ಲಾದರೂ ಇರಬಹುದು."

"ಹೌದು, ಇರಬಹುದು. ಅವನಿಗೆ ಬೇರೆ ಕೈಗಾರಿಕೆಯನ್ನು ಕಲಿಸುತ್ತೇವೆ. ಆದರೆ ಒಂದು ಶಾಲೆಯಲ್ಲಿ ಹಲವಾರು ಕೈಗಾರಿಕೆಗಳನ್ನು ಕಲಿಸಲು ಆಗುವುದಿಲ್ಲ. ಈ ವಿಚಾರ ಹೀಗೆ : ಇಪ್ಪತ್ತೈದು ಹುಡುಗರಿಗೆ ಒಬ್ಬ ಅಧ್ಯಾಪಕ. ಎಷ್ಟು ಜನ ಅಧ್ಯಾಪಕರು ಸಿಗುತ್ತಾರೋ ಅಷ್ಟು ಇಪ್ಪತ್ತೈದು ಹುಡುಗರ ತರಗತಿಗಳನ್ನು ಮಾಡಿ ; ಅಷ್ಟು ಶಾಲೆಗಳನ್ನೇ ಮಾಡಿ. ಒಂದೊಂದು ಶಾಲೆಯು ಬೇರೆ ಬೇರೆ ಕೈಗಾರಿಕೆಗೆ ಮೀಸಲಾಗಲಿ. ಒಂದರಲ್ಲಿ ಮರಗೆಲಸ, ಇನ್ನೊಂದರಲ್ಲಿ ಕಬ್ಬಿಣಗೆಲಸ, ಚರ್ಮದ ಕೆಲಸ, ಮೆಟ್ಟುತಯಾರಿ. ಒಂದು ಸೂತ್ರ ನೆನಪಿರಬೇಕು : ಈ ಪ್ರತಿಯೊಂದು ಕೈಗಾರಿಕೆಯ ಮೂಲಕವೂ ಮಗುವಿನ ಮನೋವಿಕಾಸವಾಗಬೇಕು. ಇನ್ನೂ ಒಂದು ಮಾತು ಹೇಳುತ್ತೇನೆ. ಪಟ್ಟಣಗಳನ್ನು ಮರೆತುಹೋಗಿ. ಹಳ್ಳಿಗಳನ್ನೆ ಲಕ್ಷ್ಯದಲ್ಲಿಡಿ. ಅದೊಂದು ಮಹಾಸಾಗರ. ಆ ಸಾಗರದಲ್ಲಿ ಈ ಪಟ್ಟಣಗಳು ಒಂದು ಹನಿ. ಆದುದರಿಂದ ಇಟ್ಟಿಗೆ ಮಾಡುವುದು ಮುಂತಾದ ಉದ್ಯೋಗಗಳ ವಿಚಾರ ಸಾಧ್ಯವಿಲ್ಲ. ಹುಡುಗರು ಇಂಜನಿಯರುಗಳಾಗಬೇಕು—ಶಿಲ್ಪದ್ದೋ ಯಂತ್ರಗಳದ್ದೋ—ಎಂದರೆ ಈ ಏಳು ವರ್ಷದ ಶಿಕ್ಷಣ ಮುಗಿಸಿಕೊಂಡು ಪ್ರತ್ಯೇಕವಾಗಿ ಅದನ್ನೇ ಕಲಿಸುವ ಕಾಲೇಜಿಗೆ ಹೋಗಲಿ.

"ಇನ್ನೊಂದು ವಿಷಯವನ್ನು ಒತ್ತಿ ಹೇಳುತ್ತೇನೆ. ವಿದಾಭ್ಯಾಸವನ್ನೂ ಕೈಗೆಲಸದ ಶಿಕ್ಷಣವನ್ನೂ ಬೇರೆ ಬೇರೆ ಮಾಡಿದೇವೆ. ಆದುದರಿಂದ ಗ್ರಾಮೋದ್ಯೋಗಗಳೆಂದರೆ ಲಾಘವವಾಗಿ ಕಾಣುವ ಸಂಭವವಿದೆ. ಕೈಗೆಲಸವನ್ನು ಕೀಳಾಗಿ ಭಾವಿಸುತ್ತಿದ್ದೇವೆ. ವರ್ಣಧರ್ಮದ ಅಪಾರ್ಥ, ವಕ್ರವ್ಯಾಖ್ಯೆಗಳಿಂದ ನೇಕಾರರನ್ನು, ಬಡಗಿಗಳನ್ನು ಮತ್ತು ಚಮ್ಮಾರರನ್ನು ಹೀನಜಾತಿಯವರೆಂದು ಕಾಣುತ್ತಿದೇವೆ. ಕೈಗಾರಿಕೆಯನ್ನು ಹೀನವೆಂದು ಅಕುಶಲವೆಂದು ಕಂಡುದರ ಫಲವಾಗಿ ನಮ್ಮಲ್ಲಿ ಯಾರೂ ಕ್ರಾಂಪ್ಟನ್, ಹಾರ್ಗ್ರೀವ್ಸ್ ಹುಟ್ಟಲಿಲ್ಲ. ಪುಸ್ತಕ ಪಾಂಡಿತ್ಯದ ಹಾಗೇ ಇವನ್ನೂ ಸ್ವತಂತ್ರ, ಗೌರವಪೂರ್ಣ ವೃತ್ತಿಗಳೆಂದು

ಭಾವಿಸಿದ್ದಿದ್ದರೆ ನಮ್ಮ ಕೈಗೆಲಸದವರಲ್ಲೂ ಮಹಾ ಮೇಧಾವಿಗಳೂ ಶೋಧಕರೂ ಹುಟ್ಟುತ್ತಿದ್ದರು. 'ಸ್ಪಿನ್ನಿಂಗ್ ಜೆನ್ನಿ'ಯ ಶೋಧನೆಯಿಂದ ಜಲಶಕ್ತಿಯ ದರ್ಶನವಾಯಿತು. ನನ್ನ ಅಭಿಪ್ರಾಯದಲ್ಲಿ ಅದು ರಾಕ್ಷಸತನ. ನಾವು ಹಳ್ಳಿಗಳನ್ನೇ ಲಕ್ಷ್ಯದಲ್ಲಿಟ್ಟುಕೊಂಡರೆ, ಕೈಗಾರಿಕೆಯನ್ನು ಏಕಾಗ್ರವಾಗಿ ಕಲಿತರೆ, ಹೊರಹೊಮ್ಮುವ ಪರಿಶೋಧನಾ ಕೌಶಲ ಗ್ರಾಮಜೀವನದ ಅವಶ್ಯಕತೆಗಳಿಗೆ ಹೊಂದಿಕೊಂಡೇ ಬೆಳೆದೀತು."೪೦

## ೫

## ಸ್ವಾವಲಂಬಿ ಶಾಲೆಗಳು

'ನಮ್ಮ ಆರ್ಥಿಕ ಸ್ಥಿತಿಯ ಮುಖ್ಯ ಲಕ್ಷಣ-ಅನುಕೂಲ ಕಡಿಮೆ, ಜನಸಂಖ್ಯೆ ಹೆಚ್ಚು. ಹಿಂದುಸ್ತಾನದಲ್ಲಿ ನಾವು ಕಾಣದ, ಇನ್ನೂ ರೂಢಿಸಬೇಕಾದ ಪ್ರದೇಶಗಳಿಲ್ಲ; ಹೇರಳವಾದ ಬಂಡವಾಳ, ಹಲವಾರು ವಸಾಹತುಗಳೂ ಇಲ್ಲ. ಆದುದರಿಂದ ನಮ್ಮ ಪ್ರಕೃತಿ ಸಂಪತ್ತನ್ನು ಉಪಯೋಗಿಸುವವರು ಚೆನ್ನಾಗಿ ತರಬೇತಾಗಿರಬೇಕು. ಉಳಿದವರು ಉಪಯೋಗಿಸಕೂಡದು. ದಿಕ್ಕು ದಿಕ್ಕಿಗೆ ಚೆಲ್ಲಾಪಿಲ್ಲಿಯಾದ ನೂರು ತಾಕುಗಳಲ್ಲಿ ನೂರು ಜನ ಬೇಸಾಯ ಮಾಡಿ ಐವತ್ತು ಜನಕ್ಕೆ ಅನ್ನ ಬೆಳೆಸುತ್ತಾರೆ. ಈ ತಾಕುಗಳನ್ನೆಲ್ಲ ಒಟ್ಟುಗೂಡಿಸಿ ಒಬ್ಬ ಗೊಬ್ಬರದ ಪಂಡಿತ, ಒಬ್ಬ ಸಸ್ಯಶಾಸ್ತ್ರಜ್ಞ, ಒಬ್ಬ ನೀರಾವರಿ ಇಂಜನೀಯರ್, ಇವರ ಮೇಲ್ವಿಚಾರಣೆಯಲ್ಲಿ ಇಪ್ಪತ್ತು ಜನ ದುಡಿದರೆ ಸಾಕು–ಅದೇ ನೆಲದಲ್ಲಿ ನೂರು ಜನಕ್ಕೆ ಅನ್ನ ಬೆಳೆಸಬಲ್ಲರು. ಕೆಲಸಗಾರನ ಕೌಟುಂಬಿಕ ಜೀವನಕ್ಕೆ ಧಕ್ಕೆ ತಾರದೆ, ಅವನ ಸ್ವೇಚ್ಛೆಗೆ ಅಡ್ಡಬಾರದೆ, ಅವನ ಉತ್ಪಾದನ ಶಕ್ತಿಯನ್ನು ಹೆಚ್ಚಿಸುವ ಶೋಧನೆಗಳು ಎಷ್ಟೋ ಬಂದಿವೆ. ಇದರಿಂದ ಕೆಲಸಗಾರರು ಬಹಳ ಜನ ಆಗದಂತೆ ತಡೆಯುವ ಅಗತ್ಯ ಹುಟ್ಟಿತು. ಐವತ್ತು ವರ್ಷಕ್ಕೆ ಬಲಾತ್ಕಾರವಾಗಿ ವಿಶ್ರಾಂತಿ ಕೊಡುವುದು ಇದಕ್ಕೆ ಪರಿಹಾರವಲ್ಲ. ಸಾಧಾರಣ ಮನುಷ್ಯನ ಮನೋಬಲ, ದೇಹಬಲಗಳು ಐವತ್ತರ ತರುವಾಯವೇ ತೀಕ್ಷ್ಣವಾಗುತ್ತವೆ. ಇದಕ್ಕೆ ಸರಿಯಾದ ಉಪಾಯ, ಸರಿಯಾಗಿ ತರಬೇತಾಗುವ ಮೊದಲೇ ಜನರು ಜೀವನವನ್ನು ಪ್ರಾರಂಭಿಸದಂತೆ ತಡೆಯುವುದು.

'ವಿಶಾಲ ದೃಷ್ಟಿಯಿಂದ ನೋಡಿದರೆ ನಮ್ಮ ಕೆಲಸಗಾರರು ತೀರಾ ಎಳೆಯ ವಯಸ್ಸಿನಲ್ಲಿಯೆ ಜೀವನವನ್ನು ಪ್ರಾರಂಭಿಸುತ್ತಿರುವುದೇ ಹಿಂದುಸ್ತಾನದ ಅವನತಿಯ ಕಾರಣವೆಂಬುದು ಕಂಡು ಬರುತ್ತದೆ. ಚಿಕ್ಕಂದಿನಲ್ಲೇ ಬಡಗಿ ತನ್ನ ಮಗನಿಗೆ ಕಸುಬನ್ನು ಕಲಿಸುತ್ತಾನೆ. ಹನ್ನೆರಡು ವರ್ಷಕ್ಕೆಲ್ಲಾ ಅವನು ಪೂರಾ ಗಳಿಸಾಳಾಗಿ, ಮದುವೆ ಮಾಡಿಕೊಂಡು ಸ್ವತಂತ್ರ ವೃತ್ತಿಯನ್ನು ಪ್ರಾರಂಭಿಸುತ್ತಾನೆ. ಆಮೇಲೆ

ಉತ್ಪಾದನೆ ವಿಭಜನೆಯ ಕ್ರಮದಲ್ಲಿ ಏನೇ ಹೊಸ ವಿಧಾನ ಬರಲಿ, ಅವನಿಗೆ ಅದು ಹಿಡಿಸುವುದಿಲ್ಲ. ಅಪ್ರಬುದ್ಧ ಮನಸ್ಸನ್ನು ಕೈಗಾರಿಕೆಯಲ್ಲಿ ತೊಡಗಿಸಿದರೆ ಅದರ ಬೆಳವಣಿಗೆ ನಿಂತು ಜಡವಾಗುತ್ತದೆ. ಮಾಡುವ ಕೆಲಸದ ಆರ್ಥಿಕ ಮಹತ್ವವೂ ಅರ್ಥ ವಾಗುವುದಿಲ್ಲ. ಅಂಥ ಕೆಲಸಗಾರನನ್ನು ಯಾರು ಬೇಕಾದರೂ ಶೋಷಣ ಮಾಡ ಬಹುದು. ಅವನ ಲೋಕ ತೀರಾ ಚಿಕ್ಕದು. ಹೊಟ್ಟೆತುಂಬಿಸಿಕೊಂಡು ಬದುಕನ್ನು ಸಾಗಿಸುವಷ್ಟಾದರೆ ಅವನಿಗೆ ಯಥೇಷ್ಟ. ಅಷ್ಟರಲ್ಲಿ ಸಂತಾನೋತ್ಪತ್ತಿ ಬೇರೆ, ಹಿಂದುಸ್ತಾನದ ಸಂಕುಚಿತಭಾವ ಸಂತೃಪ್ತಿ, ಅದೃಷ್ಟವಾದ ಪ್ರಾದೇಶಿಕತೆ, ಜಾತಿ ಪದ್ಧತಿ, ಕುಡಿತ, ಭಂಗೀ, ಅಫೀಮು, ಎಲ್ಲಕ್ಕೂ ಇದೇ ಮೂಲಕಾರಣ. ಸಿಂಹಳದ ರಬ್ಬರ್ ತೋಟಗಳಲ್ಲಿ ನನ್ನನ್ನು ಬಹಳ ಸಂಕಟಗೊಳಿಸಿದುದು ಚಿಕ್ಕ ಮಕ್ಕಳು ಕೂಲಿ ಮಾಡುತ್ತಿದ್ದ ದೃಶ್ಯ. ಶಾಲೆಗಳೇನೋ ಇವೆ. ಆದರೆ ತಾಯಿ ತಂದೆಗಳು ಮಕ್ಕಳನ್ನು ದುಡಿಸುತ್ತಾರೆ. ದೊಡ್ಡವರು ಸಾಧಾರಣವಾಗಿ ತಮ್ಮ ಕೆಲಸವನ್ನು ಮಕ್ಕಳ ಹೆಗಲ ಮೇಲೆ ತಳ್ಳುತ್ತಾರೆ. ವ್ಯಕ್ತಿಗೆ ಲಾಭ, ಸಮಾಜಕ್ಕೆ ನಷ್ಟ ಆದ ಕೆಲಸಗಳನ್ನು ತಡೆ ಯುವುದು ರಾಜ್ಯದ ಕೆಲಸ. ಸಿಂಹಳದಲ್ಲಿ ಪ್ರಕೃತಿ ಸಂಪತ್ತು ಹೆಚ್ಚು, ಅನುಭವಿಸು ವವರು ಕಡಮೆ. ಅಂಥಲ್ಲಿ ಮಕ್ಕಳನ್ನು ದುಡಿಸಬೇಕೆ? ಹಿಂದುಸ್ತಾನದಲ್ಲಿ ಅದಕ್ಕಿಂತ ಹೆಚ್ಚು ಅಸಮರ್ಥನೀಯ ಮಕ್ಕಳ ದುಡಿತ. ಇಲ್ಲಿ ಮಕ್ಕಳು ಕೆಲಸಕ್ಕೆ ಬಂದರೆ ದೊಡ್ಡವರಿಗೆ ಕೆಲಸ ಸಿಗದೆ ಹೋಗುತ್ತದೆ.

'ಪದಾರ್ಥಗಳನ್ನು ಉತ್ಪತ್ತಿ ಮಾಡಿ ಮಾರುವ ಸ್ವಾವಲಂಬಿ ಉದ್ಯೋಗ ಮಂದಿರ-ಶಾಲೆಗಳು ಶಿಕ್ಷಣ ನೀಡಬಲ್ಲವೆಂಬ ಭ್ರಾಂತಿ ಬೇಡ. ಮಕ್ಕಳ ದುಡಿತವನ್ನು ಶಾಸನ ಸಮ್ಮತವಾಗಿ ಮಾಡಿದುದಷ್ಟೇ ವ್ಯವಹಾರದಲ್ಲಿ ಅದರ ಫಲ. ಒಂದು ಶಾಲೆ ನೂಲುವುದನ್ನು ಆರಿಸಿಕೊಳ್ಳುತ್ತದೆ. ಆಗ ಚಕ್ರ ತಿರುಗಿಸುವುದೊಂದು ಯಾಂತ್ರಿಕ ಕಾರ್ಯವಾಗಿಬಿಡುತ್ತದೆ. ಒಂದು ಗಜ ಬಟ್ಟೆಗೆ ಎಷ್ಟು ನೂಲು ಬೇಕೋ ಲೆಕ್ಕ ಹಾಕುವುದರಿಂದ ಗಣಿತ ಬರುತ್ತದೆ, ಹತ್ತಿಯ ಬೆಳೆಯ ಮೂಲಕ ವಿಜ್ಞಾನ ಭೂಗೋಳ ತಿಳಿಯುತ್ತವೆ ಎಂದು 'ಹರಿಜನ' ಸಂಪಾದಕರು ಹೇಳಿದುದನ್ನು ನಾನು ಒಪ್ಪಲಾರೆ. ಒಂದು ಸಲ ಎರಡು ಸಲ ಮಾಡಿದರೆ ಇವು ಮನಸ್ಸನ್ನು ಪ್ರಚೋದಿಸಬಹುದು. ವರ್ಷಗಟ್ಟಲೆ ದಿನವೂ ಅದನ್ನೇ ಮತ್ತೆ ಮತ್ತೆ ಮಾಡುತ್ತಿದ್ದರೆ ಮನಸ್ಸು ಚೇತನ ಗಳೆದು ಗಾಣದೆತ್ತಿನಂತೆ ಬರೀ ಜಾಡು ತುಳಿಯುವ ಹಾಗೆ ಮಾಡುತ್ತದೆ. ವಿಶಿಷ್ಟ ಅಭಿ ರುಚಿಗಳನ್ನು ಬೆಳೆಸಿಕೊಂಡಿದಾನೆ ಎಂದು ವಿಕಾಸ ಕ್ರಮದಲ್ಲಿ ಉಳಿದಿಲ್ಲ ಮನುಷ್ಯ; ನಾನಾ ಮುಖವಾದ ವಾಸ್ತವಿಕತೆ ತಂದೊಡ್ಡುವ ಹಲವಾರು ತೊಡಕುಗಳನ್ನು ಬಿಡಿಸ ಬಲ್ಲ ಸಂಸ್ಕೃತಿಯನ್ನು ಗಳಿಸಿಗೊಂಡಿದಾನೆ ಎಂದು. ಕಣ್ಣು, ಕಿವಿ, ಕೈಗಳಿಗೆ ಶಿಕ್ಷಣ ಕೊಡಬೇಕಾದುದು ಅತ್ಯಗತ್ಯ. ಎಲ್ಲಾ ಶಾಲೆಗಳಲ್ಲೂ ಕೈಗೆಲಸವನ್ನು ಕಡ್ಡಾಯ ಮಾಡಬೇಕು. ಆದರೆ ಈ ಹಸ್ತಕೌಶಲದ ಶಿಕ್ಷಣ ಎಂಬುದು ನಿಜವಾಗಿಯೂ ಮಾನಸಿಕ ಶಿಕ್ಷಣ; ಮರೆಯಬಾರದು. ಶಿಕ್ಷಣ ಕೊಡಬೇಕು ಎಂದರೆ ಮಾರಾಟಕ್ಕಾಗಿ

ಒಂದೇ ತೆರನಾದ ಪದಾರ್ಥಗಳನ್ನು ಉತ್ಪತ್ತಿ ಮಾಡುವ ವಿಚಾರವನ್ನು ಮರೆಯ ಬೇಕು. ಮಕ್ಕಳು ಪ್ರಯೋಗಮಾಡಲಿ, ಕೆಡಿಸಲಿ, ಕಲಿಯಲಿ ಎಂದು ಹಲವು ಬಗೆಯ ಕಚ್ಚಾಪದಾರ್ಥಗಳನ್ನೂ ಯಂತ್ರಗಳನ್ನೂ ಅವರಿಗೆ ಕೊಡಬೇಕು. ಇದರಲ್ಲಿ ಸ್ವಲ್ಪ ವ್ಯರ್ಥ ಅನಿವಾರ್ಯ. ಈ ಸಂಚಿಕೆಯಲ್ಲಿ ಬೇರೊಂದು ಕಡೆ ಕೊಟ್ಟಿರುವ ಶ್ರೀ ಪಾರೀಖರ ಅಂಕಿ, ಅಂಶಗಳನ್ನು ಗಮನಿಸಿದರೆ, ಒಂದೇ ವೃತ್ತಿಯಲ್ಲಿ ವಿಶೇಷ ಶಿಕ್ಷಣ ಕೊಡುವ ಶಾಲೆಗಳಲ್ಲಿಯೂ ಈ ಕಸ-ವ್ಯರ್ಥ, ಸಾಕಷ್ಟು ಇದೆ ಎಂದು ತಿಳಿಯುತ್ತದೆ. ವಿಜ್ಞಾನದ ಕಾಲೇಜಿನ ಹಾಗೆ ವೃತ್ತಿ ಶಿಕ್ಷಣ ಶಾಲೆಯೂ ಒಂದು ಪ್ರಯೋಗಶಾಲೆ, ಪದಾರ್ಥಗಳನ್ನು ಹಾಳುಮಾಡುವ ಸ್ಥಳ. ಹಿಂದುಸ್ತಾನದ ಸಂಪತ್ತಿ ಬಹಳ ಕಡಮೆ. ಆದುದರಿಂದ ಇಲ್ಲಿ ಎಷ್ಟು ಬೇಕೋ ಅಷ್ಟು ಮಾತ್ರವೇ ಮುಖ್ಯ ಕೇಂದ್ರಗಳಲ್ಲಿ ಇಂಥ ಶಾಲೆಗಳನ್ನು ಸ್ಥಾಪಿಸಬೇಕು. ಘೋರಕಪುರ, ಅಯೋಧ್ಯೆಗಳಿಂದ ಹುಡುಗ ರನ್ನು ಕಾನ್ಪುರಕ್ಕೆ ಚರ್ಮದ ಕೆಲಸ ಕಲಿಯಲು ಕಳಿಸಿದರೆ ರಾಷ್ಟ್ರಕ್ಕೇನು ನಷ್ಟವಲ್ಲ; ಸುಮ್ಮನೆ ನೂರಾರು ವೃತ್ತಿ ಶಿಕ್ಷಣ ಶಾಲೆಗಳನ್ನು ಪ್ರಾರಂಭಿಸಿದರೆ ಅದು ನಷ್ಟ.

" ಇನ್ನೊಂದು ಬಗೆಯ ನಷ್ಟ ಸಾಧಾರಣವಾಗಿ ಗಮನಕ್ಕೆ ಬಂದಿಲ್ಲ. ವಯಸ್ಕ ನಾದ ಕುಶಲ ಕೆಲಸಗಾರ ಸುಧಾರಿಸಿದ ಯಂತ್ರವನ್ನುಪಯೋಗಿಸಿ ಒಂದು ಪೌಂಡು ಅರಳೆಯಿಂದ ನಾಲ್ಕು ಜನಕ್ಕೆ ಆಗುವಷ್ಟು ಬಟ್ಟೆ ಮಾಡಿದರೆ ಅಕುಶಲ ಶ್ರಮ ಇಬ್ಬ ರಿಗೆ ಮಾತ್ರವೇ ಕೊಟ್ಟೀತು. ಇದರಿಂದ ದೇಶದಲ್ಲಿ ಒಂದಕ್ಕೆರಡರಷ್ಟು ನೆಲದಲ್ಲಿ ಹತ್ತಿ ಬೆಳೆಯಬೇಕಾಗಿದೆ. ಅಕುಶಲ ಕೆಲಸಗಾರರು ಕೆಲಸ ಮಾಡಿದರೆ ನಮ್ಮ ದೇಶಕ್ಕೆ ಬೇಕಾಗುವ ಬಟ್ಟೆಗೆ ಎಷ್ಟು ನೆಲದಲ್ಲಿ ಹತ್ತಿ ಬೆಳೆಯಬೇಕೋ ಅಷ್ಟೇ ಎಕರೆಯಲ್ಲಿ ಕುಶಲ ಕೆಲಸಗಾರರು ಹೊಟ್ಟೆ, ಬಟ್ಟೆ ಎರಡಕ್ಕೂ ಸಾಕಾಗುವ ಧಾನ್ಯವನ್ನೂ ಹತ್ತಿ ಯನ್ನೂ ಬೆಳೆದಾರು.

" ನಷ್ಟದ ಇನ್ನೂ ಒಂದು ಅಂಶವನ್ನು ನೆನಪಿಡಬೇಕು. ಮಕ್ಕಳು ಅಲಂಕಾರದ ಪದಾರ್ಥಗಳನ್ನು ಮಾಡಬಲ್ಲರೆಂದು ಹೇಳುತ್ತಾರೆ. ತಾಂತ್ರಿಕ ಶಾಲೆಯ ವಿದ್ಯಾರ್ಥಿ ಯೊಬ್ಬನು ಪ್ಲೈವುಡ್ ಆಟದ ಸಾಮಾನುಗಳನ್ನು ಮಾಡುತ್ತಿದ್ದ; ನಾನು ನೋಡಿದೆ. ಆ ಮರ, ಆ ತಿರುವುಗಳು, ಅವನು ಬಳಸಿದ ಉಪಕರಣಗಳು, ಎಲ್ಲವೂ ಪರದೇಶದ್ದು. ಇಂಥ ಉದ್ಯೋಗಗಳು ಏನೂ ಇಲ್ಲದ ಕಡೆ ಪರದೇಶದ ಸಾಮಾನಿಗೆ ಗಿರಾಕಿ ಹುಟ್ಟಿಸುತ್ತವೆ. ನಾವೇ ಪ್ಲೈವುಡ್ ಮಾಡಬಹುದು ಎಂದೀರ. ಆದರೆ ಯಥೇಚ್ಛವಾಗಿ ಅಂಥ ಕಾಡನ್ನು ಬೆಳೆಸಲು ಹಿಂದುಸ್ತಾನವೇನು ಅಮೆರಿಕದ ಹಾಗೆ ಹೆಚ್ಚು ಭೂಮಿಯುಳ್ಳ ದೇಶವಲ್ಲ. ಕಚ್ಚಾ ಪದಾರ್ಥವನ್ನೂ ಬಂಡವಾಳವನ್ನೂ ಹೀಗೆ ಅನಗತ್ಯ ಪದಾರ್ಥಗಳ ಉತ್ಪತ್ತಿಗೆ ಉಪಯೋಗಿಸದಂತೆ ತಡೆಯಬೇಕು. ಅದಕ್ಕೆ ಪ್ರೋತ್ಸಾಹ ಕೊಡಬಾರದು."

" ಶಾಲೆ ಕಾಲೇಜುಗಳಲ್ಲಿ ತರುಣಲೋಕ ಗುಣ-ಮೂಲ್ಯಗಳ ಪ್ರಪಂಚದಲ್ಲಿ ಸುಳಿದಾಡುತ್ತದೆಯೇ ವಿನಾ ಬೆಲೆ-ವಿಕ್ರಯಗಳಲ್ಲಿ ಅಲ್ಲ, ಬುದ್ಧಿ ಬಲಿಯುವ

ವಯಸ್ಸಿನಲ್ಲಿ ಉತ್ಪಾದನೆ, ಮಾರಾಟ, ಹಣಗಳಿಸುವಿಕೆಗಳೇ ಗುರಿಯಾಗಿಬಿಟ್ಟರೆ ಬೆಳವಣಿಗೆ ಮೊಟಕಾಗುತ್ತದೆ. ಹೀಗಾದರೆ ಈಗಾಗಲೇ ಅಖಂಡ ಸಮೃದ್ಧಿಯಿದ್ದೂ ಅದರ ನಡುವೆ ಬಡತನದಿಂದ ಜನ ಗೋಳಿಡುತ್ತಿರುವ ಪರಿಸ್ಥಿತಿಯನ್ನು ಮತ್ತಷ್ಟು ಹೆಚ್ಚಿಸುವಂತೆ ಮಾಡುತ್ತೇವೆ. ಶ್ರೀ ರಾಮಕೃಷ್ಣ ಪರಮಹಂಸರು ವೃತ್ತಿಶಿಕ್ಷಣಕ್ಕೆ ಎಳ್ಳಷ್ಟೂ ಬೆಲೆ ಕೊಡಲಿಲ್ಲವೆಂಬುದು ಗಮನೀಯ.

" ಈಗ ಏಳು ವರ್ಷದಲ್ಲಿ ಕಲಿಯುತ್ತಿರುವುದನ್ನು ಎರಡೇ ವರ್ಷದಲ್ಲಿ ಕಲಿಯುವಂತೆ ಮಾಡಬಹುದು ಎಂಬ ಮಾತು ಅತಿ ವಿಚಿತ್ರ ಭ್ರಾಂತಿ. ಹುಡುಗನ ಮನಸ್ಸು ಖಾಲಿ ಸೀಸೆಯಲ್ಲ, ಏನಾದರೂ ತುಂಬಲಿಕ್ಕೆ. ಹದಿನಾರನೆಯ ವಯಸ್ಸಿನಲ್ಲಿ ಏನು ಕಲಿಯಬೇಕೋ ಅದನ್ನು ಮಗು ಎಂಟನೆಯ ವಯಸ್ಸಿನಲ್ಲಿ ಕಲಿಯಲಾರದು, ಕಲಿಯಬಾರದು. ಈಗಿನ ಅಲಸ್ಯಕ್ಕೆ ಕಾರಣ ಪರಭಾಷೆಯಲ್ಲ, ಜನರು ಭಾವಿಸುವಷ್ಟು ಹೆಚ್ಚು ಕಾಲವನ್ನು ನಾವು ಅದಕ್ಕೆ ಕೊಡುತ್ತಲೂ ಇಲ್ಲ. ಪ್ರಬಂಧ ಲೇಖನ ಒಂದು ಬಗೆಯ ರಸಶಿಕ್ಷಣ, ಮಾನಸ್ಸಿನ ಶಿಕ್ಷಣ. ಇದು ನಿಧಾನವಾಗಿಯೇ ನಡೆಯಬೇಕು. ಇಂಗ್ಲೆಂಡಿನಲ್ಲಿ ಬೇರೆ ಬೇರೆ ಪಾಠಗಳಿಗೆ ಎಷ್ಟು ಸಮಯ ಕೊಡುತ್ತಾರೋ ನೋಡಿ :

| | | |
|---|---|---|
| ಗೋಷ್ಠಿ, ಹಾಜರಿ, ಪ್ರಾರ್ಥನೆ | ... | ೨॥ ಗಂಟೆ. |
| ಇಂಗ್ಲಿಷ್ (ಓದು, ಬರಹ, ವ್ಯಾಕರಣ, ಪ್ರಬಂಧ) | | ೧೦ ಗಂಟೆ. |
| ಗಣಿತ, ಸುಲಭ ಅಂಕಗಣಿತ | ... | ೫॥ ಗಂಟೆ. |
| ಇತಿಹಾಸ—ಭೂಗೋಳ | ... | ೩ ಗಂಟೆ. |
| ವಿಜ್ಞಾನ, ಕಲೆ (ಕೈಗೆಲಸ ಸೇರಿ) | ... | ೩ ಗಂಟೆ. |
| ಶರೀರ ಶಿಕ್ಷಣ, ಆಟಗಳು | ... | ೩॥ ಗಂಟೆ. |
| | ಒಟ್ಟು | ೨೭॥ ಗಂಟೆ. |

" ಪ್ರಾರ್ಥನೆಯಲ್ಲಿ ಇಂಗ್ಲಿಷ್ ಶಿಕ್ಷಣವೂ ಆಗುತ್ತದೆ ಪ್ರತಿಯೊಂದು ಪಾಠವೂ ಇಂಗ್ಲೀಷ್ ಪಾಠವೇ. ಭಾಷೆ ಎಷ್ಟೆಷ್ಟು ಕ್ಲಿಷ್ಟವಾದರೆ, ಅದರಲ್ಲಿ ಪಾಂಡಿತ್ಯ ಪೂರ್ಣವಾದರೆ, ಬುದ್ಧಿ ಹೆಚ್ಚು ಪ್ರಖರವಾಗುತ್ತದೆ. ಬುದ್ಧಿಯ ಬೆಳವಣಿಗೆಗೆ ಉಪಯೋಗಿಸುವ ವಿಧಾನ ಅನುತ್ಪಾದಕ, ವ್ಯರ್ಥ, ನಿಧಾನ ಎಂದು ಕಾಣುತ್ತದೆ. ಆದರೆ ಶಿಕ್ಷಣದ ಗುರಿ ಮನೋದಾರ್ಢ್ಯವನ್ನು ಬೆಳೆಸಿ, ಸಮಾಜದ ರೀತಿನೀತಿಗಳಿಗೆ ಮನಸ್ಸು ಹೊಂದಿಕೊಳ್ಳುವಂತೆ ಮಾಡುವುದು. ಶಾಲೆಗಳು ಮನುಷ್ಯರನ್ನು ನಿರ್ಮಿಸುವುದು ಸಾಲದು, ವಸ್ತುಗಳನ್ನೂ ಉತ್ಪತ್ತಿ ಮಾಡಬೇಕು ಎಂದು ಕೇಳುವುದು ಬೇಡ.

" ಸಾರಾಂಶ–ಶಾಲೆಗಳನ್ನು ಕಟ್ಟಲು ಹೋಗಿ ರಾಷ್ಟ್ರವನ್ನು ದಿವಾಳಿಯೆಬ್ಬಿಸುವ ಈ ಮಂದದೃಷ್ಟಿಯ ನೀತಿ ಆರ್ಥಿಕವಾಗಿ ಬಹಳ ಅನರ್ಥಕಾರಿ.

ಒಬ್ಬ ಪ್ರೊಫೆಸರ್ "

ಒಂದು ಪ್ರಸಿದ್ಧ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಒಬ್ಬರು ಬರೆದ ಪತ್ರವಿದು. ಇದರ ಜೊತೆಯಲ್ಲಿ ಸಹಿ ಮಾಡಿದ ಒಂದು ಪತ್ರವಿದೆ; ಆದರೆ ಲೇಖನಕ್ಕೆ ಸಹಿಯಿಲ್ಲ. ಆದುದರಿಂದ ಲೇಖಕರ ಹೆಸರನ್ನು ಕೊಡಲಿಲ್ಲ. ಓದುಗರಿಗೆ ಲೇಖಕನ ಗೊಡವೆಯೇನು? ಲೇಖನದ ವಿಷಯ ಮುಖ್ಯ. ಪೂರ್ವಗ್ರಹ ಇದ್ದವರ ಕಣ್ಣಿಗೆ ಹೇಗೆ ಪೊರೆ ಕಟ್ಟುತ್ತದೆ ಎಂಬುದಕ್ಕೆ ಈ ಲೇಖನ ಒಳ್ಳೆಯ ಉದಾಹರಣೆ. ಈ ಲೇಖಕ ನನ್ನ ಯೋಜನೆಯನ್ನು ಅರಿತುಕೊಳ್ಳುವ ಪ್ರಯಾಸ ಪಡಲಿಲ್ಲ. ಸಿಂಹಳದ ಅರೆಗುಲಾಮಗಿರಿಯ ತೋಟಗಳಿಗೆ ನಮ್ಮ ವಿದ್ಯಾರ್ಥಿಗಳನ್ನು ಹೋಲಿಸಿದಾಗ, ತನ್ನನ್ನು ತಾನೇ ಹಳಿದುಕೊಂಡಹಾಗಾಯಿತು. ಆ ತೋಟಗಳಲ್ಲಿರುವ ಹುಡುಗರನ್ನು ವಿದ್ಯಾರ್ಥಿಗಳಂತೆ ನಡೆಸಿಕೊಳ್ಳರು. ಅವರ ದುಡಿತ ಶಿಕ್ಷಣದ ಭಾಗವಲ್ಲ. ನಾನು ಹೇಳುವ ಶಾಲೆಗಳಲ್ಲಿ ಹುಡುಗರು ಹೈಸ್ಕೂಲುಗಳಲ್ಲಿ ಕಲಿಯುವ ಎಲ್ಲಾ ವಿಷಯಗಳನ್ನೂ, ಇಂಗ್ಲೀಷ್ ಒಂದನ್ನು ಬಿಟ್ಟು, ಅವಕ್ಕೆ ಕವಾಯತು, ಸಂಗೀತ, ಚಿತ್ರಲೇಖನಗಳನ್ನೂ ಒಂದು ಉದ್ಯೋಗವನ್ನೂ ಸೇರಿಸಿಕೊಂಡು ಕಲಿಯುತ್ತಾರೆ. ಈ ಶಾಲೆಗಳನ್ನು ಕಾರಖಾನೆಗಳು ಎಂದರೆ ಕೆಲವು ಸಂಗತಿಗಳ ಪರಂಪರೆಯನ್ನೇ ಗಮನಿಸುವುದಿಲ್ಲ ಎಂದು ಹಠ ಹಿಡಿದ ಹಾಗೆ. ಒಬ್ಬ ಮನುಷ್ಯ ಕೋತಿಯೊಂದನ್ನೇ ನೋಡಿದಾನೆ; ಬೇರೆ ಯಾವ ಪ್ರಾಣಿಯನ್ನೂ ನೋಡಿಲ್ಲ. ಕೋತಿಯ ಲಕ್ಷಣಗಳಲ್ಲಿ ಕೆಲವು ಮಾತ್ರ ಮನುಷ್ಯನಲ್ಲೂ ಇವೆ. ಮನುಷ್ಯ ಎಂದರೆ ಏನೋ ಅರ್ಥಮಾಡಿಕೊಳ್ಳದೆ, ಹಠ ಹಿಡಿದು 'ಮನುಷ್ಯನನ್ನೂ ಕೋತಿ ಎಂದಹಾಗಿದೆ ಇದು. ನಾನು ಈ ಯೋಜನೆಯ ಬಗ್ಗೆ ಹೇಳಿದಷ್ಟೆಲ್ಲ ನಿರೀಕ್ಷಿಸಲಾಗದು ಎಂದು ಈ ಪ್ರೊಫೆಸರ್ ಎಚ್ಚರಿಕೆ ಕೊಟ್ಟಿದ್ದರೆ ಏನೂ ತಂಟೆಯಿರುತ್ತಿರಲಿಲ್ಲ. ಆ ಎಚ್ಚರಿಕೆಯೂ ಅನಗತ್ಯವೇ. ಏಕೆಂದರೆ ನಾನೇ ಆ ಎಚ್ಚರಿಕೆ ಕೊಟ್ಟಿದೇನೆ.

ನನ್ನ ಸೂಚನೆ ಹೊಸ ಬಗೆಯದು ಎಂದು ಒಪ್ಪಿಕೊಳ್ಳುತ್ತೇನೆ. ಆದರೆ ಹೊಸತನವೇನು ಅಪರಾಧವೆ? ಈ ಸೂಚನೆಗೆ ಹೆಚ್ಚು ಅನುಭವದ ಆಧಾರವಿಲ್ಲ. ಒಪ್ಪುತ್ತೇನೆ. ಆದರೆ ನನಗೂ, ನನ್ನ ಸಹೋದ್ಯೋಗಿಗಳಿಗೂ ಆಗಿರುವ ಅನುಭವ ಈ ಯೋಜನೆಯನ್ನು ಶ್ರದ್ಧೆಯಿಂದ ಸಾಧಿಸಿದರೆ ಯಶಸ್ಸು ಖಂಡಿತ ಎಂದು ನಮ್ಮನ್ನು ಪ್ರೋತ್ಸಾಹಿಸುತ್ತದೆ. ಈ ಪ್ರಯೋಗ ವಿಫಲವೇ ಆದೀತು. ಪ್ರಯತ್ನ ಮಾಡಿದುದರಿಂದ ರಾಷ್ಟ್ರಕ್ಕೆ ಏನೂ ನಷ್ಟವಾಗದು. ಒಂದು ವೇಳೆ ಯೋಜನೆ ಸ್ವಲ್ಪ ಮಟ್ಟಿಗೆ ಸಫಲವಾದರೂ ರಾಷ್ಟ್ರಕ್ಕೆ ಎಷ್ಟೋ ಲಾಭವಾಗುತ್ತದೆ. ಪ್ರಾಥ

ಮಿಕ ಶಿಕ್ಷಣವನ್ನು ಬಲಾತ್ಕಾರ, ಉಚಿತ, ದಕ್ಷ ಆಗಿ ಮಾಡಲು ಬೇರೆ ಯಾವ ದಾರಿಯೂ ಇಲ್ಲ. ಈಗಿನ ಪ್ರಾಥಮಿಕ ಶಿಕ್ಷಣ ಒಂದು ಮಾಯಾಜಾಲ ಎಂಬುದನ್ನು ಎಲ್ಲರೂ ಒಪ್ಪಿದಾರೆ.

ಶ್ರೀ॥ ನರಹರಿ ಪಾರೀಖರ ಅಂಕೆ, ಅಂಶಗಳು ಈ ಯೋಜನೆಗೆ ಸಾಧ್ಯವಿದ್ದಷ್ಟು ಪುಷ್ಟಿ ಕೊಡಲು ಬರೆದಂಥವು. ಅವು ನಿರ್ಣಯಾತ್ಮಕವಲ್ಲ, ಪ್ರೋತ್ಸಾಹಕ. ಉತ್ಸಾಹಶಾಲಿಗೆ ಅವರಲ್ಲಿ ಒಂದು ಆಧಾರ ಕಾಣುತ್ತದೆ. ಏಳು ವರ್ಷ ಎಂಬುದು ನನ್ನ ಯೋಜನೆಯ ಪ್ರಧಾನಾಂಗವಲ್ಲ. ನಾನು ಬಯಸಿದ ಬುದ್ಧಿ ವಿಕಾಸದ ಮಟ್ಟವನ್ನು ಏರಲು ಇನ್ನೂ ಹೆಚ್ಚು ಕಾಲ ಬೇಕಾದೀತು. ಶಿಕ್ಷಣ ಕಾಲವನ್ನು ಹೆಚ್ಚಿಸಿದರೆ ರಾಷ್ಟ್ರಕ್ಕೇನೂ ಹಾನಿಯಾಗದು. ಯೋಜನೆಯ ಮುಖ್ಯಾಂಶಗಳು ಇವು :

೧) ಸಮಗ್ರ ದೃಷ್ಟಿಯಿಂದ ಒಂದೋ ಹಲವೋ ಉದ್ಯೋಗ ವಿದ್ಯಾರ್ಥಿ ವಿದ್ಯಾರ್ಥಿನಿಯರ ಸರ್ವತೋಮುಖ ವಿಕಾಸಕ್ಕೆ ಅತ್ಯುತ್ತಮ ಸಾಧನ. ಆದುದರಿಂದ ಪಾಠಕ್ರಮ ಉದ್ಯೋಗ ಶಿಕ್ಷಣದ ಸುತ್ತಲೂ ಹೆಣೆಯಲ್ಪಡಬೇಕು.

೨) ಮೊದಲಿನ ಒಂದೆರಡು ವರ್ಷಗಳಲ್ಲಿ ಶಿಕ್ಷಣ ಸ್ವಾವಲಂಬಿಯಾಗದಿದ್ದರೂ, ಈ ಬಗೆಯ ಪ್ರಾಥಮಿಕ ಶಿಕ್ಷಣ ಒಟ್ಟಾರೆ ಸ್ವಾವಲಂಬಿಯಾಗಬೇಕು. ಪ್ರಾಥಮಿಕ ಶಿಕ್ಷಣ ಎಂದರೆ ಇಲ್ಲಿ ಮೇಲೆ ವಿವರಿಸಿದಂತೆ.

ಉದ್ಯೋಗದ ಮೂಲಕ ಗಣಿತವನ್ನೂ ಉಳಿದುದನ್ನೂ ಕಲಿಸಲು ಸಾಧ್ಯವೆ ಎಂದು ಪ್ರೊಫೆಸರರು ಪ್ರಶ್ನಿಸುತ್ತಾರೆ. ಅವರಿಗೆ ಅನುಭವವಿಲ್ಲದುದರಿಂದ ಹೀಗೆ. ನನಗೆ ಅನುಭವವಿದೆ. ಟಾಲ್‌ಸ್ಟಾಯ್ ಫಾರಂನಲ್ಲಿ (ದಕ್ಷಿಣ ಆಫ್ರಿಕಾ) ನನ್ನ ರಕ್ಷಣೆಯಲ್ಲಿದ್ದ ಹುಡುಗ ಹುಡುಗಿಯರ ಸರ್ವಾಂಗೀಣ ವಿಕಾಸವನ್ನು ಸಾಧಿಸುವುದು ನನಗೆ ಕಷ್ಟವಾಗಲಿಲ್ಲ. ಅಲ್ಲಿನ ಶಿಕ್ಷಣದ ಮುಖ್ಯಾಂಶ ಎಂಟು ಗಂಟೆಯ ಶರೀರ ಶ್ರಮ. ಒಂದೋ ಎರಡೋ ಗಂಟೆ ಮಾತ್ರ ಪುಸ್ತಕಪಾಠ. ಅಗೆತ, ಅಡಿಗೆ, ಗುಡಿಸುವುದು, ಮೆಟ್ಟು ಹೊಲಿಯುವುದು, ಮರಗೆಲಸ ಮತ್ತು ಓಲೆಕಾರಿಕೆ—ಇವು ಅಲ್ಲಿನ ಶರೀರಶ್ರಮದ ಕೆಲಸ. ಅಲ್ಲಿದ್ದ ಮಕ್ಕಳು ಆರರಿಂದ ಹದಿನಾರರವರೆಗಿನವರು. ಆ ಪ್ರಯೋಗ ಈಚೆಗೆ ಇನ್ನೂ ಹೆಚ್ಚು ಸಂಪನ್ನವಾಗಿದೆ.೪೧

## ೬

## ಮಾಡುವುದು, ಬರೀ ಸೋಮಾರಿ ವಿಚಾರವಲ್ಲ

ತಾವು ಬರೆದ ಲೇಖನದ ಪ್ರತಿಯೊಂದನ್ನು ಡಾ॥ ಅರುಂಡೇಲ್ ನನಗೆ ಕಳಿಸಿದಾರೆ. ಜೊತೆಗೆ ಒಂದು ಪತ್ರ ಬರೆದಿದಾರೆ:

'ಇಷ್ಟು ಕಾಲ ಈ ದೇಶದಲ್ಲಿ ಶಿಕ್ಷಣ ಅಸಹಜವಾಗಿದೆ; ಇನ್ನು ಸಹಜ, ವಾಸ್ತವ ಆಗಬೇಕೆಂದು ನಿಮ್ಮ ಬಯಕೆ. ಮೂವತ್ತು ವರ್ಷಕ್ಕಿಂತ ಹೆಚ್ಚು ಕಾಲ ನಾನು ಶಿಕ್ಷಣ ಕ್ಷೇತ್ರದಲ್ಲಿ ಕೆಲಸಮಾಡಿದೇನೆ. ನನ್ನ ಲೇಖನವೊಂದನ್ನು ನಿಮಗೆ ಕಳುಹಿಸುತ್ತಿದೇನೆ. ಕೆಲಮಟ್ಟಿಗೆ ನಿಮ್ಮ ಅಭಿಪ್ರಾಯಗಳಂತೆಯೇ ಇದೆ ಈ ಲೇಖನ. ಒಂದು ರಾಷ್ಟ್ರೀಯ ಯೋಜನೆ ಇರಬೇಕು, ಪ್ರತಿಯೊಂದು ಪ್ರಾಂತದ ಶಿಕ್ಷಣ ಮಂತ್ರಿಯೂ ಅದನ್ನು ನಡೆಸಬೇಕು. ಬೇಕಾದಷ್ಟು ಸ್ವತಂತ್ರ ವಿಚಾರ ನಡೆದಿದೆ. ಆದರೆ ಈ ಮಹಾತತ್ವಗಳ ಕಹಳೆಯೂದಿ ಒಡನೆಯೆ ಸರಕಾರವೂ ಪ್ರಜೆಯೂ ಸೇರಿ ಮಾಡಬಹುದಾದ ಒಂದು ಪ್ರಯತ್ನಕ್ಕೆ ದಾರಿಮಾಡಬೇಕು.

ಆ ಲೇಖನದ ಮುಖ್ಯಾಂಶಗಳನ್ನು ಪ್ರಕೃತವಿದ್ದಷ್ಟು ಎತ್ತಿ ಬರೆಯುತ್ತೇನೆ:

'ರಾಷ್ಟ್ರೀಯ ಶಿಕ್ಷಣದ ರೂಪು, ತತ್ವಗಳ ಬಗ್ಗೆ ಬರೆಯಲು ಇಲ್ಲಿ ಸ್ಥಳವಿಲ್ಲ. 'ಮಾಡುವುದರ ಕಡೆ' ಹೆಚ್ಚು ಗಮನ ಕೊಡಬೇಕು. ಶಾಲೆ–ಕಾಲೇಜು ಎಂಬ ಭೇದವನ್ನೂ ತೊಡೆದು ಹಾಕಬೇಕು.

'ವಿಚಾರ ಪ್ರಚೋದನೆ ಎಷ್ಟೇ ಆಗಲಿ, ಕೃತಿಯಲ್ಲಿ ಮೂಡದಿದ್ದರೆ ಅದೆಲ್ಲವೂ ವ್ಯರ್ಥ. ರಸಭಾವನೆಗಳ ವಿಷಯವೂ ಅಷ್ಟೇ. ಈಗಂತಲೂ ಇವುಗಳ ಪ್ರಸಕ್ತಿಯೇ ಇಲ್ಲ ಶಿಕ್ಷಣದಲ್ಲಿ. ಈ ಅಸಡ್ಡೆ ಅಪಾಯಕರ. ಹಿಂದೂಸ್ತಾನಕ್ಕೆ ಚಾರಿತ್ರ್ಯವಂತ ತರುಣರು ಬೇಕು. ಅವರ ಚಾರಿತ್ರ್ಯ ಸ್ವಾಭಾವಿಕವಾಗಿಯೇ ಕೃತಿ, ಸೇವೆಗಳಲ್ಲಿ ಪರಿಣತವಾಗುವಂತೆ ಅವರ ಶಿಕ್ಷಣ ಕಲಿಸಬೇಕು. ವಂಶಾನುಗುಣವಾಗಿ ಪರಿಸ್ಥಿತಿ ಪ್ರಾಪ್ತವಾಗಿ ಯಾವ ಕೆಲಸವೇ ಪಾಲಿಗೆ ಬರಲಿ, ಅದನ್ನು ಚೆನ್ನಾಗಿ ಮಾಡುವ ತರುಣರು ಇಂದು ಭಾರತಕ್ಕೆ ಬೇಕು. ಪಾಠಕ್ರಮದ ಪ್ರತಿಯೊಂದು ವಿಷಯವೂ ಯೋಗ್ಯಜೀವನಕ್ಕಾಗಿಯೇ. ಪ್ರತಿಯೊಂದು ವಿಷಯವೂ ಜೀವನದ ನಿಯಮ, ಉದ್ದೇಶ್ಯ, ವ್ಯವಸ್ಥೆಗಳನ್ನು ತಿಳಿಸುತ್ತದೆ. ಸತ್ಯ–ಸಂಗತಿಗಳ ಗಟ್ಟಿ ಚಿಪ್ಪಿನೊಳಗೆ ಸೇರಿಕೊಂಡು ಉಪಾಧ್ಯಾಯರು ಇದನ್ನು ಮರೆತುಬಿಡುತ್ತಾರೆ. ಬುದ್ಧಿಯ ಲೋಕದಲ್ಲಿ ಸಂಗತಿಗಳು ಯಾವುದೂ ಇಲ್ಲ; ಇರುವುದೆಲ್ಲ ಬರೀ ಸಂಪ್ರದಾಯ. ಸಂಶಯದಿಂದ ಸಿದ್ಧಾಂತದ ಕಡೆಗೆ ವಿಜ್ಞಾನ ಒಂದು ಹೆಜ್ಜೆಯಿಟ್ಟಿದೆ ಎಂದು ಸರ್ ಆರ್ಥರ್ ಎಡ್ಡಿಂಗ್‌ಟನ್ ಹೇಳಿದುದು ನಿಜ. ಆದುದರಿಂದ ನಮ್ಮ ಶಿಕ್ಷಣ ಈ ಸಂಗತಿಗಳ ಹೊರೆಯನ್ನು ವಿದ್ಯಾರ್ಥಿಗೆ ಹೊರಿಸಬಾರದು. ಇವು ಆದಷ್ಟೂ ಹಗುರವಾಗಬೇಕು.

ವ್ಯಕ್ತಿಗಳಿಗಾಗಲಿ, ರಾಷ್ಟ್ರಗಳಿಗಾಗಲಿ, ಚಾರಿತ್ರ್ಯ ಒಂದೇ ಸುಭದ್ರವಾದ ತಳಹದಿ. ಆ ತಳಹದಿ ಹಾಕಲಿಕ್ಕೆ ಎಲ್ಲವೂ ಉಪಯೋಗಿಸಲ್ಪಡಬೇಕು.

"ಒಮ್ಮೆ ಚಾರಿತ್ರ್ಯ ಮೂಡಿದರೆ ಸಾಕು. ಆಮೇಲೆ ಕರ್ಮಶೀಲತೆ ತಾನೇ ಬರುತ್ತದೆ. ಸ್ವಾವಲಂಬನ ಸ್ವಾರ್ಥ ತ್ಯಾಗಗಳ ಸೆಲೆ ಒಡೆಯುತ್ತದೆ. ಭೂಮಿ ತಾಯಿಯ ಸಾನ್ನಿಧ್ಯವನ್ನು ಪಡೆಯುವ ಬಯಕೆ ಹುಟ್ಟುತ್ತದೆ. ಕೃಷಿಯ ಮೂಲಕ ಭೂಮಾತೆಯನ್ನು ಆರಾಧಿಸಿ, ಸರಳ, ಶುದ್ಧ ಜೀವನದಿಂದ ಆಕೆಗೆ ಆದಷ್ಟು ಕಡಿಮೆ ಭಾರವಾಗುವ ಬುದ್ಧಿ ಹುಟ್ಟುತ್ತದೆ. ಭೂಮಾತೆಯ ಪುತ್ರನಾದವನು ಪ್ರತಿಯೊಬ್ಬನೂ ಏಕೆ ನೇರಾಗಿ ಆಕೆಯಿಂದಲೇ ಜೀವನಾಧಾರವನ್ನು ಪಡೆಯಬಾರದೋ ನನಗಂತೂ ಅರ್ಥವಾಗುತ್ತಿಲ್ಲ. ಪಟ್ಟಣದ ಶಾಲೆಗಳಲ್ಲಿಯೂ ಕೂಡ ವಿದ್ಯಾರ್ಥಿಗಳಿಗೆ ನೇರಾಗಿ ಭೂಮಿತಾಯಿಯ ಸಂಬಂಧ ಬರುವಂಥ ಒಂದು ಕಾರ್ಯಕ್ರಮ ಶಿಕ್ಷಣದಲ್ಲಿ ಇರಲೇ ಬೇಕು ಎನಿಸುತ್ತದೆ ನನಗೆ.

"ಶಿಕ್ಷಣವನ್ನು ಇಂದು ವ್ಯರ್ಥವಾಗಿಮಾಡಿರುವ ಅನೇಕ ಸಂಪ್ರದಾಯಗಳನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಿ ಹಾಕಬೇಕು. ಈಗ ರಾಷ್ಟ್ರೀಯ ಮಂತ್ರಿ ಮಂಡಲಗಳು ಬಂದಿವೆ. ಈ ಅನುಕೂಲ ಸಮಯದಲ್ಲಿ ನಿಜವಾದ ವಿದ್ಯಾಭ್ಯಾಸವನ್ನು ನಾವು ಮೊದಲಿಡಬೇಕು: ಹೇಳಿ ಬರೆಯಿಸುವ ಈ ಬರೀ ಗಿಳಿಪಾಠವನ್ನು ತಪ್ಪಿಸಬೇಕು. ಓಬೀರಾಯನ ಕಾಲದ ಶಿಕ್ಷಣಪದ್ಧತಿ ಸಂಪ್ರದಾಯಗಳ ಕೊಂಕಲು ಜಾಡಿನಲ್ಲಿ ನಾವು ಸಿಕ್ಕಿಬಿದ್ದಿದೇವೆ. ಗಾಂಧೀಜೀ ಸೂಚಿಸಿದ ಸ್ವಾವಲಂಬನಪೂರ್ಣ ಶಿಕ್ಷಣವನ್ನು ನಾನು ಮನಸಾರೆ ಸ್ವಾಗತಿಸುತ್ತೇನೆ. ಅವರು ಸೂಚಿಸುವಷ್ಟು ದೂರ ನಾವು ಹೋಗ ಬಲ್ಲೆವೋ ಇಲ್ಲವೋ ನನಗೆ ಭರವಸೆಯಿಲ್ಲ. ಆದರೆ ಏಳು ವರ್ಷಕಾಲ ಶಿಕ್ಷಣ ಪಡೆದ ಒಬ್ಬ ತರುಣ ನಾಗರಿಕ ಗಳಿಸಾಳಾಗಿ ಶಾಲೆಯಿಂದ ಹೊರಬೀಳಬೇಕು ಎಂಬುದು ನನಗೆ ಸಂಪೂರ್ಣ ಸಮ್ಮತ. ಶಿಕ್ಷಣದ ಮೂಲಕ ಸಾಧ್ಯವಾದಮಟ್ಟಿಗೆ ಪ್ರತಿಯೊಬ್ಬನೂ ತನ್ನ ಸೃಷ್ಟಿಶಕ್ತಿಯನ್ನು ಅರಿತುಕೊಳ್ಳಬೇಕು ಎಂದು ನನಗನಿಸುತ್ತದೆ. ಪ್ರತಿಯೊಬ್ಬನೂ ಭಗವದಂಶ; ಭಗವಂತನ ಮುಖ್ಯ ಗುಣವಾದ ಸೃಷ್ಟಿಶಕ್ತಿ, ಕರ್ಮಶಕ್ತಿ ಪ್ರತಿಯೊಬ್ಬನಲ್ಲೂ ಇವೆ. ಈ ಕ್ರಿಯಾಶಕ್ತಿಯನ್ನು ಎಚ್ಚರಿಸಿ ಪ್ರಕಟಿಸಲಾರದ ಶಿಕ್ಷಣ ನಮಗೇಕೆ? ಅದು ಶಿಕ್ಷಣವಲ್ಲ, ಬರೀ ಗಿಳಿಪಾಠ.

"ತಲೆಯಲ್ಲಿ ಎಷ್ಟು ಬುದ್ಧಿ ಶಕ್ತಿ ಇದೆಯೋ ಕೈಯಲ್ಲೂ ಅಷ್ಟೇ ಇದೆ. ಬಹು ಕಾಲದಿಂದ ತಲೆಯೊಳಗಿನ ಬುದ್ಧಿಯೇ ನಮ್ಮ ಆರಾಧ್ಯದೇವತೆಯಾಗಿದೆ. ಬುದ್ಧಿ ಸರ್ವಾಧಿಕಾರಿಯಾಗಿ ನಮ್ಮ ಮೇಲೆ ದಬ್ಬಾಳಿಕೆ ನಡೆಸುತ್ತಿದೆ. ಈ ಹೊಸ ಯೋಜನೆಯಂತೆ ಬುದ್ಧಿ ನಮ್ಮ ಹಲವು ಸೇವಕರಲ್ಲಿ ಒಂದು ಆಗಬೇಕು. ಸರಳಜೀವನವನ್ನು ಕಲಿಸಿ ಪ್ರಕೃತಿಯ ಸರಳಸೌಂದರ್ಯವನ್ನು ಅನುಭವಿಸುವಂತೆ ಮಾಡುವ ಸಮಸ್ತವನ್ನೂ, ಕೈಯಾರೆ ಕೆಲಸ ಮಾಡಿ ಬಾಳಲು ಕಲಿಸುವ ಎಲ್ಲ ಕುಶಲ ಕಾರ್ಯವನ್ನೂ ಕಲೆ, . ಕೈಗಾರಿಕೆ, ಕೃಷಿ ಯಾವುದೇ ಆಗಲಿ–ಗೌರವಿಸಲು ಮೊದಲಿಡಬೇಕು.

"ಇಂಥ ಶಿಕ್ಷಣ ನನಗೆ ದೊರೆತಿದ್ದರೆ ಇನ್ನೂ ಹರ್ಷಮಯವಾದ ಕೃತಕೃತ್ಯ ಜೀವನ ನನ್ನದಾಗುತ್ತಿತ್ತು; ನಾನು ಬಲ್ಲೆ."

ಪಾಮರನಂತೆ ನಾನು ಏನನ್ನು ಹೇಳುತ್ತಿದೇನೋ ಶಿಕ್ಷಣ ಪಂಡಿತರಾಗಿ ಡಾ॥ ಅರುಂಡೇಲ್ ಅದನ್ನೇ ಹೇಳುತ್ತಿದಾರೆ. ದೇಶದ ತರುಣರನ್ನು ರೂಪುಗೊಳಿಸುವ ಶಿಕ್ಷಣಪಂಡಿತರಾಗಿ ಹೇಳುತ್ತಿದಾರೆ. ಸ್ವಾವಲಂಬಿ ಶಿಕ್ಷಣದ ಬಗ್ಗೆ ಅವರು ತೋರುತ್ತಿರುವ ಸಾವಧಾನ ನನಗೆ ಆಶ್ಚರ್ಯಕರವಲ್ಲ. ನನ್ನ ಮಟ್ಟಿಗೆ ಅದೇ ತಿರುಳು. ನಲವತ್ತು ವರ್ಷದಿಂದ ಯಾವುದನ್ನು ಮಸಕುಮಸಕಾಗಿ ನೋಡುತ್ತಿದ್ದೆನೋ, ಪರಿಸ್ಥಿತಿಯ ಒತ್ತಾಯದಿಂದ ಈಗ ಸ್ಪಷ್ಟವಾಗಿ ನೋಡುತ್ತಿದೇನೆ.

೧೯೨೦ರಲ್ಲಿ ಈಗಿನ ಶಿಕ್ಷಣಪದ್ಧತಿಯ ಬಗ್ಗೆ ಬಹಳ ಕಟುವಾಗಿ ಮಾತನಾಡಿದೆ. ಈಗ ಏಳು ಪ್ರಾಂತಗಳಲ್ಲಿ ನನ್ನ ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕೆಲಸ ಮಾಡಿ ಕಷ್ಟಗಳನ್ನನುಭವಿಸಿದ ಸಹೋದ್ಯೋಗಿಗಳು ಮಂತ್ರಿಗಳಾಗಿದಾರೆ. ಆದುದರಿಂದ ಈ ಶಿಕ್ಷಣ ಕೆಳಗಿನಿಂದ ಮೇಲಿನವರೆಗೂ ಪೂರಾ ತಪ್ಪು ಎಂಬ ಆಕ್ಷೇಪಣೆಯನ್ನು ಎತ್ತಿ ಹಿಡಿದು ತೋರಿಸಬೇಕೆಂಬ ಆಸೆ ನನಗೆ ಬಲವಾಗಿದೆ. ಈ ಪತ್ರಿಕೆಯ ಮೂಲಕ ಅಸ್ಪಷ್ಟವಾಗಿ ಏನನ್ನು ಹೇಳಲು ನಾನು ಪ್ರಯತ್ನಿಸುತ್ತಿದೇನೋ ಆ ಸತ್ಯದ ವಿದ್ಯುದ್ದರ್ಶನವಾಗಿದೆ ನನಗೆ. ದಿನೇದಿನೇ ಆ ಸತ್ಯದ ದರ್ಶನ ನನಗೆ ಸ್ಪಷ್ಟತರವಾಗುತ್ತಿದೆ. ಆದುದರಿಂದ ಯಾವ ಸ್ವಾರ್ಥವೂ ಇಲ್ಲದ ಮುಕ್ತಮನಸ್ಸಿನ ಶಿಕ್ಷಣಪಂಡಿತರೆಲ್ಲರೂ ನಾನು ಕೊಟ್ಟಿರುವ ಎರಡು ಸೂಚನೆಗಳನ್ನು ಯೋಚಿಸಿ ನೋಡಲಿ, ಈಗಿನ ಶಿಕ್ಷಣದ ಬಗ್ಗೆ ತಮ್ಮ ಪೂರ್ವಗ್ರಹಗಳನ್ನು ತಮ್ಮ ಸ್ವತಂತ್ರ ತರ್ಕಕ್ಕೆ ಅಡ್ಡ ಒಡ್ಡದಿರಲಿ. ಸಾಂಪ್ರದಾಯಿಕ ಶಾಸ್ತ್ರೀಯ ದೃಷ್ಟಿಯಲ್ಲಿ ನನಗೆ ಶಿಕ್ಷಣಶಾಸ್ತ್ರ ಕಿಂಚಿತ್ತೂ ತಿಳಿಯದು ಎಂಬ ಮಾತು, ನಾನು ಬರೆದುದನ್ನು ಹೇಳಿದುದನ್ನು ಅವರು ಅಲ್ಲಗಳೆಯದಿರವಂತೆ ಮಾಡದಿರಲಿ. ಅನೇಕ ವೇಳೆ ವಿವೇಕದ ಮಾತು ಮಕ್ಕಳ ಬಾಯಲ್ಲಿ ಬರುತ್ತದೆ ಎನ್ನುತ್ತಾರೆ. ಇದು ಅತಿಶಯೋಕ್ತಿಯೇ ಆದರೂ ಒಮ್ಮೊಮ್ಮೆ ಮಕ್ಕಳ ಮಾತಿನಲ್ಲಿ ವಿವೇಕ ತುಂಬಿರುತ್ತದೆ. ತಜ್ಞರು ಅದಕ್ಕೆ ಒಪ್ಪ, ಬಣ್ಣ ಹಾಕುತ್ತಾರೆ, ಶಾಸ್ತ್ರೀಯ ಆಕಾರ ಕೊಡುತ್ತಾರೆ. ಆದುದರಿಂದ ನನ್ನ ಸೂಚನೆಯ ಗುಣಾವಗುಣಗಳನ್ನು ವಿಮರ್ಶಿಸಿ ಎನ್ನುತ್ತೇನೆ. ಹಿಂದೆ ಹೇಳಿದಂತೆಯೇ ಅಲ್ಲ, ಇದನ್ನು ಬರೆಯಿಸುತ್ತಿರುವ ಈ ಗಳಿಗೆಯಲ್ಲಿ ನನಗೆ ತೋಚಿದಂತೆ.

೧. ಏಳು ವರ್ಷ ಅಥವಾ ಹೆಚ್ಚು ಕಾಲದ ಪ್ರಾಥಮಿಕ ಶಿಕ್ಷಣ;

ಇಂಗ್ಲೀಷನ್ನು ಬಿಟ್ಟು, ಮಕ್ಕಳ ಮನಸ್ಸನ್ನು ವಿಕಾಸಗೊಳಿಸುವಂತೆ ಶಿಕ್ಷಣ ಮಾಧ್ಯಮವಾಗಿ ಮಾಡಿದ ಒಂದು ಉದ್ಯೋಗವನ್ನು ಸೇರಿಸಿ ಮೆಟ್ರಿಕ್ಯುಲೇಷನ್ ತರಗತಿಯ ಎಲ್ಲಾ ವಿಷಯಗಳನ್ನೂ ಕಲಿಸಬೇಕು. ಈಗಿನ ಪ್ರಾಥಮಿಕ ಮಾಧ್ಯಮಿಕ ಪ್ರೌಢಶಿಕ್ಷಣದ ಬದಲು ಇದು ಬರಬೇಕು.

೨. ಇಂಥ ಶಿಕ್ಷಣ ಒಟ್ಟಾರೆ ಸ್ವಾವಲಂಬಿಯಾಗಿರಬೇಕು; ಸ್ವಾವಲಂಬನವೆ (ವಾಸ್ತವಿಕತೆಯ) ಒರೆಗಲ್ಲು.[೪೨]

## ೭

## ಬೊಂಬಾಯಲ್ಲಿ ಪ್ರಾಥಮಿಕ ಶಿಕ್ಷಣ

ಪ್ರಾಥಮಿಕ ಶಿಕ್ಷಣದ ಚರ್ಚೆಯಲ್ಲಿ ಇದುವರೆಗೆ ನಾನು ಹಳ್ಳಿಗಳ ಮಾತನ್ನೇ ಆಡಿದೇನೆ. ಹಿಂದೂಸ್ತಾನದ ಜನತೆ ಹೆಚ್ಚಾಗಿ ಇರುವುದು ಹಳ್ಳಿಗಳಲ್ಲೇ. ಹಳ್ಳಿಗಳ ಪ್ರಶ್ನೆಯನ್ನು ಪರಿಣಾಮಕಾರಿಯಾಗಿ ಬಿಡಿಸಿದರೆ ಪಟ್ಟಣಗಳದೂ ಬಿಡುತ್ತದೆ. ಬೊಂಬಾಯಿ ನಗರದ ಪ್ರಾಥಮಿಕ ಶಿಕ್ಷಣದಲ್ಲಿ ಆಸಕ್ತಿಯುಳ್ಳ ಒಬ್ಬ ಗೆಳೆಯ ಹೀಗೆ ಪ್ರಶ್ನೆ ಎತ್ತಿದಾನೆ:

"ಪ್ರಾಥಮಿಕ ಶಿಕ್ಷಣಕ್ಕೆ ಹಣ ಒದಗಿಸುವ ಚಿಂತೆಯಲ್ಲಿದೆ ಕಾಂಗ್ರೆಸ್ ಮಂತ್ರಿಮಂಡಲ. ಪ್ರಾಥಮಿಕ ಶಿಕ್ಷಣವನ್ನು ಸ್ವಾವಲಂಬಿಯಾಗಿ ಮಾಡುವ ಮಾತೂ ಹುಟ್ಟಿದೆ. ಬೊಂಬಾಯಿಯಂಥ ನಗರದಲ್ಲಿ ಇದು ಸಾಧ್ಯವೆ, ಎಷ್ಟರ ಮಟ್ಟಿಗೆ? ಎಂಬುದನ್ನು ಆಲೋಚಿಸಬೇಕು. ಬೊಂಬಾಯಿ ಪೌರಸಭೆ ವಿದ್ಯಾಭ್ಯಾಸಕ್ಕಾಗಿ ೩೬ ಲಕ್ಷ ರೂಪಾಯಿ ವೆಚ್ಚ ಮಾಡುತ್ತದೆ. ಬಲಾತ್ಕಾರ ಪ್ರಾಥಮಿಕ ಶಿಕ್ಷಣವನ್ನು ರೂಢಿಗೆ ತಂದರೆ ಇನ್ನೂ ಲಕ್ಷಾಂತರ ರೂಪಾಯಿ ಬೇಕಾಗಬಹುದು. ಈಗ ಶಿಕ್ಷಕರ ಸಂಬಳಕ್ಕೆ ೨೦ ಲಕ್ಷ, ಬಾಡಿಗೆಗೆ ೪ ಲಕ್ಷ ಆಗುತ್ತಿದೆ. ಒಬ್ಬೊಬ್ಬ ಹುಡುಗನಿಗೆ ಸರಾಸರಿ ೪೦–೪೨ ರೂ. ವೆಚ್ಚ. ಉದ್ಯೋಗ ಶಿಕ್ಷಣದಲ್ಲಿ ಒಬ್ಬೊಬ್ಬ ಹುಡುಗ ಇಷ್ಟು ಗಳಿಸಬಲ್ಲನೇ? ಇಲ್ಲದಿದ್ದರೆ ಪ್ರಾಥಮಿಕ ಶಿಕ್ಷಣವನ್ನು ಸ್ವಾವಲಂಬಿ ಮಾಡುವುದಾದೀತೆ?"

ಪ್ರಾಥಮಿಕ ಹಂತದಲ್ಲಿ ಉದ್ಯೋಗ ಶಿಕ್ಷಣವನ್ನೇ ಅವಲಂಬಿಸಿದರೆ ಬೊಂಬಾಯಿ ನಗರಕ್ಕೂ ಲಾಭವೇ ಆದೀತು; ನನಗೆ ಸಂಶಯವಿಲ್ಲ. ಈಗ ಈ ಹುಡುಗರ ಪ್ರಾಥಮಿಕ ಶಿಕ್ಷಣದಿಂದ ಅವರಿಗೆ ಆಗುವ ಲಾಭವೇನೂ ಇಲ್ಲ; ನಾಗರಿಕರಾಗುವ ಯೋಗ್ಯತೆಯಂತೂ ಖಂಡಿತ ಬರುವುದಿಲ್ಲ.

ಪಟ್ಟಣಗಳಿಗೂ ಉದ್ಯೋಗ ಶಿಕ್ಷಣವನ್ನೇ ಅವಲಂಬಿಸಿ ಪ್ರಾಥಮಿಕ ಹಂತದಲ್ಲಿ ಎಂದು ನಿಸ್ಸಂಕೋಚವಾಗಿ ಹೇಳುತ್ತೇನೆ. ಈಗ ಅದಕ್ಕಾಗಿ ವೆಚ್ಚ

ವಾಗುತ್ತಿರುವ ೩೫ ಲಕ್ಷ ರೂಪಾಯಿಯಲ್ಲದಿದ್ದರೂ ಅದರಲ್ಲಿ ಹೆಚ್ಚು ಭಾಗ ಉಳಿತಾಯವಾಗುತ್ತದೆ. ವರ್ಷಕ್ಕೆ ನಲವತ್ತು ರೂಪಾಯಿ ಒಬ್ಬ ಹುಡುಗನಿಗೆ ಪ್ರಾಥಮಿಕ ಶಿಕ್ಷಣದ ವೆಚ್ಚ ಎಂದು ಹಿಡಿದರೆ, ಈಗ ಬೊಂಬಾಯಿ ಪೌರಸಭೆ ಮಾಡುತ್ತಿರುವ ವೆಚ್ಚದಲ್ಲಿ ೮೭,೫೦೦ ಮಂದಿ ಹುಡುಗರಿಗೆ ಶಿಕ್ಷಣ ಸಿಗುತ್ತಿದೆ ಎಂದು ಅರ್ಥ. ಬೊಂಬಾಯಿಯ ಜನಸಂಖ್ಯೆ ೧೦ ಲಕ್ಷ ಇರಬಹುದು. ಅದರಲ್ಲಿ ಶಾಲೆಗೆ ಹೋಗುವ ವಯಸ್ಸಿನ ಮಕ್ಕಳು ೧।। ಲಕ್ಷ ಆಗುತ್ತಾರೆ. ಎಂದರೆ ಈ ವಯಸ್ಸಿನ ೬೨,೦೦೦ ಮಕ್ಕಳಿಗೆ ಈಗ ಬೊಂಬಾಯಿ ನಗರದಲ್ಲಿ ಪ್ರಾಥಮಿಕ ಶಿಕ್ಷಣ ಸಿಗುತ್ತಿಲ್ಲ. ಸ್ವಂತವಾಗಿ ಮನೆಯಲ್ಲಿ ವಿದ್ಯಾಭ್ಯಾಸ ಮಾಡುವ ಮಕ್ಕಳು ಸುಮಾರು ೬,೦೦೦ ಎನ್ನೋಣ. ಉಳಿದ ೫೬,೦೦೦ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಸಿಗಲೇಬೇಕು. ಈಗಿನ ಲೆಕ್ಕದ ಪ್ರಕಾರ ಇದಕ್ಕೆ ೨೨,೪೦,೦೦೦ ರೂಪಾಯಿ ಬೇಕಾಗುತ್ತದೆ. ಈ ಜನ್ಮದಲ್ಲೇನೂ ಇದು ಸಾಧ್ಯವಿಲ್ಲ.

ಹಿಂದುಸ್ಥಾನದಲ್ಲಿ ಉಚಿತ, ಬಲಾತ್ಕಾರ ಪ್ರಾಥಮಿಕ ಶಿಕ್ಷಣ ಬರಬೇಕು ಎಂಬುದರಲ್ಲಿ ನನಗೆ ದೃಢವಾದ ನಂಬುಗೆ. ಈ ಗುರಿಯನ್ನು ಸಾಧಿಸಲು ಮಕ್ಕಳು ಮನಸ್ಸು, ಶರೀರ, ಆತ್ಮ ಶಕ್ತಿಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುವ ಒಂದು ಪ್ರಯೋಜನಕರ ಉದ್ಯೋಗವನ್ನು ಅವರಿಗೆ ಕಲಿಸಿದರೇನೇ ಸಾಧ್ಯ— ಎಂದು ನನ್ನ ಅಭಿಪ್ರಾಯ. ಶಿಕ್ಷಣದಲ್ಲಿ ಈ ರೂಪಾಯಿ, ಆಣೆ, ಕಾಸುಗಳ ಲೆಕ್ಕಾಚಾರವೆ, ಛ. ಎಂದು ಯಾರೂ ತಿಳಿಯಬಾರದು. ಹಣ ಕಾಸಿನ ಲೆಕ್ಕದಲ್ಲಿ ಹೀನವಾದುದೇನೂ ಇಲ್ಲ. ನಿಜವಾದ ಅರ್ಥಶಾಸ್ತ್ರ ಉಚ್ಚತರ ನೀತಿಗೆ ಅನುಗುಣವಾಗಿರಲೇಬೇಕು ; ಸತ್ಯವಾದ ನೀತಿಯೂ ಸಹ ನಿಜವಾದ ಅರ್ಥಶಾಸ್ತ್ರಕ್ಕೆ ಹೊಂದಿರಲೇಬೇಕು. ಧನಪಿಶಾಚದ ಪೂಜೆಯನ್ನು ಕಲಿಸಿ ದುರ್ಬಲರನ್ನು ಹಿಂಡಿ, ಗಾಣವಾಡಿ ಬಲಿಷ್ಠರು ಹಣ ಕೂಡಹಾಕುವಂತೆ ಮಾಡುವ ಅರ್ಥಶಾಸ್ತ್ರ ಅಸತ್ಯ. ಭಯಂಕರ ಶಾಸ್ತ್ರ, ಸಾವಿನ ಶಾಸ್ತ್ರ ಅದು. ನಿಜವಾದ ಅರ್ಥಶಾಸ್ತ್ರ ಸಾಮಾಜಿಕ ನ್ಯಾಯವನ್ನು ಸಾಧಿಸಬೇಕು ; ದುರ್ಬಲರಿಗೂ ಸಹ ಹಿತವನ್ನು ಮಾಡಬೇಕು. ಸತ್-ಜೀವನಕ್ಕೆ ಅದು ಅತ್ಯಗತ್ಯ. ಆದುದರಿಂದ ಬೊಂಬಾಯಿ ನಗರ ತನ್ನ ಮಕ್ಕಳಿಗೆ ಒಂದು ಲಾಭಕರ ಉದ್ಯೋಗವನ್ನು ಕಲಿಸಿ ಪ್ರಾಥಮಿಕ ಶಿಕ್ಷಣ ಸ್ವಾವಲಂಬಿಯಾಗುವಂತೆ ಮಾಡಿ, ಇಡೀ ದೇಶಕ್ಕೇ ಅತ್ಯುತ್ತಮ ಮೇಲ್ಪಂಕ್ತಿ ಹಾಕಲಿ ಎಂದು ಸೂಚಿಸುವ ಸಾಹಸ ಮಾಡುತ್ತೇನೆ. ಒಬ್ಬ ಹುಡುಗ ದಿನಕ್ಕೆ ನಾಲ್ಕು ಗಂಟೆ ಉದ್ಯೋಗ ಮಾಡಿದರೆ, ತಿಂಗಳಿಗೆ ೨೫

ದಿನ ಶಾಲೆ ಎಂದರೆ, ಗಂಟೆಗೆ ೬ ಕಾಸು ಸಂಪಾದನೆ ಎಂದು ಹಿಡಿದರೆ, ಪ್ರತಿಯೊಬ್ಬ ಹುಡುಗನೂ ಶಾಲೆಗೆ ೩-೨-೦ ರೂ. ತಿಂಗಳಿಗೆ ಗಳಿಸಿಕೊಡುತ್ತಾನೆ. ಈ ಉದ್ಯೋಗದ ಅಭ್ಯಾಸ ವಿದ್ಯಾರ್ಥಿಯ ಮನಸ್ಸನ್ನು ಚುರುಕುಗೊಳಿಸಿ ಹೊಸತನ ನೀಡಿ ಅವನ ಬುದ್ಧಿಯನ್ನು ಹೊರಹೊಮ್ಮಿಸಲು ಸಾಧಕವಾಗುತ್ತದೆ. ಶಾಲೆಗೆ ಸೇರಿದ ದಿನವೇ ಮಗು ಗಂಟೆಗೆ ೬ ಕಾಸು ಗಳಿಸದು. ಏಳು ವರ್ಷ ಅವಧಿ ಮುಗಿಯುವ ವೇಳೆಗೆ ಸರಾಸರಿ ಗಂಟೆಗೆ ೬ ಕಾಸಿನಂತೆ ಗಳಿಸಿರುತ್ತಾನೆ.

ಈ ಬಗೆಯ ಉದ್ಯೋಗಾಭ್ಯಾಸದಿಂದ ಶಿಕ್ಷಣ ನೀರಸವಾಗುತ್ತದೆ; ಮಕ್ಕಳ ಮನಸ್ಸು ಮುದುಡಿಕೊಂಡು ಬಿಡುತ್ತದೆ ಎಂಬುದು ಕೇವಲ ಅಂಧಾಭಿಪ್ರಾಯ. ನನ್ನ ಸಂತೋಷದ ಸವಿನೆನಪಿನಲ್ಲಿ ಕೆಲವು ಯೋಗ್ಯ ಶಿಕ್ಷಕರ ಬಳಿ ಉದ್ಯೋಗ ಶಿಕ್ಷಣ ಪಡೆಯುತ್ತಿದ್ದ ಮಕ್ಕಳ ಹರ್ಷೋಲ್ಲಾಸಪೂರ್ಣ ತೇಜೋವಂತ ಮುಖಗಳ ದೃಶ್ಯ. ಇದಕ್ಕೆ ವಿರುದ್ಧವಾಗಿ ಬಹಳ ಸ್ವಾರಸ್ಯವಾದ ವಿಷಯಗಳನ್ನು ಯೋಗ್ಯತೆಯಿಲ್ಲದ ಅಧ್ಯಾಪಕ ತಪ್ಪು ತಪ್ಪಾಗಿ ಕಲಿಸಿ, ಮಕ್ಕಳಿಗೆ ಬೇಸರ ಹಿಡಿಸಿದುದನ್ನೂ ನಾನು ಬಲ್ಲೆ. ಹಾಗಾದರೆ ಯೋಗ್ಯ ಶಿಕ್ಷಕರು ನಮಗೆ ಎಲ್ಲಿಂದ ಸಿಕ್ಕುತ್ತಾರೆ ಎಂದು ಕೇಳಬಹುದು. ಮನಸ್ಸಿದ್ದರೆ ಮಾದೇವ ಎಂದು ನನ್ನ ಉತ್ತರ. ನಮ್ಮ ಶಿಕ್ಷಣ ನೀತಿ ಪರಿವರ್ತಿತವಾಗಬೇಕು ಎಂದು ಗಮನಿಸಿದರೆ ಸುಲಭವಾಗಿಯೇ ಅದಕ್ಕೆ ದಾರಿ ಸಿಗುತ್ತದೆ. ಈಗಿನ ಶಿಕ್ಷಣಕ್ಕಾಗಿ ಮಾಡುವ ವೆಚ್ಚದಲ್ಲಿ ಒಂದು ಸ್ವಲ್ಪ ಭಾಗದಲ್ಲಿಯೇ ನಮಗೆ ಬೇಕಾದ ಉದ್ಯೋಗ ಶಿಕ್ಷಕರೆಲ್ಲರನ್ನೂ ತಯಾರು ಮಾಡಬಹುದು. ಬೊಂಬಾಯಿಯ ಶಿಕ್ಷಣ ಪಂಡಿತರಿಗೆ ಆಸಕ್ತಿಯಿದ್ದರೆ ಒಂದು ಸಮಿತಿಯನ್ನು ಮಾಡಿ ನಾನು ಸೂಚಿಸಿದ ಪ್ರಕಾರ ಪ್ರಾಥಮಿಕ ಶಿಕ್ಷಣದ ಯೋಜನೆಯೊಂದನ್ನು ಸಿದ್ಧಮಾಡಿ, ಕಾಲಹರಣ ಮಾಡದೆ ಅದನ್ನು ಪ್ರಾರಂಭಿಸಬೇಕು. ನನಗಿರುವಷ್ಟು ಸಚೇತನ ಶ್ರದ್ಧೆ ಅದರಲ್ಲಿ ಅವರಿಗೂ ಇರಬೇಕು. ಇಂಥ ಶ್ರದ್ಧೆ ಒಳಗಿನಿಂದ ಹರಿಯಬೇಕು; ಎಲ್ಲಿಂದಲೋ ಎತ್ತಿಕೊಂಡು ಬರಲು ಸಾಧ್ಯವಿಲ್ಲ. ಸಚೇತನ ಭಕ್ತಿ ಇಲ್ಲದೆ ಈ ಲೋಕದಲ್ಲಿ ಯಾವುದೂ ಮಹತ್ತರವಾದುದು ನಡೆದಿಲ್ಲ.

ಪಟ್ಟಣದ ಶಾಲೆಗಳಲ್ಲಿ ಮಕ್ಕಳಿಗೆ ಕಲಿಸಲು ತಕ್ಕ ಉದ್ಯೋಗಗಳು ಯಾವುವು? ಇದಕ್ಕೆ ಬಹಳ ಕಟ್ಟುನಿಟ್ಟಾದ ಸೂತ್ರವಿಲ್ಲ. ನನ್ನ ಉತ್ತರವಂತೂ ಸ್ಪಷ್ಟ: ನನಗೆ ಬೇಕಾದುದು ಹಳ್ಳಿಗಳ ಪುನರುದ್ಧಾರ. ಈಗ ನಮ್ಮ ಹಳ್ಳಿಗಳು ಪಟ್ಟಣಕ್ಕೆ ಬಾಲದಂತೆ ಇವೆ. ಪಟ್ಟಣಗಳ ಶೋಷಣೆಗೆ ಒಂದು ಕ್ಷೇತ್ರವಾಗಿ

ಇವೆ. ಇದು ಅಸಹಜ. ಹಳ್ಳಿಗಳಿಂದ ತಮಗೆ ಸಿಗುತ್ತಿರುವ ಶಕ್ತಿ ಸಾಮರ್ಥ್ಯ ಗಳಿಗೆ ಸರಿಯಾದ ಪ್ರತಿಫಲವನ್ನು ಅವಕ್ಕೆ ಕೊಟ್ಟು, ಅವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಬಾರದೆಂದು ಪಟ್ಟಣಗಳು ಅರಿತುಕೊಂಡಾಗಲೇ ಹಳ್ಳಿ-ಪಟ್ಟಣಗಳ ನಡುವೆ ಒಂದು ನೈತಿಕ, ಶುಭ ಸಂಬಂಧ ಬೆಳೆಯಬಲ್ಲದು. ಈ ಉಚ್ಚತರ, ಸಾಮಾಜಿಕ, ಪುನರ್ರಚನೆಯಲ್ಲಿ ಪಟ್ಟಣದ ಮಕ್ಕಳು ತಮ್ಮ ಪಾಲಿನ ಕರ್ತವ್ಯ ವನ್ನು ನಿರ್ವಹಿಸಬೇಕಾದರೆ ಅವರು ಯಾವ ಉದ್ಯೋಗಗಳ ಮೂಲಕ ಶಿಕ್ಷಣ ಪಡೆಯುತ್ತಾರೋ ಅವು ಹಳ್ಳಿಯ ಆವಶ್ಯಕತೆಗಳಿಗೆ ಸಂಬಂಧಿಸಿರಬೇಕು. ನನಗೆ ತಿಳಿದ ಮಟ್ಟಿಗೆ ಕಾಳು ಬಿಡಿಸುವುದು, ಹಸ ಮಾಡುವುದರಿಂದ ನೂಲುವುದರ ವರೆಗಿನ ಹತ್ತಿಯ ಉದ್ಯೋಗದ ಎಲ್ಲ ಕ್ರಿಯೆಗಳೂ ಈ ಒರೆಗಲ್ಲಿಗೆ ಸಮರ್ಪಕ ವಾಗುವಷ್ಟು ಮತ್ತಾವುದೂ ಆಗಲಾರದು. ಇಂದಿಗೂ ಹತ್ತಿ ಹಳ್ಳಿಯಲ್ಲಿ ಬೆಳೆಯುತ್ತದೆ. ಪಟ್ಟಣಗಳಲ್ಲಿ ಅದನ್ನು ಅರೆದು ನೂತು ಬಟ್ಟೆ ಮಾಡುತ್ತಾರೆ. ಆದರೆ ಗಿರಣಿಗಳಲ್ಲಿ ನಡೆಯುವ ಹತ್ತಿಯ ಉದ್ಯೋಗದ ಕ್ರಿಯೆಗಳೆಲ್ಲ ಮೊದಲಿ ನಿಂದ ಕಡೆಯವರೆಗೆ ಜನಬಲ, ಪದಾರ್ಥ, ಯಂತ್ರಬಲಗಳ ಅಪಾರ ವ್ಯರ್ಥತೆಯ ದುರಂತವೇ ಸರಿ.

ಆದುದರಿಂದ ಪ್ರಾಥಮಿಕ ಶಿಕ್ಷಣವನ್ನು ನೂಲುವುದು, ಹಿಂಜುವುದು ಮುಂತಾದ ಗ್ರಾಮೋದ್ಯೋಗಗಳ ಮೂಲಕ ಕೊಡುವ ನನ್ನ ಸೂಚನೆಯಲ್ಲಿ ಇದು ಬಹು ದೀರ್ಘ ಪರಿಣಾಮಕಾರಿಯಾದ ಸದ್ದಿಲ್ಲದ ಸಾಮಾಜಿಕ ಕ್ರಾಂತಿಯ ಅಲಗು ಆಗಬೇಕೆಂಬ ವಿಚಾರವಿದೆ. ಪಟ್ಟಣ–ಹಳ್ಳಿಗಳ ಸಂಬಂಧಕ್ಕೆ ಇದು ನೀತಿಯ ತಳಹದಿ ಹಾಕುತ್ತದೆ. ತನ್ಮೂಲಕ ಈಗಿನ ಸಾಮಾಜಿಕ ಅನಿಶ್ಚಿತತೆಯನ್ನೂ ವರ್ಗವಿರೋಧವನ್ನೂ ಬಹುಮಟ್ಟಿಗೆ ತಗ್ಗಿಸುತ್ತದೆ. ದಿನೇ ದಿನೇ ಕ್ಷೀಣಿ ಸುತ್ತಿರುವ ನಮ್ಮ ಗ್ರಾಮಗಳ ಸರ್ವನಾಶವನ್ನು ತಡೆಗಟ್ಟಿ, ಬಡವರು-ಬಲ್ಲಿದರೆಂಬ ಅಸ್ವಾಭಾವಿಕ ವರ್ಗಗಳಿಲ್ಲದ, ಎಲ್ಲರಿಗೂ ಬಾಳುಗೂಲಿ, ವ್ಯಕ್ತಿಸ್ವಾತಂತ್ರ್ಯ ಇರುವ, ನ್ಯಾಯಪೂರ್ಣ ಸಮಾಜವ್ಯವಸ್ಥೆಗೆ ಆಧಾರವನ್ನು ನಿರ್ಮಿಸುತ್ತದೆ. ನೆತ್ತರು ಹರಿಸುವ ವರ್ಗಯುದ್ಧದ ಘೋರ ಭೀಭತ್ಸವಾಗಲಿ ಭಾರತದಂಥ ವಿಶಾಲ ದೇಶ ವನ್ನು ಯಂತ್ರಮಯವಾಗಿಸಲು ಬೇಕಾದ ಹಣದ ವೆಚ್ಚವಾಗಲಿ ಇದರಲ್ಲಿಲ್ಲ. ಪರದೇಶದ ಯಂತ್ರ, ಪರದೇಶದ ತಂತ್ರಜ್ಞರು, ಯಾವುದನ್ನೂ ಅವಲಂಬಿಸಿ ಅಸಹಾಯರಾಗಬೇಕಾಗಿಲ್ಲ. ವಿಶೇಷ ಕೌಶಲದ ಅಗತ್ಯವಿಲ್ಲದಂತೆ ಮಾಡಿ ಜನತೆ ತಮ್ಮ ಭಾಗ್ಯಕ್ಕೆ ತಾವೇ ಕರ್ತರಾಗುವಂತೆ ಮಾಡುತ್ತದೆ. ಆದರೆ ಬೆಕ್ಕಿಗೆ ಗಂಟೆ

ಕಟ್ಟುವವರು ಯಾರು? ಪಟ್ಟಣಗಳ ಜನ ನನ್ನ ಮಾತನ್ನು ಕೇಳುತ್ತಾರೆಯೆ? ಅಥವಾ ನನ್ನ ಮಾತೆಲ್ಲ ಬರೀ ಅರಣ್ಯರೋದನವಾದೀತೆ? ಈ ಪ್ರಶ್ನೆಗಳಿಗೆ ಉತ್ತರ ನನ್ನನ್ನು ಅವಲಂಬಿಸಿಲ್ಲ, ಪಟ್ಟಣಗಳಲ್ಲಿರುವ ಈ ಪತ್ರದ ಲೇಖಕ ನಂಥವರನ್ನು.೪೩

## ೭
## ಸ್ವಾವಲಂಬನೆಯೇ ಒರೆಯಲ್ಲ

ಉದ್ಯೋಗದ ಮೂಲಕ ಶಿಕ್ಷಣದ ಬಗ್ಗೆ ಮಾತನಾಡುತ್ತ ಗಾಂಧೀಜೀ ಹೇಳಿದರು: 'ಇಂಥ ಶಿಕ್ಷಣವನ್ನು ಕೊಟ್ಟರೆ ಅದರ ಪರಿಣಾಮ ಸ್ವಾವಲಂಬನೆ. ಆದರೆ ಸ್ವಾವಲಂಬನೆಯಲ್ಲ ಅದರ ಜಯಭೇರಿ. ವಿಜ್ಞಾನರೀತ್ಯಾ ಕೈಗಾರಿಕೆ ಯನ್ನು ಕಲಿಸಿದರೆ ಪೂರ್ಣ ವ್ಯಕ್ತಿಯನ್ನು ವ್ಯಕ್ತಗೊಳಿಸುತ್ತದೆ; ಅದು ಒರೆ. ಹೇಗಾದರೂ ಮಾಡಿ ಸ್ವಾವಲಂಬಿಯಾಗಿ ಮಾಡುತ್ತೇನೆ ಎಂಬ ಶಿಕ್ಷಕ ನನಗೆ ಬೇಡ. ವಿದ್ಯಾರ್ಥಿ ತನ್ನ ಸಮಸ್ತ ಪ್ರವೃತ್ತಿಗಳನ್ನೂ ಉಪಯೋಗಿಸಲು ಕಲಿತಾಗ ಸ್ವಾವಲಂಬನೆ ತಾನೇ ಸಿದ್ಧಿಸುತ್ತದೆ; ಸಿದ್ಧಿಸಲೇಬೇಕು. ದಿನಕ್ಕೆ ಮೂರು ಗಂಟೆ ಕೈಗಾರಿಕೆ ಮಾಡುವ ಹುಡುಗ ತನ್ನ ನಿರ್ವಾಹ ಮಾಡಿಕೊಳ್ಳಬಲ್ಲನಾದರೆ, ಕೆಲಸಕ್ಕೆ ತನ್ನ ಮನಸ್ಸು ಆತ್ಮಗಳ ವಿಕಾಸವನ್ನೂ ಜೊತೆಗೂಡಿಸಿಕೊಂಡ ಹುಡುಗನ ಮಾತನ್ನು ಹೇಳಬೇಕೆ?'೪೪

## ೮
## ಸಿದ್ಧಾಂತಗಳು

ಮೂಲ ಶಿಕ್ಷಣ ದೇಶದ ವಾತಾವರಣದೊಳಗಿನಿಂದ ಮೂಡಿಬಂತು. ಆದುದರಿಂದ ಆ ವಾತಾವರಣಕ್ಕೆ ಅನುಗುಣವಾಗಿ ಅದು ರೂಪಿತವಾಗಿದೆ. ಭಾರತದ ಏಳು ಲಕ್ಷ ಹಳ್ಳಿಗಳಲ್ಲಿ, ಅದರ ಜನಕೋಟಿಯ ಬದುಕಿನಲ್ಲಿ ಆ ವಾತಾವರಣ ಹರಡಿದೆ. ಅವರನ್ನು ಮರೆತರೆ ಭಾರತವನ್ನೇ ಮರೆತಂತೆ. ಪಟ್ಟಣ ಗಳಲ್ಲಿಲ್ಲ ಹಿಂದುಸ್ತಾನ. ಈ ಅಸಂಖ್ಯ ಗ್ರಾಮಗಳಲ್ಲಿದೆ.

ಮೂಲ ಶಿಕ್ಷಣದ ತಳಸೂತ್ರಗಳು ಇವು:

೧. ಶಿಕ್ಷಣ ನಿಜವಾಗಿರಬೇಕೆಂದರೆ ಸ್ವಾವಲಂಬಿಯಾಗಿರಲೇಬೇಕು.

ಕಡೆಯಲ್ಲಿ ಅದರ ವೆಚ್ಚವೆಲ್ಲ ತಿರುಗಿಬಂದಿರಬೇಕು. ಮೂಲಧನಕ್ಕೆ ಚ್ಯುತಿ ಬರಬಾರದು.

೨. ಇದರಲ್ಲಿ ಹಸ್ತ ಕೌಶಲವನ್ನು ಕಡೆಯವರೆಗೂ ಉಪಯೋಗಿಸುತ್ತಾರೆ. ದಿನವೂ ಸ್ವಲ್ಪಹೊತ್ತು ವಿದ್ಯಾರ್ಥಿಗಳ ಕೈಗಳು ಯಾವುದಾದರೊಂದು ಕೈಗಾರಿಕೆಯನ್ನು ಕುಶಲತೆಯಿಂದ ಮಾಡುತ್ತಲೇ ಇರುತ್ತವೆ.

೩. ಸಮಸ್ತ ಶಿಕ್ಷಣವೂ ಪ್ರಾಂತಭಾಷೆಯ ಮೂಲಕ ನಡೆಯಬೇಕು.

೪. ಇದರಲ್ಲಿ ಮತೀಯ ಶಿಕ್ಷಣಕ್ಕೆ ಎಡೆಯಿಲ್ಲ. ಸರ್ವ ಸಮ್ಮತವಾದ ಮೂಲ ನೀತಿಧರ್ಮಕ್ಕೆ ಪೂರ್ಣಾವಕಾಶ.

೫. ಮಕ್ಕಳಿಗೋ ವಯಸ್ಕರಿಗೋ, ಗಂಡಸರಿಗೋ ಹೆಂಗಸರಿಗೋ ಯಾರಿಗೇ ಕೊಡಲಿ ಈ ಶಿಕ್ಷಣವನ್ನು ಅದು ವಿದ್ಯಾರ್ಥಿಗಳ ಮನೆಯೊಳಗೆ ಹೊಗುತ್ತದೆ.

೬. ಈ ಶಿಕ್ಷಣ ಪಡೆದ ಕೋಟ್ಯಂತರ ವಿದ್ಯಾರ್ಥಿಗಳು ಇಡೀ ಭಾರತದವರು ತಾವು ಎಂದು ತಿಳಿಯುತ್ತಾರೆ. ಆದುದರಿಂದ ಒಂದು ಅಂತರ-ಪ್ರಾಂತೀಯ ಭಾಷೆಯನ್ನು ಕಲಿಯುತ್ತಾರೆ. ಎಲ್ಲರಿಗೂ ಸಮಾನವಾದ ಅಂತರ-ಪ್ರಾಂತೀಯ ಭಾಷೆ ನಾಗರಿ ಅಥವಾ ಉರ್ದು ಲಿಪಿಗಳ ಹಿಂದುಸ್ತಾನಿ ಭಾಷೆ. ಆದುದರಿಂದ ವಿದ್ಯಾರ್ಥಿಗಳು ಎರಡೂ ಲಿಪಿಗಳನ್ನೂ ಕಲಿಯಬೇಕು.[೪೫]

## ಅಧ್ಯಾಯ ೫

★

# ವಿಮರ್ಶೆ-ವಿವರಣೆ

## ೧

## ಪರವಾಗಿ

‘ ಮಗುವಿಗೆ ಒಂದು ಪ್ರಯೋಜನಕರವಾದ ಕೈಗೆಲಸವನ್ನು ಶಾಸ್ತ್ರೀಯವಾಗಿ, ಸಂಸ್ಕೃತಿ ಸಮೇತವಾಗಿ ಕಲಿಸಿ, ಶಿಕ್ಷಣವನ್ನು ಮೊದಲಿಟ್ಟಾಗಿನಿಂದಲೂ ಮಗು ಉತ್ಪಾದನಾ ಸಮರ್ಥವಾಗುವಂತೆ ಮಾಡಬೇಕು—ಎಂಬ ನಿಮ್ಮ ಸೂಚನೆ ನನಗೆ ಮಾನ್ಯ. ಇದು ಕ್ರಾಂತಿಕಾರಿ ಪ್ರತಿಪಾದನೆಯೇ ನಿಜ. ಆದರೂ ನನಗೆ ಅದು ಸಂಪೂರ್ಣ ಸಮ್ಮತ. ವ್ಯಕ್ತಿಗೂ ರಾಷ್ಟ್ರಕ್ಕೂ ಇದರ ನೈತಿಕ, ಸಾಂಸ್ಕೃತಿಕ, ಆರ್ಥಿಕ ಬೆಲೆ ಅಪಾರ. ಇದರಿಂದ ಶ್ರಮದ ಗೌರವ ಪ್ರತಿಷ್ಠೆಯೇ ಅಲ್ಲ, ಸ್ವಾವಲಂಬನೆಯೂ ಜೀವನದ ಸೃಷ್ಟಿಶಕ್ತಿಗಳೂ ಮೂಡುತ್ತವೆ. ಮಗುವಿನ ಬೌದ್ಧಿಕ, ಶಾರೀರಕ, ನೈತಿಕ, ಔದ್ಯೋಗಿಕ ಅವಶ್ಯಕತೆಗಳನ್ನು ಪೂರೈಸುವುದು ನಮ್ಮ ಗುರಿಯಾಗಬೇಕು. ಕೊನೆಗೆ ಹೇಳಿದ ಔದ್ಯೋಗಿಕ ಶಿಕ್ಷಣ ಉತ್ಪಾದನೆಯ ಸಮಸ್ತ ಪ್ರಕ್ರಿಯೆಗಳನ್ನೂ ತಿಳಿಸಿ, ಅದರ ಜತೆಗೆ ಅದೇ ಸಮಯದಲ್ಲಿ ಎಲ್ಲ ಉದ್ಯೋಗಗಳ ಉಪಕರಣಗಳನ್ನೂ ಬಳಸುವ ವಿಧಾನವನ್ನು ಕಲಿಸಬೇಕು. ವಿಷಯಜ್ಞಾನ, ವಸ್ತುನಿರ್ಮಾಣ ಎರಡೂ ಬೆರೆಯಬೇಕು ಶಿಕ್ಷಣದಲ್ಲಿ. ಕೈಕೆಲಸ, ಬಾಯಿಪಾಠ ಎರಡನ್ನೂ ಸಮನ್ವಯ ಮಾಡಿ ಕೈಕೆಲಸ ಯಾವ ಉದ್ಯೋಗಕ್ಕೆ ಹೊಂದಿಕೊಳ್ಳುತ್ತದೋ ಅದರ ಸ್ಥೂಲ ಪರಿಚಯ ಮಾಡಿಕೊಡಬೇಕು. ಬೌದ್ಧಿಕ, ನೈತಿಕ ಪ್ರಯತ್ನಸಹಿತವಾದ ಶರೀರ ಶ್ರಮ ನಮ್ಮ ಶಿಕ್ಷಣದ ಧೋರಣೆಯಾಗಬೇಕು. ಬುದ್ಧಿಯ ಕೆಲಸಕ್ಕೂ, ಕೈಕೆಲಸಕ್ಕೂ ನಡುವೆ ಒಡಕು ತರಬಾರದು.

‘ ನಮ್ಮ ಪ್ರಾಥಮಿಕ ಶಿಕ್ಷಣದಲ್ಲಿ ಇವು ಇರಬೇಕು :

೧. ತಾಯಿನುಡಿ
೨. ಅಂಕಗಣಿತ
೩. ಪ್ರಕೃತಿ ವಿಜ್ಞಾನ
೪. ಸಮಾಜ ವಿಜ್ಞಾನ.
೫. ಭೂಗೋಳ, ಇತಿಹಾಸ
೬. ಕೈಗೆಲಸ ಅಥವಾ ವಿವಿಧ ಕಲಾಶಾಲೆ

೭. ಶರೀರ ಶಿಕ್ಷಣ
೮. ಕಲೆ, ಸಂಗೀತ
೯. ಹಿಂದೂಸ್ತಾನಿ

'ಇಲ್ಲಿ ಹುಟ್ಟುವ ಒಂದೇ ಪ್ರಶ್ನೆ ಮಕ್ಕಳಿಗೆ ಯಾವ ವಯಸ್ಸಿನಲ್ಲಿ ಶಿಕ್ಷಣ ಮೊದಲಾಗಬೇಕು? ೫-೬ನೆಯ ವಯಸ್ಸಿನಲ್ಲಿ ಪ್ರಾರಂಭಿಸಿದರೆ ಆಗ ಕೈಗಾರಿಕೆ ಕಲಿಸಲು ಸಾಧ್ಯವೆ? ಕಲಿಸುವ ವೆಚ್ಚ ಎಷ್ಟು? ಅಕ್ಷರಶಿಕ್ಷಣಕ್ಕಿಂತ ಸುಲಭವೂ ಅಲ್ಲ, ವೆಚ್ಚ ಕಡಮೆಯೂ ಅಲ್ಲ. ೮-೧೦ನೆಯ ವಯಸ್ಸಿನಲ್ಲಿ ಕೈಗಾರಿಕೆಯನ್ನು ನಾನು ಮೊದಲಿಸುತ್ತೇನೆ. ಉಪಕರಣಗಳನ್ನು ಬಳಸಲು ತಕ್ಕ ದಾರ್ಢ್ಯ, ಸ್ಥಿರತೆ ಬೇಕಷ್ಟೆ. ಆದರೆ ಪ್ರಾಥಮಿಕ ಶಿಕ್ಷಣವೇನೋ ೫-೬ನೆಯ ವಯಸ್ಸಿಗೆ ಮೊದಲಾಗಬೇಕು. ಮಗುವನ್ನು ಕಾಯಿಸಲಾಗದು.

'ಮೆಟ್ರಿಕ್ಯುಲೇಶನ್ ಮಟ್ಟಕ್ಕೆ ಮಗುವನ್ನು ಒಯ್ಯಲು ಈ ಉದ್ಯೋಗ ಶಿಕ್ಷಣದ ಜತೆಗೆ ಹತ್ತು ವರ್ಷದ ಪಾಠಕ್ರಮ ಒಂದು ಬೇಕು. ಪ್ರಾರಂಭಕಾಲದಲ್ಲಿ ಮಕ್ಕಳ ಉತ್ಪಾದನೆಗೆ ಬೆಲೆ ದೊರೆಯುವುದು ಸಂದೇಹಾಸ್ಪದ. ಸ್ವತಂತ್ರ ವಾಣಿಜ್ಯ ಪ್ರಗತಿಪರ ರೀತಿಗಳು ಇರುವ ದೇಶದಲ್ಲಿ ಹುಡುಗರು ಮಾಡಿದ ವಸ್ತುಗಳು ಮಾರಾಟವಾಗಲಾರವು. ಇವು ಬಾಳಿಕೆ ಬರುವುದೂ ಇಲ್ಲ, ನಯವಾಗಿರುವುದೂ ಇಲ್ಲ. ಸರಕಾರ ತಾನು ಕೊಟ್ಟ ಸಹಾಯಕ್ಕೆ ಬದಲಾಗಿ ಇವನ್ನು ತೆಗೆದುಕೊಂಡು ಏನು ಮಾಡಬೇಕು? ಈ ಪದ್ಧತಿಗಿಂತ ಶಿಕ್ಷಣಕ್ಕಾಗಿಯೇ ನೇರಾಗಿ ಹಣವನ್ನು ಕೊಡುವುದು ಒಳ್ಳೆಯದು. ಹನ್ನೆರಡರ ಮೇಲಿನ ಹುಡುಗರು ಮಾಡಿದ ಪದಾರ್ಥಗಳು ಮಾರಿಹೋಗಬಲ್ಲವು. ಅವು ವರಮಾನದ ಒಂದು ಮುಖ್ಯ ಅಂಶವೇ ಸರಿ.

'ಅಕ್ಷರಶಿಕ್ಷಣದ ಸಮಸ್ಯೆಯನ್ನು ನಾನು ಬೇರೆ ರೀತಿಯಲ್ಲಿಯೇ ಬಿಡಿಸುತ್ತೇನೆ. ಅದಕ್ಕೆ ಆಗತ್ಯವಾದ ವೆಚ್ಚ, ತೆರಿಗೆಗಳನ್ನು ಧೈರ್ಯವಾಗಿ ಪ್ರತಿಪಾದಿಸುತ್ತೇನೆ.

'ಉಪಯೋಗಕರವಾದ ಒಂದು ಕೈಗಾರಿಕೆಯ ವಿಚಾರವನ್ನು ಪ್ರಾಥಮಿಕ ಶಿಕ್ಷಣದ ಮೇಲಿನ ಹಂತದಲ್ಲಿ ಚೆನ್ನಾಗಿ ವೃದ್ಧಿಗೊಳಿಸಬಹುದು. ಸ್ವಲ್ಪಮಟ್ಟಿಗೆ ಸ್ವಾವಲಂಬನವನ್ನು ಸಾಧಿಸಿ, ಆ ಅನುಭವದಿಂದ ಪೂರ್ಣ ಸ್ವಾವಲಂಬನದ ಪ್ರಯತ್ನ ಮಾಡಬಹುದು. ಆದರೆ ದೇಹ, ಮನಸ್ಸು, ಆತ್ಮಗಳ ಸಾಂಸ್ಕೃತಿಕ ಶಿಕ್ಷಣವೆಲ್ಲ ಆರ್ಥಿಕ ಉದ್ದೇಶಕ್ಕೆ, ಶಾಲೆಯ ಹಣಕಾಸಿನ ಲೆಕ್ಕಕ್ಕೆ ಅಧೀನವಾಗುವಂತೆ ಮಾಡುವ ಅಪಾಯವಿದೆ. ಹಾಗಾಗದಂತೆ ಎಚ್ಚರವಾಗಿರಬೇಕು.

'ಪ್ರಾಥಮಿಕ ಶಿಕ್ಷಣ ಇಂಗ್ಲೀಷು ಬಿಟ್ಟು, ಹಿಂದೂಸ್ತಾನಿ ಸೇರಿಸಿ (ನಾನು ಇದನ್ನು ಸೇರಿಸುತ್ತೇನೆ), ಮೆಟ್ರಿಕ್ಯುಲೇಷನ್ ಮಟ್ಟಕ್ಕೆ ಸಮವಾಗಬೇಕು. ನಿಮ್ಮ ಈ ಸೂಚನೆ ನನಗೆ ಸಮ್ಮತ. ಪ್ರೌಢಶಿಕ್ಷಣವನ್ನೂ ಇದರಲ್ಲಿಯೇ ಸೇರಿಸಿದ ಹಾಗಾಯಿತು. ನಿಮ್ಮ ವಿಚಾರ ಒಟ್ಟು ಹತ್ತು ವರ್ಷದ ಪೂರ್ತಾ ಶಾಲಾ ಶಿಕ್ಷಣ. ಇದನ್ನು ತಾಯಿನುಡಿಯ ಮೂಲಕವೇ ಕಲಿಸಬೇಕು, ಬೇರೆ ಯಾವ ನುಡಿಯ ಮೂಲಕವೂ

ಅಲ್ಲ ಎಂದು ನಾನು ಸೇರಿಸುತ್ತೇನೆ. ಇದರಿಂದ ಮಗುವಿನ ಮನಸ್ಸು ಮುಕ್ತವಾಗಿ ಜ್ಞಾನ-ಜೀವನಗಳ ಸಮಸ್ಯೆಗಳಲ್ಲಿ ಅದಕ್ಕೆ ಉತ್ಸಾಹ ಆಸಕ್ತಿಗಳು ಹುಟ್ಟಿ, ರಚನಾತ್ಮಕ ದೃಷ್ಟಿ, ಸ್ವಭಾವ ಬರುತ್ತದೆ.

'ಮಧ್ಯಕಾಲದಲ್ಲಿ ಶಿಕ್ಷಣ ಬಹಳ ಮಟ್ಟಿಗೆ ಸ್ವಾವಲಂಬಿಯಾಗಿತ್ತು. ನಿಜ. ಈಗಲೂ ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ ರಚನೆ ಮಧ್ಯಕಾಲದುದೇ ಆಗಿದ್ದರೆ ಹಾಗೆಯೇ ಮಾಡಬಹುದು. ಹಿಂದಿನ ಜಾತಿ ಮತಗಳ ಸಾಮಾಜಿಕ ಸಂಕುಚಿತ ಧೋರಣೆಯೇ ಮುಂದುವರಿಯಬೇಕಾದೀತು. ಈಗ ರಾಷ್ಟ್ರೀಯ, ಸಮಾಜವಾದೀ, ಪ್ರಜಾಪ್ರಭುತ್ವದ ಕಾಲ. ಈಗ ಅದು ಸಾಧ್ಯವಿಲ್ಲ. ಈಗ ಸಮಾಜದ ಸರ್ವಶಕ್ತಿಯೂ ಅಧಿಕಾರವೂ ರಾಜ್ಯದಲ್ಲಿ ಸಂಘಟಿತವಾಗಿದೆ. ಆದುದರಿಂದ ರಾಜ್ಯವೇ ಈ ಕೆಲಸ ಮಾಡಬೇಕು. ಜಾತಿ, ಶ್ರೇಣಿ, ವರ್ಗ, ಗುರುಕುಲ, ಮಠಗಳಿಗೆ ಹಿಂದೆ ಇದ್ದ ಅಧಿಕಾರ, ಗೌರವ, ಅವಕಾಶ, ಆಗಿನ ಹಾಗೆ ಈಗ ಇಲ್ಲ. ಜನರಿಗೆ ಅವುಗಳಲ್ಲಿ ವಿಶ್ವಾಸವೂ ಇಲ್ಲ, ಹಿಂದೂಸ್ಥಾನದಲ್ಲಿಯೂ ಕೂಡ ರಾಜಕೀಯ ಗುಂಪಿಗೆ ಅಧಿಕಾರ ಬಂದರೆ, ಆರ್ಥಿಕ, ಸಾಮಾಜಿಕ ಶಕ್ತಿಯೂ ಅದಕ್ಕೇ. ಆದುದರಿಂದ ಒಂದು ಮಧ್ಯಯುಗೀನ-ಇನ್ನೊಂದು ಆಧುನಿಕ. ಒಂದು ಸರ್ವಸಮಗ್ರ-ಇನ್ನೊಂದು ಏಕಾಂಗೀ ವಿಶಿಷ್ಟ, ಒಂದು ಸಾರ್ವತ್ರಿಕ-ಒಂದು ಪ್ರಾದೇಶಿಕ. ಹೀಗೆ ಎರಡು ವಿಚಾರಸರಣಿ ಏಕಕಾಲದಲ್ಲಿ ನಡೆಯಲು ಸಾಧ್ಯವಿಲ್ಲ.

'ಹಿಂದಿನ ಕಾಲದಲ್ಲಿ ಸಾರ್ವತ್ರಿಕ ಶಿಕ್ಷಣ ಇರಲಿಲ್ಲ. ಸಾರ್ವಭೌಮ ಪ್ರಜಾರಾಜ್ಯ, ರಾಷ್ಟ್ರೀಯ ಸಮಾಜವಾದೀ ದೃಷ್ಟಿ ಇರಲಿಲ್ಲ.'

'ಶಿಕ್ಷಣದ ಕೆಲಸ ಮಾಡಲು ತರುಣರನ್ನು ಬಲಾತ್ಕಾರ ಮಾಡುವುದು ಹೊಸ ವಿಚಾರವಲ್ಲ. ಆದರೆ ಅನುಸರಣೀಯ. ಜನತೆಯ ಶಿಕ್ಷಣದಲ್ಲಿ ಆಸಕ್ತಿ ಇರುವವರೆಲ್ಲರನ್ನೂ ಸಂಸ್ಕೃತಿ, ಶಿಕ್ಷಣ, ಅಕ್ಷರ ವಿದ್ಯೆಗಳ ಪ್ರಚಾರದಲ್ಲಿ ಸರಕಾರಕ್ಕೆ ನೆರವಾಗಬೇಕೆಂದು ಮಂತ್ರಿಗಳು ಪ್ರಾರ್ಥಿಸಲಿ. ಆದರಿಂದ ಹೊಸಬಗೆಯ ಜನತಾ ಸಂಪರ್ಕವಾದೀತು, ಜನಶಕ್ತಿಯನ್ನು ಜನರ ಬುದ್ಧಿಬಲವನ್ನು ಎಚ್ಚರಗೊಳಿಸಿ ಸಂಘಟಿಸುವ ಅತ್ಯುತ್ತಮ ಕೆಲಸವೂ ಇದರಿಂದ ಆದೀತು.'

ನಾನು ಮೊಟ್ಟಮೊದಲು ಉದ್ಯೋಗದ ಮೂಲಕ ಸ್ವಾವಲಂಬೀ ಪ್ರಾಥಮಿಕ ಶಿಕ್ಷಣದ ಬಗ್ಗೆ ಬರೆದಾಗ ಸಹೋದ್ಯೋಗಿಗಳಾದ ಶಿಕ್ಷಣ ಪಂಡಿತರನ್ನು ಅಭಿಪ್ರಾಯ ಕೊಡಲು ಬೇಡಿದ್ದೆ. ಹಾಗೆ ಅಭಿಪ್ರಾಯವನ್ನು ಕಳಿಸಿದ ಮೊದಲಿಗರಲ್ಲಿ ಪ್ರೊ. ಎಸ್. ವಿ. ಪುಣತಾಂಬೇಕರ್ ಒಬ್ಬರು. ಅವರು ದೀರ್ಘವಾದ ತರ್ಕಬದ್ಧ ಪತ್ರವನ್ನು ಬರೆದಿದ್ದರು. ಸ್ಥಳಾಭಾವದಿಂದ ಅದನ್ನು ಇದುವರೆಗೆ ಮುಟ್ಟಲಿಲ್ಲ. ಮೇಲೆ ಕೊಟ್ಟಿರುವುದು ಅವರ ಅಭಿಪ್ರಾಯದ ಬಹಳ ಮುಖ್ಯ ಭಾಗ. ಅದರಲ್ಲಿ ಅಕ್ಷರ ಶಿಕ್ಷಣ, ಕಾಲೇಜು ಶಿಕ್ಷಣಗಳ ಬಗ್ಗೆ ಇದ್ದುದನ್ನು ಸ್ಥಳಾ

ಭಾವದಿಂದ ತಗೆದು ಹಾಕಿದ್ದೇನೆ. ಅಲ್ಲದೆ ನಾಳೆ ೨೨–೨೩ ರಲ್ಲಿ ಸೇರುವ ಸಮ್ಮೇಳನದಲ್ಲಿ ಕೈಗಾರಿಕೆಯ ಮೂಲಕ ನಡೆವ ಸ್ವಾವಲಂಬಿ ಪ್ರಾಥಮಿಕ ಶಿಕ್ಷಣವೇ ಚರ್ಚೆಯ ಪ್ರಧಾನಾಂಶ.೪೬

## ೨

## ಕೆಲವು ಟೀಕೆಗಳಿಗೆ ಉತ್ತರ

ಅಪರಿಚಿತರಾಗಿ ಇರಬಯಸುವ ಒಬ್ಬ ಉನ್ನತ ಶಿಕ್ಷಣಾಧಿಕಾರಿಗಳು ಗೆಳೆಯರೊಬ್ಬರ ಮೂಲಕ ನನ್ನ ಪ್ರಾಥಮಿಕ ಶಿಕ್ಷಣ ಯೋಜನೆಯ ಬಗ್ಗೆ ವಿಚಾರ ಪೂರ್ಣ ಸುದೀರ್ಘ ವಿಮರ್ಶೆಯನ್ನು ಕಳಿಸಿದಾರೆ. ಸ್ಥಳಸಂಕೋಚದಿಂದ ಅದನ್ನೆಲ್ಲ ಇಲ್ಲಿ ಕೊಡಲಾರೆ. ಆದರೂ ಆತ ಪಟ್ಟಿರುವ ಕಷ್ಟಕ್ಕೆ ಉತ್ತರ ಕೊಡಬೇಕಾದುದು ಅಗತ್ಯ.

ಆತ ನನ್ನ ಸೂಚನೆಗಳನ್ನು ಹೀಗೆ ಸಂಗ್ರಹಿಸಿದಾರೆ: (i) ಪ್ರಾಥಮಿಕ ಶಿಕ್ಷಣದಲ್ಲಿ, ಕೈಗಾರಿಕೆ, ಉದ್ಯೋಗಗಳನ್ನು ಕಲಿಯಬೇಕು. ಅದೇ ಅದರ ಗುರಿ. ಉಳಿದ ಸಾಮಾನ್ಯ ಜ್ಞಾನವೆಲ್ಲ ಇದಕ್ಕೆ ಪೂರಕವಾಗಿ ಪ್ರಾರಂಭದಲ್ಲಿ ಬರಬೇಕು. ಇತಿಹಾಸ, ಭೂಗೋಳ, ಗಣಿತಗಳ ಓದು ಬರೆಹದ ಶಿಕ್ಷಣ ಕಟ್ಟ ಕಡೆಯಲ್ಲಿ ಬರಬೇಕು. (ii) ಮೊದಲಿನಿಂದಲೂ ಪ್ರಾಥಮಿಕ ಶಿಕ್ಷಣ ಸ್ವಾವಲಂಬಿಯಾಗಿರಬೇಕು. ಶಾಲೆಗಳಲ್ಲಿ ಉತ್ಪತ್ತಿಯಾದ ವಸ್ತುಗಳನ್ನು ಸರಕಾರವೇ ಕೊಂಡು ಜನರಿಗೆ ಮಾರಿದರೆ ಮಾತ್ರ ಇದು ಸಾಧ್ಯ. (iii) ಪ್ರಾಥಮಿಕ ಶಿಕ್ಷಣ ಮೆಟ್ರಿಕ್ಯುಲೇಷನ್ ಮಟ್ಟದ್ದಾಗಬೇಕು–ಇಂಗ್ಲೀಷು ಬಿಟ್ಟು. (iv) ಪ್ರೊ. ಕೆ. ಟಿ. ಷಾ ಅವರು ಹೇಳಿದಂತೆ ಪ್ರಾಥಮಿಕ ಶಾಲೆಗಳಲ್ಲಿ ಕಲಿಸಲು ಯುವಕ ಯುವತಿಯರನ್ನು ಕಡ್ಡಾಯ ಮಾಡುವ ವಿಚಾರವನ್ನು ಪರಿಶೀಲಿಸಿ, ಸಾಧ್ಯವಾದರೆ ಅದರಂತೆ ಮಾಡುವುದು."

ಒಡನೆಯೆ ಹೀಗನ್ನುತ್ತಾನೆ ಆತ : 'ಮೇಲಿನ ಕಾರ್ಯಕ್ರಮವನ್ನು ಪರಿಶೀಲಿಸಿದರೆ, ಇದರಲ್ಲಿ ಕೆಲವು ವಿಚಾರ ಮಧ್ಯಯುಗದ್ದು, ಕೆಲವು ವಿಚಾರ ತರ್ಕಸಾಧ್ಯವಲ್ಲದ ಬರೀ ಕಲ್ಪನೆ, (iii)ನೆ ವಿಚಾರ ಬಹಳ ಹೆಚ್ಚಿನ ಮಟ್ಟದ್ದು ಎನಿಸುತ್ತದೆ.'

ನನ್ನ ಸೂಚನೆಗಳನ್ನು ಸಂಗ್ರಹಿಸದೆ, ನಾನು ಹೇಳಿದುದನ್ನು ಹೇಳಿದಂತೆಯೇ ಬರೆದಿದ್ದರೆ ಚೆನ್ನಾಗಿತ್ತು. ಮೊದಲಿನ ವಾಕ್ಯದಲ್ಲಿ ಆತ ಹೇಳಿರುವುದು

ಸತ್ಯಕ್ಕೆ ದೂರ. ಉದ್ಯೋಗದಿಂದ ಮೊದಲಿಟ್ಟು ಉಳಿದುದನ್ನೆಲ್ಲ ಪೂರಕವಾಗಿ ಆಮೇಲೆ ತರಬೇಕು ಎಂಬುದಲ್ಲ ನನ್ನ ವಾದ. ಮೇಲೆ ಹೇಳಿದುದಕ್ಕೆ ವಿರುದ್ಧವಾಗಿ ಸಮಸ್ತ ಶಿಕ್ಷಣವೂ ಕೈಗಾರಿಕೆಯ ಮೂಲಕ, ಅದರ ಜತೆಗೇ ಬರಬೇಕು ಎಂದು ನಾನು ಹೇಳಿದೇನೆ. ಈ ಲೇಖಕ ಹೇಳುವುದೇ ಬೇರೆ, ಇದೇ ಬೇರೆ. ಮಧ್ಯ ಯುಗದಲ್ಲಿ ಏನಾಯಿತೋ ನಾನರಿಯೆ. ಇಷ್ಟು ಗೊತ್ತು. ಮಧ್ಯಯುಗದಲ್ಲಾಗಲಿ ಯಾವ ಯುಗದಲ್ಲಾಗಲಿ, ಕೈಗಾರಿಕೆಯ ಮೂಲಕ ಮನುಷ್ಯನ ಪೂರ್ಣ ವ್ಯಕ್ತಿತ್ವವನ್ನು ಬೆಳೆಸುವ ಗುರಿ ಇರಲಿಲ್ಲ. ಈ ವಿಚಾರ ಹೊಸದು, ಸ್ವತಂತ್ರ. ಇದು ಹುಸಿ ಹೋಗಬಹುದು ಎಂದ ಮಾತ್ರಕ್ಕೆ ಇದರ ಹೊಸತನ ಕಡಿಮೆ ಯಾಗದು. ವಿಸ್ತಾರ ಪ್ರಮಾಣದಲ್ಲಿ ಪ್ರಯೋಗ ಮಾಡಿ ನೋಡದೆ ಸ್ವತಂತ್ರ ವಿಚಾರವನ್ನು ಏಕಾಏಕಿ ತಿರಸ್ಕರಿಸುವಂತಿಲ್ಲ. ಇದು ಅಸಾಧ್ಯ ಎಂದು ಮೊದಲೇ ಹೇಳುವುದು ತರ್ಕಬದ್ಧವಲ್ಲ.

ಓದುಬರಹದ ಶಿಕ್ಷಣ ಕಟ್ಟಕಡೆಯಲ್ಲಿ ಬರಬೇಕು ಎಂದು ನಾನು ಹೇಳಿಲ್ಲ. ಈ ಶಿಕ್ಷಣ ಮೊಟ್ಟಮೊದಲೇ ಬರುತ್ತದೆ. ಸಾಮಾನ್ಯ ತರಬೇತಿನಲ್ಲಿ ಇದು ಒಂದು ಮುಖ್ಯ ಅಂಗ. ಓದುವುದು ಸ್ವಲ್ಪ ತಡವಾಗಿ ಬರಲಿ, ಬರೆಯುವುದು ಕೊನೆಗೆ ಬರಲಿ ಎಂದು ನಾನು ಹೇಳಿದುದುಂಟು ಮತ್ತೆ ಇಲ್ಲಿ ಹೇಳುತ್ತೇನೆ. ಆದರೆ ಈ ಕ್ರಿಯೆಯೆಲ್ಲವೂ ಮೊದಲನೆಯ ವರ್ಷದಲ್ಲಿಯೇ ಮುಗಿಯಬೇಕು. ನನ್ನ ಕಲ್ಪನೆಯ ಶಾಲೆಯಲ್ಲಿ ಮೊದಲನೆಯ ವರ್ಷದ ಕೊನೆಯಲ್ಲಿಯೇ ಏಳು ವರ್ಷದ ಕೊನೆಯಲ್ಲಿಯೇ ಏಳು ವರ್ಷದ ಮಗು, ಈಗಿನ ಪ್ರಾಥಮಿಕ ಶಾಲೆಗಳಲ್ಲಿ ಮೊದಲನೆಯ ವರ್ಷದಲ್ಲಿ ಪಡೆಯುವದಕ್ಕಿಂತ ಹೆಚ್ಚಾಗಿಯೇ ಸಾಮಾನ್ಯ ಜ್ಞಾನವನ್ನು ಪಡೆದೀತು. ಅಕ್ಷರಗಳನ್ನು ಮಕ್ಕಳು ಈಗ ಗೀಚುವಂತೆ ಗೀಚದೆ, ನಮ್ಮ ಶಾಲೆಯ ಮಗು ಮುದ್ದಾಗಿ ಬರೆದೀತು. ಸರಿಯಾಗಿ ಬರೆದೀತು. ಸಾಮಾನ್ಯ ಸಂಕಲನ ವ್ಯವಕಲನ, ಸರಳ ಮಗ್ಗಿ ಅದಕ್ಕೆ ಗೊತ್ತಿದ್ದೀತು. ಜೊತೆಗೆ ಒಂದು ಉತ್ಪಾದಕ ಉದ್ಯೋಗವೂ ಬಂದೀತು ; ಉದಾ :—ನೂಲುವಿಕೆ.

ಎರಡನೆಯ ವಾಕ್ಯ ಮೊದಲನೆಯದರಷ್ಟೇ ಅಹಿತವಾಗಿದೆ. ಕೈಗಾರಿಕೆಯ ಮೂಲಕ ಕೊಡುವ ಶಿಕ್ಷಣ ಒಟ್ಟು ಏಳು ವರ್ಷದ ಅವಧಿಯಲ್ಲಿ ಸ್ವಾವಲಂಬಿ ಯಾಗಬೇಕು ಎಂದು ನನ್ನ ವಾದ. ಮೊದಲಿನ ಎರಡು ವರ್ಷದಲ್ಲಿ ಸ್ವಲ್ಪ ನಷ್ಟವಾದರೂ ಆಗಬಹುದು ಎಂದು ಹೇಳಿದೇನೆ. ಮಧ್ಯಯುಗ ಕೆಟ್ಟದಾಗಿರ ಬಹುದು. ಆದರೆ ಮಧ್ಯಯುಗದ್ದು ಎಂದರೆ ಎಲ್ಲವೂ ಕೆಟ್ಟದು ಎಂದು ನಾನು

ಹೇಳಲಾರೆ. ರಾಟೆ ಮಧ್ಯಯುಗದ್ದೇ ನಿಜ. ಆದರೆ ಇನ್ನೂ ಜೀವ ಹಿಡಿದು ಕೊಂಡಿದೆ. ಪದಾರ್ಥವೇನೋ ಅದೇ. ಈಸ್ಟ್ ಇಂಡಿಯಾ ಕಂಪೆನಿ ಬಂದಮೇಲೆ ಅದು ಗುಲಾಮಗಿರಿಯ ಚಿಹ್ನೆಯಾಗಿತ್ತು ; ಈಗ ಸ್ವಾತಂತ್ರ್ಯ, ಐಕ್ಯತೆಗಳ ಕುರುಹು ಆಗಿದೆ. ನಮ್ಮ ಹಿರಿಯರು ಕನಸಿನಲ್ಲಿಯೂ ಕಾಣದಿದ್ದ ಒಂದು ಗಾಢತಮ ಸತ್ಯ—ಅರ್ಥವೊಂದನ್ನು ಅದರಲ್ಲಿ ಆಧುನಿಕ ಭಾರತ ಕಂಡುಕೊಂಡಿದೆ. ಕೈಗಾರಿಕೆ ಒಂದು ಕಾಲಕ್ಕೆ ಕಾರ್ಖಾನೆಯ ಕೂಲಿಯ ಗುರುತು ಆಗಿದ್ದರೆ, ಈಗ ಸಂಪೂರ್ಣ ಅರ್ಥದಲ್ಲಿ ಶಿಕ್ಷಣದ ಚಿಹ್ನೆ, ಶಿಕ್ಷಣ ಮಾಧ್ಯಮ ಏಕಾಗಬಾರದು ? ಮಂತ್ರಿಗಳಿಗೆ ಸಾಕಷ್ಟು ಕಲ್ಪನೆ, ಧೈರ್ಯ ಇದ್ದರೆ ಎಷ್ಟೇ ಟೀಕೆ ಬರಲಿ, ಶಿಕ್ಷಣದ ಅಧಿಕಾರಿಗಳ ಕಡೆಯಿಂದ, ಉಳಿದವರಿಂದ, ಈ ವಿಚಾರವನ್ನು ಪ್ರಯೋಗಮಾಡಿ ನೋಡಿಯಾರು. ಈ ಟೀಕೆಗೆ ಕೇವಲ ಊಹೆಯೇ ಆಧಾರ.

ಪ್ರೊ|| ಕೆ. ಟಿ|| ಷಾ ಅವರ ಬಲಾತ್ಕಾರದ ಅಭಿಪ್ರಾಯವನ್ನು ಈ ಲೇಖಕ ಮೊದಲು ಒಪ್ಪಿಕೊಂಡರೂ ಕಡೆಗೆ ಪರಿತಪಿಸುತ್ತಾನೆ. 'ಶಿಕ್ಷಕರನ್ನು ಒತ್ತಾಯ ಪೂರ್ವಕವಾಗಿ ಪಡೆಗೂಡಿಸುವುದು ಅಸಹ್ಯವೆನಿಸುತ್ತದೆ. ಘೋರ ಕೃತ್ಯ. ಚಿಕ್ಕ ಮಕ್ಕಳು ನೇರುವ ಶಾಲೆಗಳಲ್ಲಿ ತಮ್ಮ ಜೀವನವನ್ನು ಈ ಜಗತ್ತಿನಲ್ಲಿ ಎಷ್ಟು ಮಟ್ಟಿಗೆ ಸಾಧ್ಯವೋ ಅಷ್ಟು ಈ ವೃತ್ತಿಗೆ ಅರ್ಪಣೆ ಮಾಡಿಕೊಂಡವರೇ, ಉತ್ಸಾಹ ಉಲ್ಲಾಸಗಳನ್ನು ತರಬಲ್ಲವರೇ, ಇರಬೇಕು. ಈಗಾಗಲೇ ನಮ್ಮ ಯುವತಿ ಯುವಕರ ಜೀವನದಲ್ಲಿ ಅನೇಕ ಪ್ರಯೋಗ ಆಗಿಹೋದವು. ಈ ಹೊಸ ಪ್ರಯೋಗವನ್ನು ಮಾಡಿದರೆ ಮುಂದೆ ಐವತ್ತು ವರ್ಷಕಾಲ ಈ ದೇಶ ತಲೆಯೆತ್ತ ಲಾರದಷ್ಟು ನಾಶವಾಗಿಹೋದೀತು. ಶಿಕ್ಷಕವೃತ್ತಿಗೆ ಏನೂ ತರಬೇತು ಬೇಕಾಗಿಲ್ಲ, ಪ್ರತಿಯೊಬ್ಬನೂ ಹುಟ್ಟು ಶಿಕ್ಷಕ ಎಂದು ತಿಳಿದಹಾಗಿದೆ—ಈ ವಿಚಾರದಲ್ಲಿ. ಕೆ. ಟಿ. ಷಾ ಅಂತಹವರು ಹೀಗೆ ಹೇಗೆ ಹೇಳಿದರೋ ಅರ್ಥವಾಗುತ್ತಿಲ್ಲ. ಇದೊಂದು ವಿಲಕ್ಷಣ ವಿಚಾರ. ಇದರ ಪ್ರಯೋಗ ದುರಂತಕಾರಿಯಾಗುತ್ತದೆ. ಕೈಗಾರಿಕೆಯನ್ನು ಪ್ರತಿಯೊಬ್ಬನೂ ಹೇಗೆ ಕಲಿಸಬಲ್ಲ ?'

ಪ್ರೊ|| ಷಾ ತಮ್ಮ ಸಮರ್ಥನೆ ಮಾಡಿಕೊಳ್ಳಬಲ್ಲರು. ಆದರೆ ಈಗಿರುವ ಶಿಕ್ಷಕರೆಲ್ಲರೂ ಸ್ವಯಂಸೇವಕರಲ್ಲ ಎಂಬುದನ್ನು ಲೇಖಕರಿಗೆ ತಿಳಿಸಬಯಸುತ್ತೇನೆ. ಸಾಮಾನ್ಯಭಾಷೆಯಲ್ಲಿ ಅವರು ದುಡ್ಡಿಗಾಗಿ ದುಡಿವ ಜನ. ತಮ್ಮ ಹೊಟ್ಟೆಯ ಪಾಡಿಗಾಗಿ ಕೆಲಸ ಮಾಡುವವರು. ಪ್ರೊ|| ಷಾ ಅವರ ಯೋಜನೆಯಲ್ಲಿ ದೇಶ ಭಕ್ತಿ, ತ್ಯಾಗಬುದ್ಧಿ, ಕೊಂಚ ಸಂಸ್ಕೃತಿ, ಕೈಗಾರಿಕೆಯ ತರಬೇತು ಇದ್ದವರನ್ನೇ

ತೆಗೆದುಕೊಳ್ಳುವ ವಿಚಾರವಿದೆ. ಅವರ ವಿಚಾರ ಸಾಧು, ಸಾಧ್ಯ; ಪರಿಶೀಲನೆಗೆ ಯೋಗ್ಯ. ಹುಟ್ಟು ಶಿಕ್ಷಕರಾದವರೇ ಬೇಕು ಎಂದರೆ ಪ್ರಳಯಕಾಲದವರೆಗೂ ಕಾಯಬೇಕಾದೀತು. ಅತ್ಯಲ್ಪ ಕಾಲದಲ್ಲಿ ಅತ್ಯಧಿಕ ಜನ ಶಿಕ್ಷಕರನ್ನು ನಾವು ತರಬೇತು ಮಾಡಬೇಕಾದೀತು. ಈಗಿರುವ ವಿದ್ಯಾವಂತ ತರುಣ ತರುಣಿಯರನ್ನು ಈ ಕೆಲಸಕ್ಕೆ ತೊಡಗಿಸದೆ ಇದು ಸಾಧ್ಯವಾಗಲಾರದು. ಅವರ ಸಾಮಾನ್ಯ ಸಮ್ಮತಿಯಿಲ್ಲದೆ ಇದು ಆಗಲಾರದು. ಸವಿನಯ ಶಾಸನಭಂಗದ ಕಾರ್ಯಕ್ರಮ ದಲ್ಲಿ, ಬಹಳ ದುರ್ಬಲವಾಗಿಯೆ, ಅಂತೂ ಅವರು ಸಹಕರಿಸಿದರು. ಈಗ ಈ ರಚನಾತ್ಮಕ ಸೇವೆಗೆ ಅವರು ಓಗೊಡಲಾರರೆ ?

ಆಮೇಲೆ ಲೇಖಕ ಕೇಳುತ್ತಾನೆ :

೧) "ಚಿಕ್ಕ ಮಕ್ಕಳ ಕೆಲಸದಲ್ಲಿ ಪದಾರ್ಥ ಬಹಳ ನಷ್ಟವಾಗದೆ ?

೨) ಈ ಪದಾರ್ಥಗಳನ್ನು ಒಂದು ಕೇಂದ್ರ ಸಂಸ್ಥೆಯ ಮೂಲಕ ಮಾರು ವುದಾದರೆ ಅದರ ವೆಚ್ಚಕ್ಕೆ ಏನು ದಾರಿ ?

೩) ಈ ಪದಾರ್ಥಗಳನ್ನು ಕೊಂಡುಕೊಳ್ಳುವಂತೆ ಜನರನ್ನು ಬಲಾತ್ಕರಿಸ ಬೇಕೆ ?

೪) ಈಗ ಈ ಪದಾರ್ಥಗಳನ್ನು ತಯಾರಿಸುತ್ತಿರುವ ಗುಂಪುಗಳ ಗತಿ ಯೇನು ? ಅದರ ಮೇಲೆ ಏನು ಪರಿಣಾಮ ?"

ನನ್ನ ಉತ್ತರ ಹೀಗೆ :

೧. ನಷ್ಟವಂತೂ ಇರುತ್ತದೆ. ಆದರೆ ಮೊದಲನೆಯ ವರ್ಷದ ಕಡೆ ಯಲ್ಲಿಯೇ ಪ್ರತಿಯೊಬ್ಬ ವಿದ್ಯಾರ್ಥಿಯೂ ಸ್ವಲ್ಪ ಲಾಭ ತೋರಿಸಬಲ್ಲ.

೨. ಸರಕಾರ ತನ್ನ ಉಪಯೋಗಕ್ಕಾಗಿಯೇ ಬೇಕಾದಷ್ಟು ಪದಾರ್ಥ ವನ್ನು ತೆಗೆದುಕೊಳ್ಳಬಹುದು.

೩. ಮಕ್ಕಳು ಮಾಡಿದ ಪದಾರ್ಥಗಳನ್ನು ಕೊಳ್ಳಬೇಕೆಂದು ಯಾರನ್ನೂ ಬಲಾತ್ಕರಿಸರು. ಆದರೆ ದೇಶದ ಮಕ್ಕಳು ಮಾಡಿದ ಪದಾರ್ಥ ಎಂದು ಉಚಿತ ಹೆಮ್ಮೆ ಮತ್ತು ದೇಶಭಕ್ತಿಯ ಹರ್ಷದಿಂದ ಜನತೆ ಕೊಳ್ಳುತ್ತದೆ ಎಂಬ ನಿರೀಕ್ಷಣೆಯಿದೆ.

೪. ಗ್ರಾಮೋದ್ಯೋಗದ ವಸ್ತುಗಳಲ್ಲಿ ಸ್ಪರ್ಧೆ ಇಲ್ಲ. ಸ್ಥಳೀಯ ಉತ್ಪಾದನೆಗೆ ತೊಡಕಾಗದಂಥ ವಸ್ತುಗಳನ್ನೇ ಉತ್ಪತ್ತಿ ಮಾಡಲು ಎಚ್ಚರ ತಳೆಯಲಾಗುತ್ತದೆ. ಖಾದಿ, ಕೈ ಕಾಗದ, ತಾಳೆ ಬೆಲ್ಲ ಇತ್ಯಾದಿಗಳಿಗೆ ಸ್ಪರ್ಧೆಯೇ ಇಲ್ಲ.[೪೭]

## ೩

## ಒಬ್ಬ ಅಮೆರಿಕಾದವರ ಪ್ರತಿಕ್ರಿಯೆ

ಡಾ. ಜಾನ್ ಬೋಯರ್ ದಕ್ಷಿಣ ಭಾರತದ ಶಿಕ್ಷಣ ಸಂಸ್ಥೆಯೊಂದಕ್ಕೆ ನೇತೃ. ದೀರ್ಘಕಾಲದ ರಜೆಯ ಮೇಲೆ ಹೋಗುವ ಮುನ್ನ ವರ್ಧಾಕ್ಕೆ ಬಂದಿದ್ದರು. ಅವರು ಮೂಲಶಿಕ್ಷಣದ ಯೋಜನೆಯನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾರೆ. ಕಾಕಾಸಾಹೇಬರೊಡನೆಯೂ ಆರ್ಯನಾಯಕಂರೊಡನೆಯೂ ಚರ್ಚೆ ಮಾಡಿದರು. ಗಾಂಧೀಜಿಯ ಜೊತೆಯಲ್ಲಿ ಒಂದೆರಡು ನಿಮಿಷ ಮಾತಾಡಲು ಬಹಳ ಆಸಕ್ತಿ ತೋರಿದರು. ಈ ಯೋಜನೆಯ ಹಿನ್ನೆಲೆಯಲ್ಲಿ ಅಹಿಂಸೆಯಿದೆ. ಅದರಿಂದ ತನಗೆ ಈ ಯೋಜನೆ ಬಹಳ ಒಪ್ಪಿತು ಎಂದರು. ಆದರೆ ಶಿಕ್ಷಣ ಕ್ರಮದಲ್ಲಿ ಅಹಿಂಸೆಗೆ ಕೊಟ್ಟ ಸ್ಥಾನ ಅಲ್ಪ ಎನಿಸಿತು ಅವರಿಗೆ.

'ನಿಮಗೆ ಈ ಯೋಜನೆ ಒಪ್ಪಿತವಾದ ಕಾರಣ ಸರಿ' ಎಂದರು ಗಾಂಧೀಜೀ. 'ಆದರೆ ಇಡೀ ಪಾಠಕ್ರಮ ಅಹಿಂಸೆಯ ಸುತ್ತುವರಿಯಲಾರದು. ಇದು ಅಹಿಂಸೆಯಿಂದ ಹುಟ್ಟುವುದು ಎಂಬುದು ನೆನಪಿದ್ದರೆ ಸಾಕು. ಆದರೆ ಈ ಯೋಜನೆಯನ್ನೊಪ್ಪುವವರು ಅಹಿಂಸೆಯನ್ನು ಒಪ್ಪಬೇಕೆಂದಿಲ್ಲ. ಉದಾ: ಸಮಿತಿಯ ಸದಸ್ಯರೆಲ್ಲರೂ ಅಹಿಂಸೆಯನ್ನು ಧರ್ಮವೆಂದು ಒಪ್ಪರು. ಸಸ್ಯಾಹಾರಿಗಳೆಲ್ಲರೂ ಅಹಿಂಸಾವಾದಿಗಳಾಗಬೇಕಿಲ್ಲ. ಆರೋಗ್ಯಕ್ಕಾಗಿ ಸಸ್ಯಾಹಾರಿಯಾಗಿರಬಹುದು. ಹಾಗೇ ಈ ಯೋಜನೆಯನ್ನು ಒಪ್ಪಿದವರೆಲ್ಲರೂ ಅಹಿಂಸಾವಾದಿಗಳಾಗಬೇಕಾದುದಿಲ್ಲ.'

'ಅಹಿಂಸಾ ತತ್ವದ ಆಧಾರದ ಮೇಲೆ ರಚಿಸಿದ್ದು ಈ ಯೋಜನೆ. ಆದುದರಿಂದ ನಮಗದು ಬೇಡ ಎಂಬ ಶಿಕ್ಷಣ ಪಂಡಿತರನ್ನೂ ನಾನು ಬಲ್ಲೆ' ಎಂದರು. ಡಾ. ಬೋಯರ್.

'ನನಗೆ ಗೊತ್ತಿದೆ. ಖಾದಿಗೆ ಗಾಂಧೀ ವಿಚಾರ ಆಧಾರ. ಆದುದರಿಂದ ನಮಗೆ ಅದು ಬೇಡ ಎಂಬ ನಾಯಕರನ್ನೂ ನಾನು ಬಲ್ಲೆ. ನಾನೇನು ಮಾಡಲಿ? ಅಹಿಂಸೆಯೇನೋ ಈ ಯೋಜನೆಯ ಹೃದಯದಲ್ಲಿಯೆ ಇದೆ. ಸುಲಭವಾಗಿ ಅದನ್ನು ತೋರಿಸಿದ ಮೇಲೆ ಇದರಲ್ಲಿ ಹೆಚ್ಚು ಆಸಕ್ತಿಯಿರದು ಎಂಬುದನ್ನೂ ಬಲ್ಲೆ. ಆದರೆ ಈ ಯೋಜನೆಯನ್ನೊಪ್ಪಿದವರು ಕೋಟ್ಯಂತರ ಹಸಿದ ಹೊಟ್ಟೆಯ ಜನ ಇರುವ ದೇಶದಲ್ಲಿ ಮಕ್ಕಳ ಶಿಕ್ಷಣಕ್ಕೆ ಬೇರೆ ಯಾವ ಮಾರ್ಗವೂ ಇಲ್ಲ,

ಈ ಯೋಜನೆಯನ್ನು ರೂಢಿಸಿದರೆ ಅದಂ ಫಲವಾಗಿ ಒಂದು ಹೊಸ ಆರ್ಥಿಕ ವ್ಯವಸ್ಥೆಯೇ ಬರುತ್ತದೆ ಎಂಬುದನ್ನು ಒಪ್ಪುತ್ತಾರೆ. ನನಗೆ ಅಷ್ಟೇ ಸಾಕು. ಅಹಿಂಸೆಯನ್ನು ಸ್ವಾತಂತ್ರ್ಯ ಸಾಧನೋಪಾಯವಾಗಿ ಒಪ್ಪಿದಾರೆ ಕಾಂಗ್ರೆಸಿನವರು, ಜೀವನಧರ್ಮವಾಗಿಯಲ್ಲ. ನನಗಷ್ಟೇ ಸಾಕಾಗಿಲ್ಲವೆ? ಇಡೀ ಭಾರತವೇ ಅಹಿಂಸೆಯನ್ನು ಧರ್ಮವಾಗಿ, ಜೀವನಪಂಥವಾಗಿ ಒಪ್ಪಿದರೆ ಒಡನೆಯೆ ಪ್ರಜಾರಾಜ್ಯ ಕಟ್ಟಬಹುದು.'

'ಹಾಗೆಯೇ' ಎಂದರು ಬೋಯರು. 'ಈಗ ನನಗೆ ಒಂದು ವಿಷಯ ಅರ್ಥವಾಗಿಲ್ಲ. ಅಹಿಂಸಾವಾದಿಯಾದುದರಿಂದ ನನಗೆ ಈ ಯೋಜನೆ ಬಹಳ ರುಚಿಸುತ್ತದೆ. ಆದರೆ ನಾನು ಸಮಾಜವಾದಿಯಾಗಿ ಯೋಚಿಸಿದರೆ ಈ ಯೋಜನೆ ಹಿಂದೂಸ್ಥಾನವನ್ನು ಜಗತ್ತಿನೊಡನೆ ಪೋಣಿಸದೆ, ಬೇರೆ ಇರಿಸಿಬಿಡುತ್ತದೆ ಯೇನೋ ಎನಿಸುತ್ತದೆ. ಹಾಗೆ ಒಂದುಗೂಡಿಸಲು ಸಮಾಜವಾದಕ್ಕಿಂತ ಬೇರೆಯಿಲ್ಲ.'

'ಇದರಲ್ಲಿ ನನಗೆ ಯಾವ ಕಷ್ಟವೂ ಇಲ್ಲ. ಇಡೀ ಜಗತ್ತನ್ನು ಬಿಟ್ಟು ಬೇರೆ ಇರಲು ನಮಗೆ ಬಯಕೆಯಿಲ್ಲ. ಎಲ್ಲಾ ರಾಷ್ಟ್ರಗಳೊಡನೆಯೂ ಸ್ವತಂತ್ರ ಸಂಬಂಧ, ವಿನಿಮಯ ಮಾಡುತ್ತೇವೆ. ಈಗಿರುವ ಬಲಾತ್ಕಾರ ಸಂಬಂಧ ಹೋಗಬೇಕು. ನಮ್ಮನ್ನು ಯಾರೂ ಶೋಷಿಸಬಾರದು; ನಾವೂ ಯಾರನ್ನೂ ಶೋಷಣೆ ಮಾಡೆವು. ಈ ಯೋಜನೆಯಿಂದ ಮಕ್ಕಳೆಲ್ಲರೂ ಉತ್ಪಾದಕರಾಗುವಂತೆ ಮಾಡುತ್ತೇವೆ; ಇದು ನಮ್ಮ ಸಮಾಜದಲ್ಲಿ ಸರ್ವತ್ರ ವ್ಯಾಪಿಸಿ ನಮ್ಮ ರಾಷ್ಟ್ರದ ಸ್ವರೂಪವನ್ನೇ ಬದಲಿಸೀತು. ಆದರೆ ಜಗತ್ತನ್ನು ಬಿಟ್ಟು ಸಿಡಿದು ಹೋಗುವುದಿಲ್ಲ. ಜಗತ್ತಿನಲ್ಲಿ ಕೆಲವು ರಾಷ್ಟ್ರಗಳು ಕೆಲವು ಪದಾರ್ಥಗಳನ್ನು ಉತ್ಪತ್ತಿ ಮಾಡಲಾರವು. ಅವರು ಬೇರೆ ರಾಷ್ಟ್ರಗಳೊಡನೆ ವಿನಿಮಯ ಮಾಡುತ್ತಾರೆ. ಆ ಪದಾರ್ಥಗಳಿಗಾಗಿ ಅವರು ಇತರ ರಾಷ್ಟ್ರಗಳನ್ನು ಅವಲಂಬಿಸಲೇ ಬೇಕು. ಅವನ್ನು ಆ ಪದಾರ್ಥಗಳನ್ನು ಒದಗಿಸುವ ರಾಷ್ಟ್ರಗಳು ಶೋಷಣೆಮಾಡಬಾರದು.'

'ಆದರೆ ಬೇರೆ ದೇಶಗಳಿಂದ ಯಾವ ಪದಾರ್ಥವೂ ಬೇಡ ಎನ್ನುವಷ್ಟು ನಿಮ್ಮ ಬಾಳನ್ನು ಸರಳವಾಗಿಸಿದರೆ, ಅವರನ್ನು ಬಿಟ್ಟು ಬೇರೆಯಾದ ಹಾಗೇ ಆಯಿತು. ಅಮೆರಿಕಾಕ್ಕೂ ನೀವು ಜವಾಬದಾರರಾಗಬೇಕು ಎಂದು ನನ್ನ ಮನಸ್ಸು.'

'ಶೋಷಣೆ ಮಾಡುವುದನ್ನೂ ಮಾಡಿಸಿಕೊಳ್ಳುವುದನ್ನೂ ಬಿಟ್ಟಾಗಲೇ

ನಾವು ಅಮೆರಿಕಾಕ್ಕೆ ಜವಾಬದಾರರಾಗಬಲ್ಲೆವು. ಆಗ ಅಮೆರಿಕಾವೂ ನಮ್ಮ ಮೇಲ್ಪಂಗ್ತಿಯನ್ನೇ ಅನುಸರಿಸೀತು; ಪರಸ್ಪರ ಸ್ವಚ್ಛಂದ ವಿನಿಮಯಕ್ಕೆ ಆಗ ಕಷ್ಟವಾಗದು.'

'ಆದರೆ ನೀವು ಬಾಳನ್ನು ತೀರಾ ಸರಳವಾಗಿ ಮಾಡಿ ಔದ್ಯೋಗೀಕರಣವನ್ನು ಕತ್ತರಿಸಹಾಕಬಯಸುತ್ತೀರಿ.'

'ನಮ್ಮ ದೇಶಕ್ಕೆ ಬೇಕಾದುದನ್ನೆಲ್ಲಾ ೩ ಕೋಟಿ ಜನರ ಬದಲು ೩೦ ಸಾವಿರ ಜನರೇ ಉತ್ಪತ್ತಿ ಮಾಡುವುದಾದರೆ ಮಾಡಲಿ, ನನಗೇನೂ ಚಿಂತೆಯಿಲ್ಲ. ಆದರೆ ಆ ೩ ಕೋಟಿ ಜನ ನಿರುದ್ಯೋಗಿಗ ಸೋಮಾರಿಗಳೂ ಆಗಬಾರದು; ದಿನಕ್ಕೆ ಒಂದೋ ಎರಡೋ ಗಂಟೆ ಕೆಲಸ ಸಾಕು ಎನ್ನುವವರೆಗೂ ಗಿರಣಿಗಾರಿಕೆಯನ್ನು ತರಲು ಸಮಾಜವಾದಿಗಳು ಬಯಸುತ್ತಾರೆ. ನನಗದು ಬೇಡ.'

'ಅವರಿಗೆ ಬಿಡುವು ಸಿಗುತ್ತದಲ್ಲ.'

'ಏಕೆ ಬಿಡುವು, ಹಾಕಿ ಆಡಲಿಕ್ಕೇನು ?'

'ಅದಕ್ಕೇ ಅಲ್ಲ, ರಚನಾತ್ಮಕ ಕೈಗಾರಿಕೆಗಳಿಗೂ.'

'ಉತ್ಪಾದಕ ಕೈಗಾರಿಕೆಗಳನ್ನು ಮಾಡಿ ಎಂದು ನಾನು ಹೇಳುತ್ತಿದೇನೆ. ಆದರೆ ದಿನಕ್ಕೆ ಎಂಟು ಗಂಟೆ ಕೈಗೆಲಸ ಮಾಡಿ ಅವರು ಉತ್ಪತ್ತಿ ಮಾಡಿಯಾರು.'

'ಹಾಗಾದರೆ, ಮನೆ ಮನೆಯಲ್ಲೂ ಒಂದು ರೇಡಿಯೋ ಒಬ್ಬೊಬ್ಬನಿಗೂ ಒಂದು ಮೋಟಾರು ಆಗುವ ಕಾಲ ಬರಬೇಕೆಂದು ನಿಮಗಿಲ್ಲ. ಅದು ಪ್ರೆಸಿಡೆಂಟ್ ಹೂವರರ ಸೂತ್ರ. ಒಂದೊಂದಲ್ಲ, ಎರಡೆರಡು ರೇಡಿಯೋ, ಮೋಟಾರು ಬೇಕು ಎನ್ನುತ್ತಿದ್ದ ಆತ.'

'ಅಷ್ಟು ಮೋಟಾರಾಗಿಬಿಟ್ಟರೆ ಓಡಾಡುವುದಕ್ಕೇ ಸ್ಥಳವಿಲ್ಲದೆ ಆದೀತು' ಎಂದರು ಗಾಂಧೀಜೀ.

'ನಿಜ. ಪ್ರತಿ ವರ್ಷವೂ ನಮ್ಮಲ್ಲಿ ೪೦ ಸಾವಿರ ಜನ ಅಪಘಾತಗಳಿಂದ ಸಾಯುತ್ತಾರೆ. ಅದಕ್ಕೆ ಮೂರರಷ್ಟು ಅಂಗಹೀನರಾಗುತ್ತಾರೆ.'

'ಹೇಗಾದರೂ ಆಗಲಿ ಹಿಂದೂಸ್ತಾನದಲ್ಲಿ ಎಲ್ಲಾ ಹಳ್ಳಿಗಳಿಗೂ ರೇಡಿಯೋ ಬರುವ ಕಾಲವವರೆಗೂ ನಾನೇನು ಬದುಕಿರುವುದಿಲ್ಲ.'

'ಪಂಡಿತ ಜವಾಹರಲಾಲರು ಎಲ್ಲವೂ ಸಮೃದ್ಧಿಯಾಗಿರಬೇಕು ಎಂದು ಯೋಚಿಸುವಂತಿದೆ.'

'ಬಲ್ಲೆ. ಸಮೃದ್ಧಿ ಎಂದರೇನು? ಅಮೆರಿಕಾದಲ್ಲಿ ನೀವು ಮಾಡುತ್ತೀರಲ್ಲ,

ಹಾಗೆ ಲಕ್ಷಗಟ್ಟಲೆ ಗೋಧಿ ಚೀಲ ನಾಶಮಾಡುವುದೇ ?'

'ಹೌದು. ಅದು ಬಂಡವಾಳಗಾರಿಕೆಯ ಪ್ರತಿಫಲ. ಈಗ ನಾಶ ಮಾಡುವುದಿಲ್ಲ. ಗೋಧಿ ಬೆಳೆಯದಿದ್ದರೆ ಇಷ್ಟು ಹಣ ಎಂದು ಕೊಡುತ್ತಾರೆ. ಪೊಟ್ಟಿಗಳ ಬೆಲೆ ಇಳಿದಿತ್ತು ಎಂದು ಜನ ಮೊಟ್ಟೆಗಳನ್ನು ತೂರಾಡಿದರು ಒಬ್ಬರ ಮೋರೆಗೊಬ್ಬರು.'

'ಅದನ್ನೇ ನಾವು ಬೇಡ ಎನ್ನುವುದು. ಪ್ರತಿಯೊಬ್ಬನಿಗೂ ಹೊಟ್ಟೆ ತುಂಬಾ ಅನ್ನ, ಮೈತುಂಬಾ ಬಟ್ಟೆ, ಮನಸ್ಸಿಗೆ ಶಿಕ್ಷಣ ಕೊಡುವಷ್ಟು ಅನುಕೂಲತೆ—ಇದೇ ಸಮೃದ್ಧಿ ಎಂದರೆ ನನಗೆ ಸಮಾಧಾನವೇ. ಆದರೆ ಅಜೀರ್ಣವಾಗುವಷ್ಟು ಹೊಟ್ಟೆಗೆ ತುರುಕುವುದು, ಪ್ರಯೋಜನಕರವಾಗಿ ಬಳಸಲಾರದಷ್ಟು ಪದಾರ್ಥಗಳನ್ನು ಒಟ್ಟಕೊಳ್ಳುವುದು ನನಗೆ ಇಷ್ಟವಲ್ಲ. ಹಾಗೆಂದರೆ, ಹಿಂದು ಸ್ಥಾನದಲ್ಲಿ ಬಡತನ, ನಿರ್ಗತಿ, ಸಂಕಟ, ಕೊಳೆ, ಧೂಳು ಇರಲಿ ಎಂದಲ್ಲ.'

'ಆದರೆ ನೀವು ದರಿದ್ರನಾರಾಯಣನ ಪೂಜೆ ಮಾಡುತ್ತೀರಿ, ಬಡತನವನ್ನೇ ದೊಡ್ಡದಾಗಿ ಹೊಗಳುತ್ತೀರಿ ಎಂದು ಪಂಡಿತ ಜವಾಹರಲಾಲರು ತಮ್ಮ ಜೀವನ ಚರಿತ್ರೆಯಲ್ಲಿ ಬರೆದಿದಾರೆ.'

ಗಾಂಧೀಜೀ ನಗುತ್ತ ಹೇಳಿದರು : 'ಗೊತ್ತಿದೆ.'೪೮

## ೪

## ಮೂಲಶಿಕ್ಷಣ ಯೋಜನೆಯ ಮೇಲೆ ದಾಳಿ

### ಕಸ ತೆಗೆಯುವುದು

ಪ್ರತಿನಿಧಿಗಳು ಗಾಂಧೀಜೀಯನ್ನು ಅನೇಕ ಪ್ರಶ್ನೆ ಕೇಳಿದರು. ಈ ಯೋಜನೆ ಕಾಲದ ಹೊಡೆತಕ್ಕೆ ತಡೆದು ನಿಲ್ಲಬಲ್ಲದೆ, ಬರೀ ತಾತ್ಕಾಲಿಕ ಕಾರ್ಯವೆ ? ಎಂಬ ಸಂದೇಹವೇ ಮೊದಲನೆಯದು. ಇಂದಲ್ಲ ನಾಳೆ ಈ ಚಿಕ್ಕ ಕೈಗಾರಿಕೆಗಳೆಲ್ಲ ಗಿರಣಿಗಾರಿಕೆಗೆ ಶರಣಾಗಲೇಬೇಕು ಎಂದು ಅನೇಕ ಶಿಕ್ಷಣ ಪಂಡಿತರ ಮತ. ಈ ಮೂಲಶಿಕ್ಷಣದ ಪ್ರಕಾರ ಶಿಕ್ಷಣ ಪಡೆದು ಸತ್ಯ, ಅಹಿಂಸೆ, ನ್ಯಾಯಗಳ ಮೇಲೆ ನಿಂತ ಸಮಾಜ ಗಿರಣಿಗಾರಿಕೆಯ ಹೊಡೆತಕ್ಕೆ ತಾಳಿ ಬಾಳಬಲ್ಲದೆ ?

"ಇದು ವ್ಯಾವಹಾರಿಕ ಪ್ರಶ್ನೆಯಲ್ಲ" ಎಂದರು ಗಾಂಧೀಜೀ. "ನಮ್ಮ ಇವೊತ್ತಿನ ಕಾರ್ಯಕ್ರಮಕ್ಕೆ ಇದು ಸಂಬಂಧವಿಲ್ಲ. ನಾಲ್ಕಾರು ತಲೆಮಾರಿನ

ತರುವಾಯ ಏನಾದೀತೋ ಎಂಬುದಲ್ಲ ನಮ್ಮ ಸಮಸ್ಯೆ. ನಮ್ಮ ಹಳ್ಳಿಗಳಲ್ಲಿರುವ ಜನ ಸಮೂಹದ ಆವಶ್ಯಕತೆಗಳಿಗೆ ಈ ಶಿಕ್ಷಣ ಸರಿ ಎಂಬುದು ಮಾತು. ಹಿಂದುಸ್ಥಾನವೆಲ್ಲ ಗಿರಣಿಗಳೇ ಆಗಿ, ಹಳ್ಳಿಗಳೇ ಇಲ್ಲದಂತೆ ಆಗುವ ಸಂದರ್ಭ ಎಂದಿಗಾದರೂ ಬಂದೀತು ಎನಿಸದು ನನಗೆ. ಹಿಂದುಸ್ಥಾನದ ಬಹು ಭಾಗ ಯಾವಾಗಲೂ ಹಳ್ಳಿಗಳೇ ಆಗಿದ್ದಾವು."

"ಈ ಸಲದ ಅಧ್ಯಕ್ಷ ಚುನಾವಣೆಯಿಂದ ಕಾಂಗ್ರೆಸ್ ಧೋರಣೆ ಬದಲಾಗಿ ಮೂಲಶಿಕ್ಷಣ ಯೋಜನೆ ಉಳಿದೀತೆ?" ಎಂದು ಕೇಳಿದರು.

ಈ ಭಯ ಬೇಡವಿಲ್ಲದು ಎಂದರು ಗಾಂಧೀಜೀ. ಕಾಂಗ್ರೆಸ್ ಧೋರಣೆ ಬದಲಾದರೆ ಮೂಲಶಿಕ್ಷಣ ಯೋಜನೆಗೇನು ಧಕ್ಕೆ? 'ಏನಾದರೂ ವ್ಯತ್ಯಾಸ ವಾದರೆ ಮೇಲ್ಮಟ್ಟದ ರಾಜಕೀಯದಲ್ಲಿ ಮಾತ್ರ. ನೀವು ಇಲ್ಲಿಗೆ ಬಂದುದು ಮೂರು ವಾರ ಶಿಕ್ಷಣ ಪಡೆದು ಹಿಂದಿರುಗಿ ಹೋದ ಮೇಲೆ ವಿದ್ಯಾರ್ಥಿಗಳಿಗೆ ಮೂಲಶಿಕ್ಷಣದ ಪ್ರಕಾರ ಕಲಿಸಲಿಕ್ಕೆ. ಈ ಪದ್ಧತಿ ಉಚಿತವಾದುದೆಂಬ ಶ್ರದ್ಧೆ-ವಿಶ್ವಾಸ ನಿಮಗಿರಬೇಕು.

'ಗಿರಣಿಗಾರಿಕೆಯ ಸಲಹೆಗಳನ್ನು ಮಾಡಿದರೂ ಕಾಂಗ್ರೆಸ್ಸಿನ ಗುರಿ ದೇಶದ ಔದ್ಯೋಗೀಕರಣವಲ್ಲ. ಬೊಂಬಾಯಿ ಕಾಂಗ್ರೆಸ್ಸಿನಲ್ಲಿ ತೀರ್ಮಾನಿಸಿದಂತೆ, ಅದರ ಗುರಿ ಗ್ರಾಮೋದ್ಯೋಗಗಳ ಪುನರುಜ್ಜೀವನ. ರೈತರ ಮುಂದೆ ಎಂಥ ಗಿರಣಿಗಾರಿಕೆಯ ಯೋಜನೆಯನ್ನೇ ಇಟ್ಟರೂ ಅದರಿಂದ ಜನತಾ ಜಾಗೃತಿ ಯಾಗದು. ಅವರ ವರಮಾನ ಅದರಿಂದ ಒಂದು ಕಾಸೂ ಹೆಚ್ಚದು. ಆದೇ ಅಖಿಲಭಾರತ ಗ್ರಾಮೋದ್ಯೋಗ, ಚರಖಾ ಸಂಘಗಳು ಒಂದು ವರ್ಷವಲ್ಲಿ ರೈತರ ಕೈಗೆ ಹಲವು ಲಕ್ಷ ರೂಪಾಯಿ ಸೇರುವಂತೆ ಮಾಡುತ್ತಲಿವೆ, ವರ್ಕಿಂಗ್ ಕಮಿಟಿಗೆ, ಮಂತ್ರಿಮಂಡಲಗಳಿಗೆ ಏನೇ ಬಂದೊದಗಲಿ, ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಗಳಿಗೆ ಏನೂ ಅಪಾಯ ಕಾಣದು. ಕಾಂಗ್ರೆಸ್ ಮೊದಲಿಟ್ಟಿದ್ದರೂ ಅವಕ್ಕೆ ಸ್ವತಂತ್ರ ಬಾಳು ಇದೆ. ಅವು ಬಹಳ ಕಾಲ ಬಾಳಿ ತಮ್ಮ ಬೆಲೆಯನ್ನು ದೃಢಪಡಿಸಿವೆ. ಮೂಲಶಿಕ್ಷಣ ಅದರದೇ ಒಂದು ಕವಲು. ಶಿಕ್ಷಣ ಸಚಿವರು ಹೋದಾರು, ಇದೇನೋ ಇದ್ದೇ ಇರುತ್ತದೆ. ಆದುದರಿಂದ ಮೂಲ ಶಿಕ್ಷಣ ಹಿತೈಷಿಗಳು ಕಾಂಗ್ರೆಸ್ ರಾಜಕೀಯದ ಬಗ್ಗೆ ಚಿಂತೆಮಾಡಬಾರದು. ತನ್ನಲ್ಲಿ ಯೋಗ್ಯತೆಯಿದ್ದರೆ ಹೊಸ ಯೋಜನೆ ಬದುಕೀತು. ಇಲ್ಲದಿದ್ದರೆ ಅಳಿದೀತು."

‘ ಆದರೆ ಈ ಪ್ರಶ್ನೆಗಳು ಸಮರ್ಪಕವಲ್ಲ. ಯೋಜನೆಗೆ ನೇರಾಗಿ ಸಂಬಂಧಿಸಿದುವಲ್ಲ ಇವು. ಇವು ಮುಂದಡಿ ಇಡಿಸವು. ಯೋಜನೆಗೆ ನೇರಾಗಿ ಸಂಬಂಧಿಸಿದ ಪ್ರಶ್ನೆ ಕೇಳಿ. ನನ್ನ ಅನುಭವದ ಸಲಹೆ ಕೊಡುತ್ತೇನೆ.’

## ವಿಚಾರ ಬಿಂದು

ಸಭೆಗೆ ಹೋಗುವಾಗ ಒಬ್ಬ ಗೆಳೆಯ ಕೇಳಿದ–ತಕಲಿಗೆ ಸಂಬಂಧಿಸದ ಮಾತು ಒಂದನ್ನೂ ಹುಡುಗರಿಗೆ ಹೇಳಬಾರದೇನು ಶಿಕ್ಷಕರು ? ಇದೇ ಅದರ ವಿಚಾರ ಬಿಂದುವೋ ?

ಸಭೆಯಲ್ಲಿ ಇದಕ್ಕೆ ಉತ್ತರ ಕೊಡುತ್ತಾ ಗಾಂಧೀಜೀ ಹೇಳಿದರು :

‘ ಇದೊಂದು ಅಪನಿಂದೆ ನನ್ನ ಮೇಲೆ. ಸಮಸ್ತ ಶಿಕ್ಷಣವೂ ಒಂದು ಮೂಲೋದ್ಯೋಗಕ್ಕೆ ಸಂಬಂಧಿಸಿರಬೇಕೆಂದು ನಾನು ಹೇಳಿದುದು ದಿಟ. ೭–೧೦ ವರ್ಷದ ಮಗುವಿಗೆ ಕೈಗಾರಿಕೆಯ ಮೂಲಕ ಜ್ಞಾನ ನೀಡುವಾಗ, ಪ್ರಾರಂಭದಲ್ಲಿ ಆ ಕೈಗಾರಿಕೆಗೆ ಜೋಡಿಸಿಕೊಳ್ಳಲಾರದಿದ್ದ ಅನೇಕ ವಿಷಯಗಳನ್ನು ಜೋಡಿಸುವ ಉಪಾಯ ತಿಳಿಯುತ್ತದೆ. ಪ್ರಾರಂಭದಲ್ಲಿ ಈ ಪರಿತ್ಯಾಗ ಪದ್ಧತಿಯನ್ನು ಅವಲಂಬಿಸಿದರೆ ಮಕ್ಕಳ ಸಾಮರ್ಥ್ಯ, ನಿಮ್ಮ ಸಾಮರ್ಥ್ಯ ಅಪವ್ಯಯವಾಗದು. ಇವೊತ್ತು ನಮಗೆ ದಾರಿತೋರಿಸುವ ಮೇಲ್ಪಂಕ್ತಿಯಾಗಲಿ ಪುಸ್ತಕಗಳಾಗಲಿ ಇಲ್ಲ. ಆದುದರಿಂದ ಸಾವಕಾಶವಾಗಿ ನಡೆಯಬೇಕು. ಮುಖ್ಯವಾದುದು ಶಿಕ್ಷಕನ ಮನಸ್ಸು ಯಾವಾಗಲೂ ನವೋನವವಾಗಿರಬೇಕು. ಕೈಗಾರಿಕೆಗೆ ಸಮನ್ವಯ ಮಾಡಲಾರದ ವಿಷಯ ಒಂದು ಬಂದರೆ, ರೇಗಾಡಿ ನಿರಾಶರಾಗಬೇಡಿ. ಅದನ್ನು ಕೈಬಿಡಿ, ಉಳಿದವನ್ನು ಮುಂಬರಿಸಿ. ಇನ್ನೊಬ್ಬ ಶಿಕ್ಷಕನಿಗೆ ಆ ಉಪಾಯ ಹೊಳೆದೀತು. ಅವನು ತೋರಿಸಿಕೊಟ್ಟಾನು. ಅನೇಕರ ಅನುಭವ ಒಟ್ಟುಗೂಡಿದಾಗ ನಿಮಗೆ ದಾರಿ ತೋರಿಸಲು ಪುಸ್ತಕಗಳೂ ಆಗುತ್ತವೆ. ನಿಮ್ಮ ತರುವಾಯ ಬರುವವರ ಕೆಲಸ ಸುಲಭವೂ ಆಗುತ್ತದೆ.’

‘ ಈ ವಿವಿಕ್ತಮಾಡುವ ಪದ್ಧತಿ ಎಷ್ಟು ದಿನ ಎಂದು ಕೇಳಿದಿರಿ. ಬದುಕಿರುವಷ್ಟು ದಿನವೂ ಎನ್ನುತ್ತೇನೆ. ಕಟ್ಟಕಡೆಯಲ್ಲಿ ನಿಮಗೇ ತಿಳಿಯುತ್ತದೆ. ಮೊಟ್ಟಮೊದಲು ಕೈಬಿಟ್ಟ ಎಷ್ಟೋ ವಿಷಯ ಸೇರಿಬಂದವು, ಜೋಡಿಸಿಕೊಳ್ಳಲು ಯೋಗ್ಯವಾದುದೆಲ್ಲ ಸಮನ್ವಯವಾಗಿ ಬಂತು. ಕಟ್ಟಕಡೆಯವರೆಗೂ ಕೈಬಿಟ್ಟುದು ಬಿಡಬೇಕಾದಂಥದೇ. ಇದು ನನಗಾದ ಬಾಳಿನ ಅನುಭವ. ಈಗ

ನಾನು ಮಾಡಿರುವ ಅನೇಕ ಕೆಲಸಗಳನ್ನು, ಅಷ್ಟೇ ಅನೇಕ ಕೆಲಸಗಳನ್ನು ಕೈ ಬಿಡದಿದ್ದರೆ, ಮಾಡಲಾಗುತ್ತಿರಲಿಲ್ಲ.

'ನಮ್ಮ ಶಿಕ್ಷಣದಲ್ಲಿ ಕ್ರಾಂತಿಯಾಗಬೇಕು. ಕೈಯ ಮೂಲಕ ಬುದ್ಧಿಗೆ ಶಿಕ್ಷಣ ಕೊಡಬೇಕು. ನಾನು ಕವಿಯಾಗಿದ್ದರೆ ಐದು ಬೆರಳಿನ ಶಕ್ತಿಸಾಮರ್ಥ್ಯಗಳನ್ನು ವರ್ಣಿಸಿ ಕಾವ್ಯ ಬರೆಯುತ್ತಿದ್ದೆ. ಮನಸ್ಸೇ ಸಮಸ್ತವೂ, ಕೈಕಾಲುಗಳು ಕೆಲಸಕ್ಕೇ ಬಾರದವು ಎಂದೇಕೆ ತಿಳಿಯುತ್ತೀರಿ? ಕೈಗಳನ್ನು ತರಪೇತು ಮಾಡಿಕೊಳ್ಳದೆ ಈ ಒಣ ಶಿಕ್ಷಣವನ್ನು ಮಾತ್ರ ಪಡೆದಿರುವವರ ಬಾಳಿನಲ್ಲಿ 'ಇಂಪು' ಇರದು. ಅವರ ಶಕ್ತಿಗಳೆಲ್ಲವೂ ವಿಕಸಿತವಾಗಿಲ್ಲ. ಬರೀ ಪುಸ್ತಕ ಪಾಠ ಮಗುವಿನ ಮನಸ್ಸನ್ನು ಪೂರ್ಣವಾಗಿ ಹಿಡಿದಿಡಲಾರದು. ಅದಕ್ಕೆ ಅಷ್ಟು ಆಸಕ್ತಿಯಿಲ್ಲ. ಬರೀ ಶಬ್ದಗಳ ಭಾರಕ್ಕೆ ಮನಸ್ಸು ಬಳಲುತ್ತದೆ. ಮಗುವಿನ ಮನಸ್ಸು ಅಲೆದಾಡಲು ಮೊದಲಿಡುತ್ತದೆ. ಕೈ ಮಾಡಬಾರದುದನ್ನು ಮಾಡುತ್ತದೆ, ಕಣ್ಣು ನೋಡಬಾರದುದನ್ನು ನೋಡುತ್ತದೆ, ಕಿವಿ ಕೇಳಬಾರದುದನ್ನು ಕೇಳುತ್ತದೆ; ಮಾಡಬೇಕಾದುದನ್ನು ಮಾಡದು, ನೋಡಬೇಕಾದುದನ್ನು ನೋಡನು, ಕೇಳಬೇಕಾದುದನ್ನು ಕೇಳದು. ಸರಿಯಾಗಿ ವಿವೇಚಿಸಲು ಕಲಿಸರು. ಅದರಿಂದ ಅವರ ಶಿಕ್ಷಣ ಎಷ್ಟೋ ವೇಳೆ ಅವರಿಗೆ ಕಂಟಕವಾಗುತ್ತದೆ. ಒಳ್ಳೆಯದು-ಕೆಟ್ಟದು ಎಂಬ ವಿವೇಕವನ್ನು ಕಲಿಸದ ಶಿಕ್ಷಣ, ಕೆಟ್ಟದನ್ನು ಬಿಟ್ಟು ಒಳಿತನ್ನು ಕಲಿಯಲು ತಿಳಿಸದ ಶಿಕ್ಷಣ, ಶಿಕ್ಷಣವೇ ಅಲ್ಲ.'

## ಕೈಯಮೂಲಕ ಮನಸ್ಸಿನ ಶಿಕ್ಷಣ

ಕೈಗಳ ಮೂಲಕ ಮನಸ್ಸಿಗೆ ಶಿಕ್ಷಣ ಕೊಡುವುದು ಹೇಗೋ ವಿವರಿಸಲು ಆಶಾದೇವಿ ಕೇಳಿದರು.

ಗಾಂಧೀಜೀ ಹೇಳಿದರು: 'ಶಾಲೆಯಲ್ಲಿ ನಡೆಯುವ ಶಿಕ್ಷಣಕ್ಕೆ ಒಂದು ಕೈಗಾರಿಕೆಯನ್ನು ಜೋಡಿಸಬೇಕು ಎಂದು ಹಿಂದೆ ಅಭಿಪ್ರಾಯವಿತ್ತು. ಇದಕ್ಕೂ ಶಿಕ್ಷಣಕ್ಕೂ ಏನೂ ಸಂಬಂಧವಿಲ್ಲ. ಬೇರೆಯಾಗಿ ಇದನ್ನು ಸೇರಿಸುವುದು. ಅದು ಸರ್ವನಾಶಕಾರಿಯಾದ ತಪ್ಪು ಅನಿಸುತ್ತದೆ ನನಗೆ. ಶಿಕ್ಷಕ ಕೈಗಾರಿಕೆಯನ್ನು ಕಲಿತ., ತನ್ನ ಜ್ಞಾನವನ್ನು ಅದಕ್ಕೆ ಸಮನ್ವಯ ಗೊಳಿಸಬೇಕು; ತಾನು ಆರಿಸಿಕೊಂಡ ಆ ಕೈಗಾರಿಕೆಯ ಮೂಲಕವೇ ಸಮಸ್ತ ವಿದ್ಯೆಯನ್ನೂ ಶಿಕ್ಷಕ ಹೇಳಿಕೊಡುವಂತಿರಬೇಕು.

' ನೂಲುವ ಉದಾಹರಣೆ ತೆಗೆದುಕೊಳ್ಳಿ. ಅಂಕಗಣಿತ ತಿಳಿಯದಿದ್ದರೆ ನಾನು ತಕಲಿಯಿಂದ ಎಷ್ಟು ಗಜ ನೂಲು ತೆಗೆದೆನೋ ನನ್ನ ನೂಲಿನ ನಂಬರು ಎಷ್ಟೋ, ಎಷ್ಟು ಸುತ್ತು ಆಯಿತೋ ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಲು ನನಗೆ ಅಂಕೆಗಳು ತಿಳಿದಿರಬೇಕು ; ಸಂಕಲನ ವ್ಯವಕಲನ ಗುಣಾಕಾರ ಭಾಗಾಕಾರಗಳೂ ಬರಬೇಕು. ಕ್ಲಿಷ್ಟಪ್ರಶ್ನೆಗಳನ್ನು ಬಿಡಿಸಲು ಸಂಕೇತಗಳು ಅಗತ್ಯ. ಅಲ್ಲಿ ಬೀಜಗಣಿತ ಬಂತು. ಇದರಲ್ಲಿಯೂ ರೋಮನ್ ಲಿಪಿಯ ಬದಲು ಹಿಂದೂಸ್ಥಾನಿ ಲಿಪಿಯನ್ನು ಬಳಸಲು ಆಗ್ರಹಮಾಡುತ್ತೇನೆ.

' ಆಮೇಲೆ ರೇಖಾಗಣಿತ. ತಕಲಿ ಬಿಲ್ಲೆಗಿಂತ ಉತ್ತಮ ಉದಾಹರಣೆ ವರ್ತುಲಕ್ಕೆ ಏನು ಇದೆ ? ಇದರ ಮೂಲಕ ವರ್ತುಲದ ಸಮಸ್ತ ತಿಳಿವನ್ನೂ ಕೊಡಬಹುದು, ಯೂಕ್ಲಿಡ್‌ನ ಹೆಸರನ್ನೂ ಹೇಳದೆಯೆ.

' ನೂಲುವುದರ ಮೂಲಕ ಇತಿಹಾಸ ಭೂಗೋಳ ಹೇಗೆ ಕಲಿಸುತ್ತೀರಿ ಎಂದು ಕೇಳಬಹುದು. ಕೆಲವು ದಿನದ ಕೆಳಗೆ ಒಂದು ಪುಸ್ತಕವನ್ನು ನೋಡಿದೆ. ' ಹತ್ತಿ - ಮನುಷ್ಯವರ್ಗದ ಕಥೆ.' ಅದನ್ನು ಓದಿ ರೋಮಾಂಚವಾಯಿತು. ಅದ್ಭುತ ಕಥೆಯ ಹಾಗಿತ್ತು. ಪ್ರಾಚೀನಕಾಲದ ಇತಿಹಾಸವನ್ನು ಮೊದಲಿಟ್ಟು, ಹತ್ತಿ ಮೊಟ್ಟಮೊದಲು ಬೆಳೆದುದು ಯಾವಾಗ, ಅದರ ಪ್ರಗತಿ, ದೇಶವಿದೇಶಗಳ ನಡುವೆ ಹತ್ತಿಯ ವ್ಯಾಪಾರ, ಇತ್ಯಾದಿಗಳನ್ನು ತಿಳಿಸಿತ್ತು. ಬೇರೆಬೇರೆ ಕಾಲದಲ್ಲಿ ಯಾರ ಆಡಳಿತದಲ್ಲಿ ವ್ಯಾಪಾರದ ಒಪ್ಪಂದಗಳಾದವು ? ಕೆಲವು ದೇಶ ಹತ್ತಿಯನ್ನು ಕೊಳ್ಳುತ್ತವೆ. ಕೆಲವು ಬಟ್ಟೆಯನ್ನು ತರಿಸುತ್ತವೆ. ಏಕೆ ? ತನಗೆ ಬೇಕಾದ ಹತ್ತಿಯನ್ನು ತಾನೇ ಏಕೆ ಬೆಳೆಯಬಾರದು ಪ್ರತಿಯೊಂದು ದೇಶವೂ ? ಇದರಿಂದ ಅರ್ಥಶಾಸ್ತ್ರ, ವ್ಯವಸಾಯ ಶಾಸ್ತ್ರಗಳಿಗೆ ಪ್ರವೇಶವಾಗುತ್ತದೆ. ನಾನಾ ಬಗೆಯ ಹತ್ತಿ, ಯಾವ ನೆಲದಲ್ಲಿ ಹತ್ತಿ ಬೆಳೆಯುತ್ತದೆ, ಅದನ್ನು ಬೆಳೆಯುವುದು ಹೇಗೆ, ಬೇರೆಬೇರೆ ಬಗೆಗಳನ್ನು ಎಲ್ಲಿಂದ ತರಿಸಬೇಕು. ಮುಂತಾದುವನ್ನು ಕಲಿಸಬೇಕು. ಹೀಗೆ ಈಸ್ಟ್ ಇಂಡಿಯಾ ಕಂಪನಿಯ ಪೂರ್ಣ ಇತಿಹಾಸಕ್ಕೇ ಅವರು ಇಲ್ಲಿಗೆ ಏಕೆ ಬಂದರೋ, ನಮ್ಮ ಕೈನೂಲಿನ ಕೈಗಾರಿಕೆಯನ್ನು ಹೇಗೆ ನಾಶಮಾಡಿದರೋ, ಮೊದಲು ಹಿಂದುಸ್ತಾನಕ್ಕೆ ವ್ಯಾಪಾರಕ್ಕಾಗಿ ಬಂದವರು ರಾಜಕೀಯ ಆಕಾಂಕ್ಷೆಯನ್ನು ಹೇಗೆ ಆವರು ಬೆಳೆಸಿಕೊಂಡರೋ, ಮೊಗಲ-ಮರಾಠರ ಪತನಕ್ಕೂ ಇಂಗ್ಲಿಷ್ ರಾಜ್ಯಕ್ಕೂ ಆ ಆಸೆ ಹೇಗೆ ಕಾರಣವಾಯಿತೋ-ಕೈಯಿಟ್ಟಂತಾಯಿತು. ಹೀಗೆ ಈ ಯೋಜನೆಯಲ್ಲಿ ಶಿಕ್ಷಣದ ಅವಕಾಶಕ್ಕೆ

ಕೊನೆಯೇ ಇಲ್ಲ. ಇದನ್ನೆಲ್ಲ ತನ್ನ ಬುದ್ಧಿಗೆ, ಜ್ಞಾಪಕಶಕ್ತಿಗೆ ಭಾರ ಹಾಕದೆ ಮಗು ಎಷ್ಟು ಬೇಗ ಕಲಿಯುತ್ತದೆ !

'ಇನ್ನೂ ವಿವರಿಸುತ್ತೇನೆ. ಜೀವಶಾಸ್ತ್ರ ಪಂಡಿತನೊಬ್ಬ ಉತ್ತಮ ಪಂಡಿತನಾಗಲು ಜೀವಶಾಸ್ತ್ರದ ಜೊತೆಗೆ ಇತರ ಶಾಸ್ತ್ರಗಳನ್ನೂ ಕಲಿಯಬೇಕು. ಮೂಲಶಿಕ್ಷಣವೂ ಒಂದು ಶಾಸ್ತ್ರ ಎನ್ನುವುದಾದರೆ ಅದರಿಂದಲೂ ಅಪಾರ ಜ್ಞಾನ ಭಾಂಡಾರದ ಬಾಗಿಲು ತೆರೆಯುತ್ತದೆ. ತಕಲಿಯ ಉದಾಹರಣೆಯನ್ನು ಮುಂಬರಿಸೋಣ. ಬರೀ ನೂಲುವ ಯಾಂತ್ರಿಕ ಕ್ರಿಯೆಯಷ್ಟಕ್ಕೇ ಗಮನ ಕೊಡದೆ—ಅದರಲ್ಲಂತೂ ಅವನು ನಿಪುಣನಾಗಲೇಬೇಕು—ಅದರ ಆಂತರ್ಯದ ಕಡೆ ಗಮನ ಕೊಡುವ ಶಿಕ್ಷಕ ತಕಲಿಯ ನಾನಾ ಅಂಶಗಳನ್ನು ಲಕ್ಷ್ಯಪೂರ್ವಕ ಗ್ರಹಿಸಿಯಾನು. ತಕಲಿಗೆ ಹಿತ್ತಾಳೆಯ ಬಿಲ್ಲೆ, ಉಕ್ಕಿನ ಕದಿರು ಏಕೆ ಎಂದು ಪ್ರಶ್ನಿಸಿಕೊಳ್ಳುತ್ತಾನೆ. ಪ್ರಾರಂಭದಲ್ಲಿ ತಕಲಿಯ ಬಿಲ್ಲೆಯನ್ನು ಯಾವುದರಿಂದಲಾದರೂ ಮಾಡುತ್ತಿದ್ದರು. ಅದಕ್ಕೂ ಹಿಂದೆ ಬಳಪದ್ದೋ ಮಣ್ಣಿನದೋ ಬಿಲ್ಲೆ, ಕಟ್ಟಿಗೆಯ ಕದಿರು ಇತ್ತು. ತಕಲಿಯನ್ನು ಶಾಸ್ತ್ರೀಯವಾಗಿ ವೈಜ್ಞಾನಿಕವಾಗಿ ಉತ್ತಮಗೊಳಿಸಿದಾರೆ. ಅದರ ಬಿಲ್ಲೆ ಹಿತ್ತಾಳೆ, ಕದಿರು ಉಕ್ಕು—ಹೀಗೆ ಮಾಡಲು ಕಾರಣವಿದೆ. ಆ ಕಾರಣವನ್ನು ಶಿಕ್ಷಕ ಕಂಡುಹಿಡಿಯಬೇಕು. ಆಮೇಲೆ ಆ ಬಿಲ್ಲೆಗೆ ಇಷ್ಟೇ ಏಕೆ ವ್ಯಾಸ, ಹೆಚ್ಚಾಗಲಿ ಕಡಮೆಯಾಗಲಿ ಏಕೆ ಬೇಡ ಎಂಬ ಪ್ರಶ್ನೆ ಹಾಕಿಕೊಳ್ಳಬೇಕು. ಈ ಪ್ರಶ್ನೆಗಳನ್ನು ತೃಪ್ತಿಕರವಾಗಿ ಬಿಡಿಸಿ ಅದರ ಗಣಿತವನ್ನರಿತ ಮೇಲೆ, ಆ ವಿದ್ಯಾರ್ಥಿ ಒಳ್ಳೇ ಯಂತ್ರಶಿಲ್ಪಿಯಾಗುತ್ತಾನೆ, ತಕಲಿಯೆ ಅವನ ಕಾಮಧೇನುವಾಗುತ್ತದೆ. ಇದರ ಮೂಲಕ ಕಲಿಸಬಹುದಾದ ಜ್ಞಾನಕ್ಕೆ ತುದಿಯೇ ಇಲ್ಲ. ನಿಮ್ಮ ಶ್ರದ್ಧೆ, ಶಕ್ತಿಗಳೇ ಅದಕ್ಕೆ ಮಿತಿ. ಮೂರು ವಾರಗಳಿಂದ ನೀವು ಇಲ್ಲಿದೀರಿ. ಈ ಯೋಜನೆಯಲ್ಲಿ ನಿಮಗೆ ಗಾಢ ಆಸಕ್ತಿ ಹುಟ್ಟಿ 'ನಾನು ಇದನ್ನು ಮಾಡಿಯೇನು, ಇಲ್ಲವೆ ಮಡಿದೇನು' ಎಂದು ಹೇಳುವಂತಾದರೆ ನೀವು ಇಲ್ಲಿ ಕಳೆದ ಕಾಲ ಪ್ರಯೋಜನಕರವಾಯಿತು.

'ನೂಲುವುದನ್ನು ಇಷ್ಟು ವಿಸ್ತರಿಸಿ ಹೇಳಲು ಕಾರಣ, ನನಗದು ಗೊತ್ತು. ನಾನು ಬಡಗಿಯಾಗಿದ್ದರೆ ನನ್ನ ಮಗನಿಗೆ ಇದೆಲ್ಲವನ್ನೂ ಮರಗೆಲಸದ ಮೂಲಕವೇ ಕಲಿಸುತ್ತಿದ್ದೆ. ರಟ್ಟಿನ ಕೆಲಸಗಾರನಾಗಿದ್ದರೆ ರಟ್ಟಿನ ಕೆಲಸದ ಮೂಲಕ.

'ನಮಗೆ ಬೇಕಾದುದು ಪ್ರತಿಭಾವಂತರೂ ನಿಜವಾದ ನಿಷ್ಠೆಯುಳ್ಳವರೂ,

ದಿನ ದಿನವೂ ಹುಡುಗರಿಗೆ ಏನು ಹೇಳಬೇಕೆಂಬುದನ್ನು ಯೋಚಿಸುವವರೂ ಆದ ಶಿಕ್ಷಕರು. ಭಾರವಾದ ಗ್ರಂಥಗಳಿಂದ ಶಿಕ್ಷಕ ಈ ಜ್ಞಾನವನ್ನು ಪಡೆಯಲಾರ. ತನ್ನ ಅವಲೋಕನ ಶಕ್ತಿ, ಆಲೋಚನಾ ಶಕ್ತಿಗಳ ಮೂಲಕ ಪಡೆದು ಒಂದು ಕೈಗಾರಿಕೆಯ ನೆರವಿನಿಂದ ಬಾಯಿಮಾತಿನ ಮೂಲಕ ವಿದ್ಯಾರ್ಥಿಗಳಿಗೆ ಅದನ್ನು ತಿಳಿಸಬೇಕು. ಹೀಗೆಂದರೆ– ಶಿಕ್ಷಣ ವಿಧಾನದಲ್ಲಿ ಒಂದು ಕ್ರಾಂತಿ, ಶಿಕ್ಷಕನ ದೃಷ್ಟಿಯಲ್ಲಿ ಒಂದು ಕ್ರಾಂತಿ. ಇಲ್ಲಿಯವರೆಗೆ ನೀವು ವಿದ್ಯಾಧಿಕಾರಿಗಳ (ಇನ್‌ಸ್ಪೆಕ್ಟರರ) ವರದಿಗಳನ್ನು ನಂಬಿದಿರಿ. ಅಧಿಕಾರಿಗೆ ಯಾವುದು ಇಷ್ಟವೋ ಅದನ್ನು ಮಾಡಿದರೆ ನಿಮ್ಮ ಶಾಲೆಗಳಿಗೆ ಹೆಚ್ಚು ಹಣ, ನಿಮಗೆ ಹೆಚ್ಚು ಸಂಬಳ ಬರುತ್ತದೆ ಎಂದು ಹಾಗೆ ಮಾಡಿದಿರಿ. ಆದರೆ ಹೊಸ ಶಿಕ್ಷಕನಿಗೆ ಅದರ ಪರಿವೆಯಿಲ್ಲ. 'ನನ್ನ ವಿದ್ಯಾರ್ಥಿ ಉತ್ತಮ ಮನುಷ್ಯನಾದ; ಅದಕ್ಕಾಗಿ ನನ್ನ ಸರ್ವಶಕ್ತಿಯನ್ನೂ ವಿನಿಯೋಗಿಸಿದೇನೆ; ನನ್ನ ಕರ್ತವ್ಯವನ್ನು ನಾನು ಮಾಡಿದೇನೆ. ನನಗಷ್ಟೇ ಸಾಕು' ಎನ್ನುತ್ತಾನೆ.೪೯

೫೫

## ಕೈಗೆಲಸದ ಮೂಲಕ ಶಿಕ್ಷಕರ ತರಬೇತು

ಪ್ರಶ್ನೆ: ಶಿಕ್ಷಕರನ್ನು ತರಬೇತು ಮಾಡುವಾಗ ಮೊದಲು ಅವರಿಗೆ ಕೈಗಾರಿಕೆಯನ್ನು ಕಲಿಸಿ, ಆಮೇಲೆ ಆ ಕೈಗಾರಿಕೆಯ ಮೂಲಕ ಶಿಕ್ಷಣ ಕೊಡುವ ವಿಧಾನವನ್ನು ಚೆನ್ನಾಗಿ ವಿವರಿಸಿದರೆ ಆಗದೆ? ಈಗ ಅವರನ್ನು ಏಳು ವರ್ಷದ ಮಕ್ಕಳಂತೆ ಭಾವಿಸಿ ಎಲ್ಲವನ್ನೂ ಕೈಗಾರಿಕೆಯ ಮೂಲಕ ಮತ್ತೆ ಕಲಿಸುತ್ತಿದಾರೆ. ಹೀಗಾದರೆ ಹೊಸ ಪದ್ಧತಿಯನ್ನು ದಕ್ಷತೆಯಿಂದ ಕಲಿತು ಸಮರ್ಥ ಶಿಕ್ಷಕರಾಗಲು ಅವರಿಗೆ ಬಹಳ ಕಾಲ ಹಿಡಿಯಬಹುದು.

ಉತ್ತರ: ಊಹೂಂ, ಬಹಳ ಕಾಲ ಹಿಡಿಯದು. ನನ್ನ ಬಳಿಗೆ ಬಂದಾಗ ಶಿಕ್ಷಕನಿಗೆ ಗಣಿತ, ಇತಿಹಾಸ, ಇತರ ವಿಷಯಗಳು ತಕ್ಕ ಮಟ್ಟಿಗೆ ಗೊತ್ತಿವೆ ಎನ್ನೋಣ. ಅವನಿಗೆ ನಾನು ನೂಲುವುದನ್ನೋ ರಟ್ಟಿನ ಪೆಟ್ಟಿಗೆ ಮಾಡುವುದನ್ನೋ ಕಲಿಸುತ್ತೇನೆ. ಅದನ್ನು ಆತ ಕಲಿಯುವಾಗ ಗಣಿತ, ಇತಿಹಾಸ, ಭೂಗೋಳಗಳನ್ನು ಆ ಕೈಗೆಲಸದ ಮೂಲಕ ಹೇಗೆ ಕಲಿಯಬಹುದಾಗಿತ್ತೋ ತಿಳಿಸುತ್ತೇನೆ. ಕೈಗೆಲಸವನ್ನೂ ತನ್ನ ಜ್ಞಾನವನ್ನೂ ಹೇಗೆ ಸಮನ್ವಯ ಮಾಡಬಹುದೋ ಆತ ತಿಳಿದುಕೊಳ್ಳುತ್ತಾನೆ. ಇದಕ್ಕೆ ದೀರ್ಘ

ಕಾಲ ಬೇಕಿಲ್ಲ. ಇನ್ನೊಂದು ಉದಾಹರಣೆ—ನಮ್ಮ ಏಳು ವರ್ಷದ ಮಗುವಿನೊಡನೆ ನಾನು ಮೂಲಶಿಕ್ಷಣ ಶಾಲೆಗೆ ಹೋಗುತ್ತೇನೆ. ಇಬ್ಬರೂ ನೂಲುವುದನ್ನು ಕಲಿಯುತ್ತೇವೆ. ನಾನು ಹಿಂದೆ ಪಡೆದ ಜ್ಞಾನವೆಲ್ಲವೂ ನೂಲುವಿಕೆಯೊಡನೆ ಸಮನ್ವಯವಾಗುತ್ತದೆ. ಆ ಹುಡುಗನಿಗೆ ಎಲ್ಲವೂ ಹೊಸದು. ಎಪ್ಪತ್ತು ವರ್ಷದ ಮುದಿ ತಂದೆಗೆ ಅದೆಲ್ಲ ಪುನಃ ಪಾಠವೇ. ಆದರೆ ಹಳೆಯ 'ತಿಳಿವೆಲ್ಲ ಹೊಸ ರೂಪು ತಳೆಯುತ್ತದೆ. ಈ ಕ್ರಿಯೆಗೆ ಕೆಲವು ವಾರಕ್ಕಿಂತ ಹೆಚ್ಚು ಬೇಕಾಗಿಲ್ಲ ಅತನಿಗೆ. ಹೀಗೆ ಶಿಕ್ಷಕ ತಾನು ಎಂಟು ವರ್ಷದ ಮಗುವಿನ ಹುರುಪು ಗಮನಗಳನ್ನು ಅಳವಡಿಸಿಕೊಳ್ಳದಿದ್ದರೆ ಯಾಂತ್ರಿಕ-ನೂಲುಗಾರನಾಗುತ್ತಾನೆ ; ಈ ಹೊಸ ಪದ್ಧತಿಗೆ ಹೊಂದಿಕೊಳ್ಳಲಾರ.

ಪ್ರ : ಮೆಟ್ರಿಕ್ಯುಲೇಷನ್ ಆದ ಹುಡುಗ ಇಷ್ಟಪಟ್ಟರೆ ಕಾಲೇಜಿಗೆ ಹೋಗಬಹುದು. ಮೂಲಶಿಕ್ಷಣದ ಪಾಠಕ್ರಮವನ್ನು ಮುಗಿಸಿದ ಹುಡುಗ ಕಾಲೇಜಿಗೆ ಹೋಗಬಲ್ಲನೆ ?

ಉ : ಮೆಟ್ರಿಕ್ಯುಲೇಷನ್ ಮಾಡಿದ ಹುಡುಗ ಮೂಲಶಿಕ್ಷಣ ಪಡೆದ ಹುಡುಗ, ಇಬ್ಬರೊಳಗೆ ಕಡೆಯವನ ಸಾಮರ್ಥ್ಯ ಚೆನ್ನಾಗಿ ವಿಕಾಸಗೊಳ್ಳುತ್ತದೆ; ಆದುದರಿಂದ ಅವನು ಮೊದಲಿನವನಿಗಿಂತ ಮೇಲುಗೈಯಾಗುತ್ತಾನೆ. ಕಾಲೇಜಿಗೆ ಹೋದಾಗ ಮೆಟ್ರಿಕ್ಯುಲೇಷನ್ ಆದವರು ಅಸಹಾಯರಾಗುವಂತೆ ಇವನು ಆಗುವುದಿಲ್ಲ.

ಪ್ರ : ಮೂಲಶಿಕ್ಷಣ ಶಾಲೆಗೆ ಸೇರಲು ಮಗುವಿಗೆ ಕನಿಷ್ಠ ಏಳು ವರ್ಷವಾಗಿರಬೇಕು ಎನ್ನುತ್ತಾರೆ. ಇದೇನು ದೇಹದ ವಯಸ್ಸೋ ಮನಸ್ಸಿನ ವಯಸ್ಸೋ ?

ಉ : ಕನಿಷ್ಠ ಮಿತಿ ಏಳುವರ್ಷವಾಗಿರಬೇಕು. ಕೆಲವರು ಹೆಚ್ಚು ವಯಸ್ಸಿನವರೂ ಇರಬಹುದು, ಕೆಲವರು ಕಡಮೆ ವಯಸ್ಸಿನವರೂ ಇರಬಹುದು. ಮೈಯ ವಯಸ್ಸು ಒಂದು; ಮನಸ್ಸಿನ ವಯಸ್ಸೇ ಒಂದು. ಅದನ್ನು ಗಮನಿಸಬೇಕು. ಒಂದು ಮಗುವಿಗೆ ಏಳನೆಯ ವಯಸ್ಸಿಗೇ ಕೈಗೆಲಸಮಾಡುವಷ್ಟು ಬಲ ಬಂದಿರಬಹುದು. ಇನ್ನೊಂದಕ್ಕೆ ಎಂಟು ವರ್ಷದವರೂ ಸಾಧ್ಯವಿಲ್ಲದಿರಬಹುದು. ಆದುದರಿಂದ ಗಟ್ಟಿ ನಿಯಮ ಯಾವುದನ್ನೂ ಮಾಡಬಾರದು. ಎಲ್ಲಾ ಅಂಶಗಳನ್ನೂ ಆಲೋಚಿಸಬೇಕು.

ಗಾಂಧೀಜೀ ಮುಂಬರಿಸಿದರು : ' ಈ ಪ್ರಶ್ನೆಗಳನ್ನು ಕೇಳಿದರೆ ನಿಮ್ಮಲ್ಲಿ

ಅನೇಕರಿಗೆ ಸಂದೇಹಗಳಿವೆ ಎಂದು ಕಾಣುತ್ತದೆ. ಕೆಲಸ ಮಾಡಲು ಇದು ಸರಿಯಾದ ದಾರಿಯಲ್ಲ. ದೃಢವಾದ ಶ್ರದ್ಧೆ ಬೇಕು ನಮ್ಮಲ್ಲಿ. ನಮ್ಮ ಕೋಟ್ಯಂತರ ಮಕ್ಕಳಿಗೆ ಜೀವನ ಶಿಕ್ಷಣ ಕೊಡಲು ಮೂಲ ಶಿಕ್ಷಣವೇ ಅಗತ್ಯ ಎಂದು ನನಗಿರುವ ಹಾಗೆ ನಿಮಗೂ ನಂಬಿಕೆಯಿದ್ದರೆ ನಿಮ್ಮ ಕೆಲಸ ವೃದ್ಧಿಯಾಗುತ್ತದೆ. ನಿಮಗೆ ಆ ವಿಶ್ವಾಸವಿಲ್ಲದಿದ್ದರೆ ನಿಮಗೆ ತಪಬೇತು ಕೊಡುವವರಲ್ಲಿ ಏನೋ ಲೋಪವಿದೆ. ಬೇರೇನಾದರೂ ನಿಮಗೆ ನೀಡಲಿ ಬಿಡಲಿ, ನಿಮ್ಮೊಳಗೆ ಈ ವಿಶ್ವಾಸವನ್ನು ಅವರು ತುಂಬುವಂತಿರಬೇಕು.

## ಕೆಲವು ಶಿಕ್ಷಣದ ಒಗಟು

ಪ್ರಶ್ನೆ: ಮೂಲಶಿಕ್ಷಣದ ಯೋಜನೆ ಹಳ್ಳಿಗಳಿಗಾಗಿ. ಪಟ್ಟಣದವರಿಗೇನೂ ದಾರಿಯಿಲ್ಲವೆ? ಅವರು ಹಳೆಯ ದಾರಿಯನ್ನೇ ಹಿಡಿಯಬೇಕೆ?

ಉ: ಅದು ಸಮಂಜಸ ಪ್ರಶ್ನೆ, ಒಳ್ಳೆಯದು. ಇದಕ್ಕೆ ಆಗಲೇ ಹರಿಜನದಲ್ಲಿ ಉತ್ತರ ಹೇಳಿದೇನೆ. ಸದ್ಯಕ್ಕೆ ಇಷ್ಟೇ ಸಾಕು ನಮಗೆ. ಇದೇ ಹೊರಬಾರದ ಹೊರೆಯಾಗಿದೆ. ಏಳು ಲಕ್ಷ ಹಳ್ಳಿಗಳ ಶಿಕ್ಷಣ ಸಮಸ್ಯೆಯನ್ನು ಹರಿಸಿದರೆ ಸದ್ಯಕ್ಕೆ ಸಾಕು. ಶಿಕ್ಷಣ ಪಂಡಿತರು ಪಟ್ಟಣಗಳ ವಿಷಯವನ್ನೂ ಆಲೋಚಿಸುತ್ತಿದಾರೆ. ಆದರೆ ಹಳ್ಳಿಗಳ ಜೊತೆಗೆ ಪಟ್ಟಣಗಳ ಸಮಸ್ಯೆಯನ್ನೂ ತೆಗೆದುಕೊಂಡರೆ, ನಮ್ಮ ಶಕ್ತಿಯೆಲ್ಲ ವ್ಯರ್ಥವಾದೀತು.

ಪ್ರ: ಒಂದು ಹಳ್ಳಿಯಲ್ಲಿ ಮೂರು ಶಾಲೆಗಳು. ಒಂದೊಂದರಲ್ಲಿ ಒಂದು ಕೈಗೆಲಸವನ್ನು ಕಲಿಸುತ್ತಾರೆ. ಒಂದರಲ್ಲಿ ಕಲಿಯಲು ಹೆಚ್ಚು ಅವಕಾಶವಿರಬಹುದು, ಇನ್ನೊಂದರಲ್ಲಿ ಕಡಿಮೆ. ಆಗ ಮಗು ಯಾವ ಶಾಲೆಗೆ ಹೋಗಬೇಕು?

ಉ: ಇಂಥ ವ್ಯಾಪ್ತಿದೋಷ ಆಗಬಾರದು. ನಮ್ಮ ಹಳ್ಳಿಗಳಲ್ಲಿ ಬಹುಭಾಗ ಬಹಳ ಚಿಕ್ಕವು; ಒಂದು ಶಾಲೆಗಿಂತ ಹೆಚ್ಚು ಹೊರಲಾರವು. ದೊಡ್ಡ ಹಳ್ಳಿಯಲ್ಲಿ ಹೆಚ್ಚು ಇರಲೂ ಬಹುದು. ಇಂಥಲ್ಲಿ ಎರಡೂ ಶಾಲೆಗಳಲ್ಲಿ ಒಂದೇ ಕೈಗೆಲಸವನ್ನು ಕಲಿಸಬೇಕು. ಆದರೆ ನಾನು ಯಾವ ಸುಗ್ರೀವಾಜ್ಞೆಯನ್ನೂ ಹಾಕಲಾರೆ. ಇಂಥ ಸಂದರ್ಭಗಳಲ್ಲಿ ಅನುಭವವೇ ಉತ್ತಮ ಮಾರ್ಗದರ್ಶಕ. ಯಾವ ಯಾವ ಕೈಗಾರಿಕೆ ಎಷ್ಟು ಮಟ್ಟಿಗೆ ರುಚಿಸೀತೋ, ವಿದ್ಯಾರ್ಥಿ ಶಕ್ತಿಯನ್ನು ಎಷ್ಟುಮಟ್ಟಿಗೆ ಹೊರಹೊಮ್ಮಿಸೀತೋ ಪರೀಕ್ಷಿಸಬೇಕು. ಯಾವ ಕೈಗಾರಿಕೆಯನ್ನೇ ಆರಿಸಿಕೊಳ್ಳಿ, ಅದು ಎಲ್ಲಾ ವಿದ್ಯಾರ್ಥಿಗಳ ಶಕ್ತಿಯನ್ನು

ಪೂರ್ಣವಾಗಿ ಸಮವಾಗಿ ಅರಳಿಸಬೇಕು. ಅದು ಗ್ರಾಮೋದ್ಯೋಗವಾಗಿರಬೇಕು.

ಪ್ರ : ಮುಂದೆ ಯಾವುದೋ ಬೇರೆ ಕಸಬು ಹಿಡಿಯುವ ಮಗು ಏಳು ವರ್ಷ ಕೈಗೆಲಸ ಕಲಿಯುತ್ತ ಕಾಲಹರಣ ಮಾಡಬೇಕೆ? ಮುಂದೆ ಲೇವಾದೇವಿ ಮಾಡಬೇಕಾದ ಒಬ್ಬ ಸಾಹುಕಾರನ ಮಗ ಏಳು ವರ್ಷ ನೂಲುವುದನ್ನು ಕಲಿಯಬೇಕೆ?

ಉ : ಹೊಸ ಶಿಕ್ಷಣ ಪದ್ಧತಿಯ ವಿಷಯ ಎಳ್ಳಷ್ಟೂ ಗೊತ್ತಿಲ್ಲ ಎಂದು ಈ ಪ್ರಶ್ನೆ ಹೇಳುತ್ತದೆ. ಮೂಲ ಶಿಕ್ಷಣ ಪದ್ಧತಿಯಲ್ಲಿ ಹುಡುಗ ಬರೀ ಕೈಗಾರಿಕೆ ಕಲಿಯಲಿಕ್ಕೇ ಶಾಲೆಗೆ ಹೋಗುವುದಿಲ್ಲ. ಪ್ರಾಥಮಿಕ ಶಿಕ್ಷಣ ಪಡೆಯಲು, ಕೈಗೆಲಸದ ಮೂಲಕ ತನ್ನ ಬುದ್ಧಿ ವಿಕಾಸಮಾಡಿಕೊಳ್ಳಲು, ಹೋಗುತ್ತಾನೆ. ಈ ಹೊಸ ಯೋಜನೆಯಂತೆ ಏಳು ವರ್ಷ ಪ್ರಾಥಮಿಕ ಶಿಕ್ಷಣ ಪಡೆದ ಹುಡುಗ, ಸಾಧಾರಣ ಶಾಲೆಯಲ್ಲಿ ಏಳುವರ್ಷ ಕಲಿತ ಹುಡುಗನಿಗಿಂತ ಉತ್ತಮ ಲೇವಾದೇವಿಗಾರನಾಗುತ್ತಾನೆ–ಇದು ನನ್ನ ವಾದ. ಸಾಧಾರಣ ಶಾಲೆಯ ಹುಡುಗ ಲೇವಾದೇವಿಯ ಶಾಲೆಗೆ ಹೋದಾಗ ಒದೆದಾಡುತ್ತಾನೆ; ಅವನ ಶಕ್ತಿಗಳೆಲ್ಲವೂ ತರಬೇತಾಗಿಲ್ಲ. ದುರಭಿಮಾನ ಬೇಗ ಹೋಗುವುದಿಲ್ಲ. ಈ ಹೊಸ ಶಿಕ್ಷಣ ಯೋಜನೆ ಸ್ವಲ್ಪ ಅಕ್ಷರ ಶಿಕ್ಷಣ, ಸ್ವಲ್ಪ ಉದ್ಯೋಗ ಶಿಕ್ಷಣ ಅಲ್ಲ ಎಂಬ ಬೀಜಸೂತ್ರವನ್ನು ನಿಮಗೆ ತಿಳಿಯುವಂತೆ ಹೇಳಿದರೆ, ಇಷ್ಟೊತ್ತಿಗೆ ಕೃತಕೃತ್ಯನಾದಂತೆ. ಇದು ಕೈಗೆಲಸದ ಮೂಲಕ ಸಂಪೂರ್ಣ ಪ್ರಾಥಮಿಕ ಶಿಕ್ಷಣ.

ಪ್ರ : ಪ್ರತಿಯೊಂದು ಶಾಲೆಯಲ್ಲೂ ಒಂದಕ್ಕಿಂತ ಹೆಚ್ಚು ಕಸಬನ್ನು ಕಲಿಸುವುದು ಒಳಿತಲ್ಲವೆ? ಒಂದೇ ಕೆಲಸವನ್ನು ದಿನದಿನವೂ ವರ್ಷ ವರ್ಷವೂ ಮಾಡಿ ಮಕ್ಕಳು ಬೇಸರಗೊಳ್ಳರೆ?

ಉ : ಒಂದು ತಿಂಗಳು ನೂಲುವಿಕೆಯನ್ನು ಕಲಿಸಿದ ಮೇಲೆ ಶಿಕ್ಷಕ ನಿರುತ್ಸಾಹಿ, ಮಂದ ಆದರೆ ಅವನನ್ನು ತೆಗೆದುಹಾಕುತ್ತೇನೆ. ಒಂದೇ ವಾದ್ಯದಲ್ಲಿ ಸದಾ ಹೊಸ ಹೊಸ ಸಂಗೀತವನ್ನು ಬಾರಿಸರೆ? ಹಾಗೆಯೆ ಒಂದೊಂದು ಪಾಠದಲ್ಲೂ ಹೊಸತನವಿದ್ದೇ ಇರುತ್ತದೆ. ಈ ಕೈಗಾರಿಕೆಯನ್ನು ಬಿಟ್ಟು ಆ ಕೈಗಾರಿಕೆ ಎಂದು ಬದಲಿಸುತ್ತ ಹೋಗುವ ಮಗು ಎಲ್ಲೂ ನೆಲೆಯಿಲ್ಲದೆ ಕೊಂಬೆಯಿಂದ ಕೊಂಬೆಗೆ ಹಾರುವ ಕೋತಿಯಂತಾದೀತು. ನಮ್ಮ ಚರ್ಚೆಗಳಲ್ಲಿ ಆಗಲೇ ಹೇಳಿದೇನೆ–ಶಾಸ್ತ್ರೀಯವಾಗಿ ನೂಲುವುದನ್ನು ಕಲಿಸಬೇಕೆಂದರೆ ಬರೀ ನೂಲುವುದಲ್ಲ, ಇನ್ನೂ ಹಲವಾರು ಅಗತ್ಯ. ಆದಷ್ಟು ಬೇಗ ಮಗುವಿಗೆ ತನ್ನದೇ

ತಕಲಿಯನ್ನು ಸುತ್ತುಗವನ್ನು (Winder) ಮಾಡಿಕೊಳ್ಳಲು ಕಲಿಸಬೇಕು. ಆದುದರಿಂದ ನಾನು ಪ್ರಾರಂಭದಲ್ಲಿ ಹೇಳಿದಂತೆ, ಶಿಕ್ಷಕ ಈ ಉದ್ಯೋಗವನ್ನು ಶಾಸ್ತ್ರೀಯ ಮನೋವೃತ್ತಿಯಿಂದ ಗ್ರಹಿಸಿದರೆ ತನ್ನ ವಿದ್ಯಾರ್ಥಿಗಳಿಗೆ ಹಲವು ರೀತಿಯಲ್ಲಿ ತಿಳಿಸಿ ಹೇಳಿಯಾನು. ಅವೆಲ್ಲವೂ ಅವನ ಸಕಲ ಶಕ್ತಿಗಳ ವಿಕಾಸಕ್ಕೆ ನೆರವಾದಾವು.*೦

## ೬

## 'ಪಶ್ಚಿಮದಿಂದ ತಂದ ಎರವಲಲ್ಲ'

[ಅಕ್ಟೋಬರ್ ೧೯೩೮ರಲ್ಲಿ ವರ್ಧಾದಲ್ಲಿ ನಡೆದ ಮೂಲಶಿಕ್ಷಣ ಸಮ್ಮೇಳನ ನೇಮಿಸಿದ ಸಮಿತಿಯ ವರದಿ-'ಮೂಲ ರಾಷ್ಟ್ರೀಯ ಶಿಕ್ಷಣ'ದ ಎರಡನೆ ಆವೃತ್ತಿಯ ಮುನ್ನುಡಿ. ಸಂ.]

ಈ ಪುಸ್ತಕದ ಮೊದಲನೆ ಸಾವಿರ ಪ್ರತಿಗಳು ಮಾರಾಟವಾಗಿ ಹೋಗಿವೆ. ಡಾ|| ಜಾಕಿರ್ ಹುಸೇನರೂ ಅವರ ಸಮಿತಿಯೂ ಮೂಲ ರಾಷ್ಟ್ರೀಯ ಶಿಕ್ಷಣ ಎಂದು ಕರೆದ ವಿಷಯ ಭಾರತದೊಳಗೂ ಹೊರಗೂ ಆಸಕ್ತಿ ಹುಟ್ಟಿಸಿದೆ ಎನ್ನಲು ಈ ಸಂಗತಿಯೇ ಸಾಕ್ಷಿ. ಇದಕ್ಕಿಂತ ಕಡಮೆ ಆಕರ್ಷಣೀಯವಾದರೂ, ಸರಿಯಾದ ಹೆಸರು–ಗ್ರಾಮೋದ್ಯೋಗದ್ವಾರಾ ರಾಷ್ಟ್ರೀಯ ಗ್ರಾಮಶಿಕ್ಷಣ ಎನ್ನಬಹುದು. ಗ್ರಾಮ ಎಂದರೆ ಪ್ರೌಢ ಅಥವಾ ಇಂಗ್ಲೀಷ್ ಶಿಕ್ಷಣ ಅದರಲ್ಲಿ ಇರುವುದಿಲ್ಲ. ರಾಷ್ಟ್ರೀಯ ಎಂದರೆ ಈಗ ಸತ್ಯ-ಅಹಿಂಸೆಗಳ ಕುರುಹು. ಗ್ರಾಮೋದ್ಯೋಗದ್ವಾರಾ ಎಂದರೆ ಶಿಕ್ಷಕರು ಹಳ್ಳಿಯ ಹುಡುಗರಿಗೆ ಅವರ ಹಳ್ಳಿಯಲ್ಲೇ ಯಾವ ನಿರ್ಬಂಧವೂ ಇಲ್ಲದೆ, ಯಾವುದಾದರೊಂದು ಗ್ರಾಮೋದ್ಯೋಗವನ್ನಾರಿಸಿ, ಅದರ ಮೂಲಕ ಶಿಕ್ಷಣಕೊಟ್ಟು ಅವರ ಶಕ್ತಿಸಾಮರ್ಥ್ಯಗಳನ್ನು ಬೆಳೆಸುವುದು. ಹೀಗೆ ನೋಡಿದರೆ, ಹಳ್ಳಿಯ ಮಕ್ಕಳ ವಿದ್ಯಾಭ್ಯಾಸದಲ್ಲಿ ಇದೊಂದು ಕ್ರಾಂತಿ. ಯಾವ ರೀತಿಯಲ್ಲಿಯೂ ಇದು ಪಶ್ಚಿಮದಿಂದ ಎರವು ತಂದುದಲ್ಲ. ಪಾಠಕರು ಇದನ್ನು ನೆನಪಿಟ್ಟರೆ ಈ ಯೋಜನೆ ಚೆನ್ನಾಗಿ ಅರ್ಥವಾದೀತು. ಕೆಲವರು ಉತ್ತಮ ಶಿಕ್ಷಣ ಪಂಡಿತರು ಸೇರಿ ಏಕಾಗ್ರ ಪ್ರಯತ್ನದಿಂದ ಇದನ್ನು ಅಣಿಮಾಡಿದಾರೆ.*೧

## ೭
## ಮ. ಪ್ರ. ಸ್ಥಳೀಯ ಸಂಸ್ಥೆಗಳ ಮೇಲ್ಪಂಕ್ತಿ

ಕಳೆದ ವಾರ ಮಧ್ಯ ಪ್ರಾಂತ, ವಿದರ್ಭಗಳ ಸಂಸ್ಥೆಗಳ ಪ್ರತಿನಿಧಿಗಳ ಸಭೆಯೊಂದು ನಡೆಯಿತು. ಪ್ರವಚನಕ್ಕಾಗಿ ಗಾಂಧೀಜಿಯನ್ನು ಕರೆದಿದ್ದರು. ಅವರಲ್ಲಿ ಒಬ್ಬರು ಒಂದು ಪ್ರಶ್ನೆ ಕೇಳಿದರು—ಈ ಮೂಲ ಶಿಕ್ಷಣದ ಯೋಜನೆ ದೇಶದ ಆರ್ಥಿಕ, ರಾಜಕೀಯ ಪ್ರಗತಿಗೆ ಹೇಗೆ ನೆರವಾಗುತ್ತದೆ? ಗಾಂಧೀಜೀ ಆ ಪ್ರಶ್ನೆಗೆ ಉತ್ತರವಾಗಿಯೆ ಭಾಷಣ ಮಾಡಿದರು.

ಗಾಂಧೀಜಿ ಹೇಳಿದರು: 'ನೀವು ಈ ಪ್ರಶ್ನೆ ಕೇಳಿದುದು ನನಗೆ ಸಂತೋಷ. ಈಗಿನ ಪ್ರಾಥಮಿಕ ಶಿಕ್ಷಣ ದೇಶದ ಆರ್ಥಿಕ ಪ್ರಗತಿಯ ದೃಷ್ಟಿಯಿಂದ ರಚಿಸಿದುದೇ ಅಲ್ಲ ಎಂದು ಮೊದಲು ಹೇಳಿ, ಉತ್ತರ ಕೊಡುತ್ತೇನೆ. ರಾಜ್ಯ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಮಾಡುವ ವೆಚ್ಚಕ್ಕೆ ಯಾವ ಪ್ರತಿಫಲವೂ ಸಿಗುತ್ತಿಲ್ಲ. ಶ್ರೀ ಶುಕ್ಲರಂಥ ಕೆಲವರು ಆಡಳಿತಗಾರರು ಸಿಗುತ್ತಾರೆ, ಪ್ರೌಢ ಶಿಕ್ಷಣವೆನಿಸಿಕೊಳ್ಳುತ್ತಿರುವುದರಿಂದ ಎಂಬುದು ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಆಗುವ ವೆಚ್ಚಕ್ಕೆ ಸಮರ್ಥನೆಯಲ್ಲ. ಇದರಿಂದ ಇಂಗ್ಲೀಷ್ ಅರಿತವರು, ಪದವೀಧರರು ಇಲ್ಲದಿದ್ದರೆ ಭಾರತದ ಆಡಳಿತ ಸಾಧ್ಯವಿಲ್ಲವೆಂಬ ಶೋಚನೀಯ ಮೂಢ ಭ್ರಾಂತಿ ಒಡೆದು ಕಾಣುತ್ತದೆ. ಅಷ್ಟೇ. ಈಗಿನ ಪ್ರಾಥಮಿಕ ವಿದ್ಯಾಭ್ಯಾಸ ಬರೀ ಅಪಾರ ವ್ಯರ್ಥ್ಯ, ವಿದ್ಯಾರ್ಥಿಗಳಲ್ಲಿ ಎಲ್ಲೋ ಕೆಲವರು ಮಾತ್ರ ಪ್ರೌಢ ತರಗತಿಗಳಿಗೆ ಏರುತ್ತಾರೆ, ಇದರಿಂದ ಬಂದ ಅಕ್ಷರಜ್ಞಾನ ಸ್ಥಿರವಲ್ಲ, ಇಷ್ಟಾದರೂ ಈ ಶಿಕ್ಷಣ ಸಿಗುವುದು ನಮ್ಮ ಅಗಾಧ ಗ್ರಾಮಸಮುದಾಯದ ಸೆರಗಿಗೆ ಮಾತ್ರ ಎಂದು ಆ ಶಾಖಾಧಿಕಾರಿಗಳೇ ಒಪ್ಪಿಕೊಂಡಿದಾರೆ. ಮಧ್ಯ ಪ್ರಾಂತದ ಹಳ್ಳಿಗಳಲ್ಲಿ ಎಷ್ಟು ಅಲ್ಪ ಪ್ರಮಾಣದಲ್ಲಿವೆ ಪ್ರಾಥಮಿಕ ಶಾಲೆಗಳು? ಹಳ್ಳಿಗಳಲ್ಲಿರುವ ಈ ಒಂದೆರಡು ಶಾಲೆಗಳಿಂದಲೂ ಹಳ್ಳಿಗಳಿಗೇನೂ ಪ್ರಯೋಜನವಾಗುತ್ತಿಲ್ಲ.

'ಆದುದರಿಂದ ನೀವು ಕೇಳಿದ ಪ್ರಶ್ನೆ ಹುಟ್ಟುವುದೇ ಇಲ್ಲ. ಆದರೆ ಈ ಹೊಸ ಯೋಜನೆ ಯೋಗ್ಯ ಆರ್ಥಿಕ ತಳಹದಿಯ ಮೇಲೆ ನಿರ್ಮಿತವಾಗಿದೆ; ಇಲ್ಲಿ ಸಮಸ್ತ ಶಿಕ್ಷಣವೂ ಕೈಗಾರಿಕೆಯ ಮೂಲಕ. ವಿದ್ಯಾಭ್ಯಾಸ, ಅದರ ಜೊತೆಗೆ ಒಂದು ಕೈಗಾರಿಕೆಯ ಶಿಕ್ಷಣ—ಅಲ್ಲ; ಕೈಗಾರಿಕೆಯ ಮೂಲಕ ಸಮಸ್ತ

ವಿದ್ಯಾಭ್ಯಾಸ. ಆದುದರಿಂದ ನೇಕಾರಿಕೆಯ ಮೂಲಕ ಶಿಕ್ಷಣ ಪಡೆದ ಒಬ್ಬ ವಿದ್ಯಾರ್ಥಿ ಬರೀ ನೇಕಾರನಿಗಿಂತ ಖಂಡಿತವಾಗಿ ಉತ್ತಮನಾಗುತ್ತಾನೆ. ನೇಕಾರಿಗೆ ಆರ್ಥಿಕವಾಗಿ ವ್ಯರ್ಥವಲ್ಲ; ಯಾರೂ ಹಾಗೆನ್ನರು. ಈ ನೇಕಾರನಿಗೆ ಎಲ್ಲಾ ಉಪಕರಣಗಳೂ ಗೊತ್ತು, ಎಲ್ಲಾ ವಿಧಾನಗಳೂ ಅದರ ತಂತ್ರವೂ ಗೊತ್ತು. ನೇಯ್ಗೆ ಕಸಬುದಾರನಿಗಿಂತ ಇವನ ಕೆಲಸ ಉತ್ತಮವಾಗಬೇಕು. ಕೆಲವು ತಿಂಗಳಿಂದ ನಡೆದಿರುವ ಈ ಪ್ರಯೋಗದ ಆರ್ಥಿಕ ಫಲವನ್ನೂ ಪರಿಶೀಲಿಸಿ ನೋಡಿ. ಶ್ರೀಮತಿ ಆಶಾದೇವಿ ಅಂಕೆ ಅಂಶಗಳನ್ನು ಸಂಗ್ರಹಿಸಿದಾಳೆ. ನಮ್ಮ ನಿರೀಕ್ಷೆಗಿಂತ ಬಹಳ ಮುಂದೆ ಹೋಗಿದೆ ಪರಿಣಾಮ. ಇದನ್ನೇ ನಾನು ಸ್ವಾವಲಂಬಿ ಶಿಕ್ಷಣ ಎನ್ನುವುದು. ಸ್ವಾವಲಂಬಿ ಎಂದರೆ ಇದಕ್ಕೆ ಹಾಕಿದ ಬಂಡವಾಳವೆಲ್ಲವೂ ತಿರುಗಿ ಬರುತ್ತದೆ ಎಂದಲ್ಲ. ವಿದ್ಯಾರ್ಥಿಗಳು ಮಾಡಿದ ಪದಾರ್ಥಗಳನ್ನು ಮಾರಿದರೆ ಶಿಕ್ಷಕರ ವೇತನವಾದರೂ ಬರುತ್ತದೆ ಎಂದು. ಮೂಲ ಶಿಕ್ಷಣದ ಆರ್ಥಿಕಾಂಶ ಇದರಿಂದ ಸ್ವಯಂ ಸ್ಪಷ್ಟವಾಗುತ್ತದೆ.

‘ ಇನ್ನೊಂದು ಅಂಶವಿದೆ, ರಾಷ್ಟ್ರೀಯ ಜಾಗೃತಿಯದು. ಗ್ರಾಮೋದ್ಯೋಗಗಳ ಬಗ್ಗೆ ಕುಮಾರಪ್ಪ ಸಮಿತಿಯ ವರದಿಯನ್ನು ನೀವು ಓದಿದೀರೋ ಇಲ್ಲವೋ. ನಮ್ಮ ಸರಾಸರಿ ವಾರ್ಷಿಕಾದಾಯ ೭೦ರೂ. ಎಂಬ ಸಂಪ್ರದಾಯವಿದೆ. ಆದರೆ ಮಧ್ಯ ಪ್ರಾಂತದ ಹಳ್ಳಿಗಳಲ್ಲಿ ೧೨-೧೪ರ ರೂಪಾಯಿಗೆ ಹೆಚ್ಚು ಇಲ್ಲ ವಾರ್ಷಿಕಾದಾಯ ಎಂಬುದನ್ನು ಅವರು ತೋರಿಸಿ ಕೊಟ್ಟಿದಾರೆ. ನೂಲುವುದನ್ನೂ ಇತರ ಗ್ರಾಮೋದ್ಯೋಗಗಳನ್ನೂ ಮೂಲಶಿಕ್ಷಣಕ್ಕೆ ಆರಿಸಿಕೊಂಡಿರುವುದು ಅವು ಹಳ್ಳಿಯ ಆವಶ್ಯಕತೆಗಳನ್ನು ಪೂರ್ತಿಮಾಡುತ್ತವೆ ಎಂದು. ಆದುದರಿಂದ ಗ್ರಾಮೋದ್ಯೋಗದ ಮೂಲಕ ವಿದ್ಯೆ ಕಲಿತ ಹುಡುಗರು ತಮ್ಮ ಮನೆಗಳತ್ತ ಈ ಜ್ಞಾನವನ್ನು ಹರಡಬೇಕು. ಗ್ರಾಮೋದ್ಯೋಗಗಳ ಪುನರುಜ್ಜೀವನದಿಂದ ಹಳ್ಳಿಯವರ ವಾರ್ಷಿಕಾದಾಯವನ್ನು ಸುಲಭವಾಗಿ ದುಪ್ಪಟ್ಟು ಮಾಡಬಹುದು. ನೀವು ಜನಸೇವಕರಾಗಿ ಈ ಹೊಸ ಪದ್ಧತಿಯಲ್ಲಿ ಆಸಕ್ತಿ ವಹಿಸಿದರೆ ಜಿಲ್ಲಾ ಬೋರ್ಡುಗಳಲ್ಲಿರುವ ಕಲಹಗಳನೇಕ ಅಳಿಯುತ್ತವೆ. ನಾನು ಈ ಸಭೆಗೆ ಬರುವಾಗ ಒಂದು ಪತ್ರ ಬಂತು. ಒಂದು ಶಾಲೆಯಲ್ಲಿ ಮಕ್ಕಳು ೩೦ ದಿನ ನಾಲ್ಕು ನಾಲ್ಕು ಗಂಟೆ ನೂತು ೭೫ ರೂಪಾಯಿ ಚಿಲ್ಲರೆ ಗಳಿಸಿದ್ದರು. ೩೦ ಜನ ಮಕ್ಕಳು ತಿಂಗಳಿಗೆ ೭೫ ರೂ. ಗಳಿಸಿದರೆ ಪ್ರಾಥಮಿಕ ಶಾಲೆಗಳ ಕೋಟ್ಯಂತರ ಮಕ್ಕಳ ಗಳಿಕೆ ಎಷ್ಟಾದೀತೋ ಲೆಕ್ಕಹಾಕಿ.

'ಈ ಮಕ್ಕಳಲ್ಲಿ ಬೆಳೆದುಬರುವ ಆತ್ಮವಿಶ್ವಾಸ, ಸಮಯಸ್ಫೂರ್ತಿಗಳನ್ನು ಊಹಿಸಿ. ದೇಶದ ಆದಾಯವನ್ನು ಹೆಚ್ಚಿಸುತ್ತಿದ್ದೇವೆ, ವಿಷಮವಿಭಾಜನೆಯ ಸಮಸ್ಯೆಯನ್ನು ಬಿಡಿಸುತ್ತಿದ್ದೇವೆ ಎಂಬ ತಿಳಿವು ಬೇರೆ. ಇದರಿಂದ ತಾನಾಗಿಯೇ ರಾಜಕೀಯ ಜಾಗ್ರತಿಯಾಗುತ್ತದೆ. ಸ್ಥಳೀಯ ವಿದ್ಯಮಾನವೆಲ್ಲವೂ, ಲಂಚಕೋರತನ–ಅದನ್ನು ಹೇಗೆ ನಿಲ್ಲಿಸಬೇಕು ಎಂಬುದೂ, ಮಕ್ಕಳಿಗೆ ತಿಳಿದಿರಬೇಕು. ಈ ಬಗೆಯ ರಾಜಕೀಯ ಶಿಕ್ಷಣ ನಮ್ಮ ಮಕ್ಕಳೆಲ್ಲರಿಗೂ ಇರಬೇಕು. ಅದರಿಂದ ಅವರು ಒಂದು ಮೊಳ ಎತ್ತರವಾದಾರು.

'ಮೂಲಶಿಕ್ಷಣ ಪದ್ಧತಿ ದೇಶದ ರಾಜಕೀಯ–ಆರ್ಥಿಕ ಪ್ರಗತಿಯನ್ನು ಸಾಧಿಸುತ್ತದೆ ಎಂಬುದನ್ನು ಸಿದ್ಧಮಾಡಿ ಕೊಟ್ಟದೇನಲ್ಲವೆ.

'ಇಷ್ಟು ಹೇಳಿ, ನಿಮ್ಮಲ್ಲಿ ಒಂದು ಬಿನ್ನಹ ಮಾಡುತ್ತೇನೆ. ಇಲ್ಲಿಗೆ ಬಂದಿದ್ದೀರಿ. ಈ ಪದ್ಧತಿಯನ್ನು ಅಭ್ಯಸಿಸಿ. ಇದರಲ್ಲಿ ನಿಮಗೆ ಶ್ರದ್ಧೆಯಿದೆಯೋ ಇಲ್ಲವೋ ಶುಕ್ಲಾಗೆ, ಆರ್ಯನಾಯಕಂಗೆ ತಿಳಿಸಿ. ಮೂರುತಿಂಗಳು ಸರಿಯಾಗಿ ಪ್ರಯತ್ನಮಾಡಿದರೆ ನಿಮ್ಮ ಶಾಲೆಗಳನ್ನು ಪುನಶ್ಚೇತನಗೊಳಿಸಿದೇವೆ, ಮಕ್ಕಳಿಗೆ ಹೊಸ ಶಕ್ತಿ ಹೊಸ ಬಾಳು ತುಂಬಿದೇವೆ ಎಂದು ವರದಿ ಮಾಡಬಲ್ಲಿರಿ. ಬೀಜ ಮರವಾಗಲು ಕೆಲವು ವರ್ಷ ಹಿಡಿದೀತು. ಈ ಶಿಕ್ಷಣಬೀಜದ ಕಿಂಚಿತ್ ಫಲ ಕೆಲವು ತಿಂಗಳೊಳಗಾಗಿಯೆ ಕಂಡೀತು. ಭಾರತದ ಜನರ ಮುಂದೆ ಅತ್ಯಂತ ಸರಳ ವಿಷಯಗಳನ್ನು–ಕ್ರಾಂತಿಕಾರರ ಪರಿವರ್ತನೆ ತರುವ ಸರಳ ವಿಷಯಗಳನ್ನು ಇಟ್ಟಿದ್ದೇನೆ: ಖಾದಿ, ಪಾನನಿರೋಧ, ಗ್ರಾಮೋದ್ಯೋಗ ಪುನರುಜ್ಜೀವನ, ಕೈಗಾರಿಕೆಯ ಮೂಲಶಿಕ್ಷಣ. ಆದರೆ ಈಗಿನ ಪದ್ಧತಿಯ ಅಮಲು ಇಳಿಯದೆ ಈ ಸರಳ ವಿಷಯಗಳು ಕಣ್ಣಿಗೆ ಕಾಣಲಾರವು.

'ಏನೇ ಮಾಡಿ, ನೀವೂ ಮೋಸಹೋಗಬೇಡಿ, ನಮಗೂ ಮೋಸ ಮಾಡಬೇಡಿ. ಈ ಪದ್ಧತಿ ನಿಮಗೆ ಉತ್ಸಾಹಕರವಾಗಿರದಿದ್ದರೆ ಹಾಗೆ ಸ್ಪಷ್ಟವಾಗಿ ಹೇಳಿಬಿಡಿ.

'ಪ್ರಾರಂಭದ ವೆಚ್ಚ, ಬಂಡವಾಳದ ಬಗ್ಗೆ ಒಂದು ಮಾತು. ಈ ವೆಚ್ಚ ಕಟ್ಟಡಗಳ ವೆಚ್ಚದ ಹಾಗೆ ನಷ್ಟದ ಬಾಬು ಅಲ್ಲ. ಉಪಕರಣಗಳಿಗೆ, ಸಾಮಗ್ರಿಗೆ ವೆಚ್ಚಮಾಡಿದುದು ಹಲವು ವರ್ಷಗಳವರೆಗೆ ಉತ್ಪತ್ತಿ ಕೊಡುತ್ತದೆ. ರಾಟೆ, ಬಿಲ್ಲು, ಮಗ್ಗಗಳನ್ನು ಕೊಂಡರೆ ವಿದ್ಯಾರ್ಥಿಗಳ ಹಲವಾರು ಗುಂಪುಗಳಿಗೆ ಉಪಯೋಗವಾಗುತ್ತದೆ. ಗಿರಣಿಗಾರಿಕೆಗೆ ಬಹಳ ಹೆಚ್ಚು ಬಂಡವಾಳ

ಬೇಕು. ಅದರಲ್ಲಿ ಸವೆತ, ಇಳಿತಾಯ, ಮುರಿತ ಹೆಚ್ಚು. ಈಗಿನ ಯೋಜನೆಯಲ್ಲಿ ಅದಾವುದೂ ಇಲ್ಲ. ಸರಿಯಾಗಿ ಯೋಜನೆ ಮಾಡಿದ ಹಳ್ಳಿಯ ಆರ್ಥಿಕ ರಚನೆಯಲ್ಲಿ ಅದಾವುದೂ ಅಗತ್ಯವೇ ಅಲ್ಲ.

'ಕಡೆಯ ಮಾತು ಒಂದು. ನಮ್ಮ ರಾಜಕೀಯದಲ್ಲಿ ಆಗಲಿರುವ ಬದಲಾವಣೆಗಳಿಗೆ ಗಾಬರಿಯಾಗದಿರಿ. ಮಂತ್ರಿಮಂಡಲಗಳು ಬಂದಹಾಗೇ ಹೋಗಲೂಬಹುದು. ಆದಷ್ಟು ಅಲ್ಪಾವಧಿ ಸೂಚನೆಗೇ ಅವರು ಅವನ್ನು ಕೈಬಿಡಬೇಕೆಂದು ಮೊದಲೇ ಗೊತ್ತಾಗಿತ್ತು. ಪ್ರಸಂಗ ಬಂದರೆ, ಅತಾರಾ ಕಚೇರಿಯಿಂದ ಸೆರೆಮನೆಗೇ ನೇರಾಗಿ ಹೋಗಬೇಕಾದೀತೆಂದೂ ತಿಳಿದಿತ್ತು. ನಗುನಗುತ್ತ ಹೋಗುತ್ತಿದ್ದರೆ ನಿಮ್ಮ ಕೆಲಸ, ಕಾರ್ಯಕ್ರಮ ಮಂತ್ರಿಮಂಡಲಗಳನ್ನು ಅವಲಂಬಿಸಬೇಕಾಗಿಲ್ಲ. ನೀವು ಹಾಕಿರುವ ಯೋಜನೆಯ ತಳಹದಿ ಭದ್ರವಾಗಿದ್ದರೆ, ಮಂತ್ರಿಮಂಡಲಗಳು ಎಷ್ಟಾದರೂ ಬರಲಿ ಹೋಗಲಿ, ಅದು ಸ್ಥಿರವಾಗಿರುತ್ತದೆ. ಇದೆಲ್ಲವೂ ನಿಮ್ಮ ಕೆಲಸದಲ್ಲಿ ನಿಮಗೆ ಎಷ್ಟು ಶ್ರದ್ಧೆಯಿದೆಯೋ ಅದನ್ನು ಅವಲಂಬಿಸಿದೆ. ಕಾಂಗ್ರೆಸ್ಸು ತನ್ನ ಸತ್ಯ–ಅಹಿಂಸೆಗಳ ನೀತಿಗೆ ಸರಿಯಾಗಿ ನಡೆದಷ್ಟು ದಿನ ಬಾಳೀತು. ಕಾಂಗ್ರೆಸ್ಸನ್ನು ನಾನು ಕಟುವಾಗಿ ಟೀಕಿಸಿದೇನೆ. ಅದರ ದೋಷಗಳನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆ ಹಾಕಿದ್ದೇನೆ. ಇಷ್ಟಾದರೂ ಅದರ ಲೆಕ್ಕದಲ್ಲಿ ಸಾಕಷ್ಟು ಉಳಿತಾಯವಿದೆಯೆಂಬುದನ್ನೂ ಬಲ್ಲೆ.

'ಎಲ್ಲಕ್ಕಿಂತ ಮೇಲಾಗಿ ಎಲ್ಲವೂ ನಿಮ್ಮ ಶ್ರದ್ಧೆ-ಸಂಕಲ್ಪಗಳ ಮೇಲಿದೆ. ಮನಸ್ಸಿದ್ದರೆ ಮಾರ್ಗ ಕಂಡೇ ಕಾಣುತ್ತದೆ. ಈ ಯೋಜನೆಯನ್ನು ನಡೆಸಲೇಬೇಕು ಎಂದು ಮನಸ್ಸು ಮಾಡಿದಿರೋ, ಎಲ್ಲಾ ತೊಡಕೂ ಮಾಯವಾಗುತ್ತವೆ. ಶ್ರದ್ಧೆ ಮಾತ್ರ ಜೀವಂತ, ಸಚೇತನ ಶ್ರದ್ಧೆಯಾಗಬೇಕು. ಕೋಟ್ಯಂತರ ಜನ ದೇವರನ್ನು ನಂಬಿದೇವೆ ಎನ್ನುತ್ತಾರೆ. ಅಂಥವರ ನಂಬಿಕೆ ಜೀವವಿಲ್ಲದುದು, ಜೀವಂತ ಶ್ರದ್ಧೆಯಲ್ಲ. ಜೀವಂತ ಶ್ರದ್ಧೆಯಿದ್ದರೆ ಯೋಜನೆಯನ್ನು ಸಫಲಗೊಳಿಸಲು ಬೇಕಾದ ಶಕ್ತಿ, ಜ್ಞಾನ ತಾನೇ ಬರುತ್ತವೆ. ನಿಮಗೆ ಪ್ರತಿಯೊಬ್ಬನಿಗೂ ಆ ಶ್ರದ್ಧೆಯಿದೆ ಎನ್ನುತ್ತೀರಿ. ಸಂತೋಷ. ಅದು ನಿಜವಿದ್ದರೆ ನಿಮ್ಮ ಪ್ರಾಂತ ಉಳಿದವಕ್ಕೆ ಮೇಲ್ಪಂಗ್ತಿ ಹಾಕೀತು.'[೫೨]

ಲ

## ತಕಲಿ ವಿ. ಆಟಿಗೆ

ಖಾದಿಯಾತ್ರೆ ಇಗನೆ ತಾ|| ೫ ಗಂಟೆಗೆ ಮುಗಿಯಿತು. ಏನಾದರೂ ಪ್ರಶ್ನೆಗಳಿದ್ದರೆ ಉತ್ತರ ಕೊಡುವುದಾಗಿ ಗಾಂಧೀಜೀ ಹೇಳಿದ್ದುದರಿಂದ ಪ್ರಾರ್ಥನಾ ಸಭೆಯಾದ ಮೇಲೆ ಅನೇಕರು ರಾತ್ರಿ ಉಳಿದುಕೊಂಡರು. ಇದು ಒಂದು ಪ್ರಶ್ನೆ, ಗಾಂಧೀಜಿಯ ಉತ್ತರ.

[ವರ್ಧಾ ಜಿಲ್ಲಾ ಖಾದಿಪ್ರೇಮಿಗಳು ಸೇವಾಗ್ರಾಮದಲ್ಲಿ ತಮ್ಮ ವಾರ್ಷಿಕ ಸಭೆ ಸೇರಿಸಿದರು ಶ್ರೀ ವಿನೋಬಾಜಿಯ ಸ್ಫೂರ್ತಿ ಪ್ರೇರಣೆಗಳಿಂದ ಸಭೆಗಳು ನಡೆದವು. ಸಂ.]

ಪ್ರಶ್ನೆ: ಮೂಲಶಿಕ್ಷಣದಲ್ಲಿ ತಕಲಿಯನ್ನು ಪ್ರವೇಶಮಾಡಿಸಿದೀರಲ್ಲ, ಸ್ವಾವಲಂಬನದ ಆರ್ಥಿಕೋದ್ದೇಶಕ್ಕೋ ಶಿಕ್ಷಣಕ್ಕಾಗಿಯೋ?

ಉತ್ತರ: ಮೂಲಶಿಕ್ಷಣದಲ್ಲಿ ತಂದುದಕ್ಕೆಲ್ಲಕ್ಕೂ ಒಂದೇ ಗುರಿ—ಶಿಕ್ಷಣ. ಮೂಲಶಿಕ್ಷಣದ ಗುರಿ ಒಂದು ಕೈಗಾರಿಕೆಯ ಮೂಲಕ ಮಕ್ಕಳ ದೈಹಿಕ, ಬೌದ್ಧಿಕ, ನೈತಿಕ ಅಭಿವೃದ್ಧಿ. ಆದರೆ ಶಿಕ್ಷಣ ದೃಷ್ಟಿಯಿಂದ ಯೋಗ್ಯವಾಗಿದ್ದು ದಕ್ಷತೆಯಿಂದ ನಡೆಸಿದರೆ ಎಲ್ಲಾ ಯೋಜನೆಯೂ ಆರ್ಥಿಕವಾಗಿಯೂ ಲಾಭಕರವಾಗಲೇಬೇಕು ಎಂದು ನನ್ನ ಅಭಿಪ್ರಾಯ. ಉದಾ—ಇವೊತ್ತು ಮಾಡಿದರೆ ನಾಳೆ ಒಡೆದುಹೋಗುವ ಮಣ್ಣಿನ ಆಟಿಗೆ ಸಾಮಾನು ಮಾಡುವುದನ್ನು ಕಲಿಸಬಹುದು. ಅದರಿಂದಲೂ ಮಕ್ಕಳ ಬುದ್ಧಿ ಬೆಳೆಯುತ್ತದೆ. ಆದರೆ ಶ್ರಮ, ಸಾಮಗ್ರಿಗಳನ್ನು ಮನುಷ್ಯ ವ್ಯರ್ಥವಾಗಿ, ಅನುತ್ಪಾದಕವಾಗಿ ಬಳಸಬಾರದು; ಇದರಲ್ಲಿ ಈ ನೀತಿಸೂತ್ರವನ್ನು ಅಸಡ್ಡೆ ಮಾಡಿದಂತಾಗುತ್ತದೆ. ಬಾಳಿನ ಗಳಿಗೆಗಳಿಗೆಯನ್ನೂ ಪ್ರಯೋಜನಕರವಾಗಿ ಉಪಯೋಗಿಸಬೇಕು ಎಂಬ ವಿಚಾರ ಪ್ರಾಧಾನ್ಯವೇ ಉತ್ತಮ ಪೌರಶಿಕ್ಷಣ; ಜೊತೆಗೆ ಅದರಿಂದ ಮೂಲಶಿಕ್ಷಣ ಸ್ವಾವಲಂಬಿಯೂ ಆಗುತ್ತದೆ.೫೧

೯

## ಅಕ್ಷರ ವಿ. ಕೈಗೆಲಸ

ಶ್ರೀ ನರಹರಿಲಾಲ ಪಾರೀಖರು ಬರೆದಿದಾರೆ:

'ನಮ್ಮ ಖಾದಿಶಾಲೆ ಮತ್ತು ಶಾಲೆಗಳಲ್ಲಿ ಅಕ್ಷರಶಿಕ್ಷಣಕ್ಕೆ ಕೊಡುವ ಪ್ರಾಧಾನ್ಯ ಪೂರಾ ತಪ್ಪು ಎನಿಸುತ್ತದೆ. ಕೈಗೆಲಸಕ್ಕೆ ಕೆಲವು ಗಂಟೆ, ಅಕ್ಷರವಿದ್ಯೆಗೆ ಕೆಲವು ಗಂಟೆ ಇಟ್ಟಿದಾರೆ. ಆದರೆ ಜ್ಞಾನ ಸಿಗುವುದು ಪುಸ್ತಕ ಪಾಠದಿಂದಲೇ ಎಂಬ ನಂಬಿಕೆಯಿದೆ. ಪುಸ್ತಕಗಳಿಗಿಂತ ಕೈಗೆಲಸದ ಮೂಲಕವೇ ನಮ್ಮ ಹುಡುಗರಿಗೆ ಹೆಚ್ಚು ಬೌದ್ಧಿಕ ಪ್ರಗತಿಯಾಗುತ್ತದೆ ಎಂದು ನನ್ನ ಮತ. ತಮ್ಮ ಅಭಿಪ್ರಾಯವನ್ನು ತಿಳಿಸಿದರೆ ಕೃತಜ್ಞ.'

ಲೇಖಕರ ಆಕ್ಷೇಪಣೆ ಸರಿ. ಪುಸ್ತಕ ಪಾಠಕ್ಕೂ ಬುದ್ಧಿಯ ಬೆಳವಣಿಗೆಗೂ ಯಾವಾಗಲೂ ಗಂಟೇನಿಲ್ಲ. ಒಂದು ಚಿತ್ರದ ಪಡಿಯಚ್ಚು ಬುದ್ಧಿಯ ಮೇಲೆ ಮೂಡಿದಂತೆಯೆ ಅಕ್ಷರದ್ದೂ ಸಹ. ಆದರೆ ಅಕ್ಷರವಿದ್ಯೆ ಬರೀ ಓದುವುದಲ್ಲವಲ್ಲ. ಕೈಗೆಲಸವೂ ಅಷ್ಟೇ. ಕೈಗಾರಿಕೆಯ ಜ್ಞಾನವೆಂದರೆ ಅದರ ಶಾಸ್ತ್ರವೂ ತಿಳಿದಿರಬೇಕು. ಆಗ ಬುದ್ಧಿಯ ಬೆಳವಣಿಗೆ ಈಗಿನ ಪ್ರೌಢಶಾಲೆಗೆ ಕಾಲೇಜುಗಳಲ್ಲಿ ಆಗುವುದಕ್ಕಿಂತ ಬೇಗ ಆದೀತು. ಆದುದರಿಂದ ಕೈಗಾರಿಕೆಯನ್ನು ತೆಗಳುವುದಾಗಲಿ, ಅದಕ್ಕೆ ಗೌಣಸ್ಥಾನವನ್ನು ಶಾಲೆಯ ಕಾರ್ಯಕ್ರಮದಲ್ಲಿ ಕೊಡುವುದಾಗಲಿ ಶೋಚನೀಯ. ಅದರಿಂದ ವಿದ್ಯಾರ್ಥಿಗಳು ಬುದ್ಧಿಯ ಬೆಳವಣಿಗೆಯಲ್ಲಿ ಕೈಗಾರಿಕೆಯ ಜ್ಞಾನಕ್ಕೆ ಕೊಡಬೇಕಾದ ಸ್ಥಾನವನ್ನು ಕೊಡರು. ಪುಸ್ತಕವಿದ್ಯೆ ಕಣ್ಣು ಕೆಡಿಸುತ್ತದೆ, ವಿಚಾರವನ್ನು, ಸ್ವತಂತ್ರ ಪ್ರತಿಭೆಯನ್ನು, ಕುಂಠಿಸುತ್ತದೆ. ಕೈಗಾರಿಕೆಯನ್ನೂ ಅದರ ಶಾಸ್ತ್ರವನ್ನೂ ಕಲಿಯುವುದರಲ್ಲಿ ಅಂಥ ಅಪಾಯವೇನಿಲ್ಲ. ಇದರಲ್ಲೂ ಕೊಂಚ ಪುಸ್ತಕಾಭ್ಯಾಸವಿದೆ. ಆ ಓದು ಕೈಗಾರಿಕೆಗೆ ಸಂಬಂಧಿಸಿದುದು ; ಅದಕ್ಕೆ ಬುದ್ಧಿಯ ವ್ಯವಸಾಯಬೇಕು. ಈದೇ ನಾನು ಮೂಲಶಿಕ್ಷಣ ಎನ್ನುವುದು. ಇದು ಸತ್ಯ. ಆದುದರಿಂದಲೇ ಕಾಲಕ್ರಮದಲ್ಲಿ ದೃಢವಾಗಿ ನಿಂತೀತು. ಆದರೆ ಈ ಮಧ್ಯೆ ಪುಸ್ತಕ ಪಾಠ–ಕೈಗಾರಿಕೆ ಎಂಬ ಭೇದ ಬೇಡ. ಕೈಗಾರಿಕೆ ಶಿಕ್ಷಣದ ಒಂದು ಅಂಗ, ಒಂದು ಅವಯವ. ಉಳಿದವಕ್ಕೆ ಏನು ಸ್ಥಾನವೋ ಅದಕ್ಕೂ ಅದೇ ಸ್ಥಾನವಿರಬೇಕು. ಈ ಸ್ಪಷ್ಟ ಸತ್ಯವನ್ನು, ಕಡೆಗೆ, ರಾಷ್ಟ್ರೀಯ ಶಾಲೆಗಳಲ್ಲಾದರೂ ಅರಿತುಕೊಳ್ಳಬೇಕು.೩.೪

## ೧೦

## ಕೈಗೆಲಸವೂ ಬುದ್ಧಿವಿಕಾಸವೂ

ನಿಮ್ಮಲ್ಲೊಬ್ಬರು ಇಲ್ಲಿ ಕೈಗೆಲಸಕ್ಕೆ ಮಿತಿಮೀರಿದ ಪ್ರಾಧಾನ್ಯ ಕೊಡುತ್ತೀರಿ ಎಂದು ಆರೋಪಣೆ ಮಾಡಿದೀರಿ. ಕೈಗೆಲಸದ ಶಿಕ್ಷಣ ಶಕ್ತಿಯಲ್ಲಿ ನನಗೆ ದೃಢವಾದ ನಂಬಿಕೆಯಿದೆ. ಈಗಿನ ನಮ್ಮ ಶಿಕ್ಷಣಪದ್ಧತಿ ಭಾರತದಲ್ಲಿ ಸಾಮ್ರಾಜ್ಯ ಷಾಹಿಯನ್ನು ಬಲಪಡಿಸಲು ಮಾಡಿದುದು. ಈ ಪದ್ಧತಿಯಂತೆ ಬೆಳೆದವರಿಗೆ ಇದರ ರುಚಿ ಅಭ್ಯಾಸವಾಗಿದೆ; ಶರೀರಶ್ರಮ ಎಂದರೆ ನಿಮಗೆ ಕಷ್ಟ. ಸರಕಾರಿ ಶಾಲೆ ಕಾಲೇಜುಗಳಲ್ಲಿ ಯಾರೂ ವಿದ್ಯಾರ್ಥಿಗಳಿಗೆ ಬೀದಿ ಗುಡಿಸುವುದನ್ನು, ಕಕ್ಕಸ್ಸು ಗುಡಿಸುವುದನ್ನು ಕಲಿಸುವ ಗೋಜಿಗೆ ಹೋಗರು. ಇಲ್ಲೋ, ಸಫಾಯಿ-ಶುಚಿ ನಿಮ್ಮ ತರಪೇತಿನ ಓನಾಮ. ಭಂಗೀ ಕೆಲಸ ಒಂದು ಕಲೆ. ಕಷ್ಟಪಟ್ಟು ನೀವು ಅದನ್ನು ಕಲಿಯಬೇಕು. ಸದಾ ಪ್ರಶ್ನೆ ಕೇಳಬೇಕು, ಯೋಗ್ಯವಾಗಿ ಎಲ್ಲವನ್ನೂ ಅರಿಯುವ ಕುತೂಹಲ ಬೇಕು; ಯಾವುದನ್ನು ಕಲಿಯಲಿಕ್ಕೂ ಇವು ಅತ್ಯಗತ್ಯ. ಕುತೂಹಲಕ್ಕೆ ವಿನಯ, ಗುರುಭಕ್ತಿ ಜೊತೆಯಾಗಬೇಕು. ಕುತೂಹಲ ಅಧಿಕ ಪ್ರಸಂಗವಾಗಬಾರದು. ಅಧಿಕ ಪ್ರಸಂಗ ಮನಸ್ಸಿನ ಗ್ರಹಣಶಕ್ತಿಗೆ ವೈರಿ. ವಿನಯವಿಲ್ಲದೆ, ಕಲಿಯುವ ಮನಸ್ಸಿಲ್ಲದೆ, ವಿದ್ಯೆ ಬಾರದು' ಎಂದರು ಗಾಂಧೀಜೀ.

'ಜಾಣತನದಿಂದ ಮಾಡಿದ ಉಪಯೋಗಕರವಾದ ಕೈಗೆಲಸ ಬುದ್ಧಿಯ ವಿಕಾಸಕ್ಕೆ **ಅತ್ಯುತ್ತಮ** ಸಾಧನ. ಬೇರೆ ರೀತಿಯಿಂದಲೂ ತೀಕ್ಷ್ಣ ಬುದ್ಧಿಯನ್ನು ಬೆಳೆಸಬಹುದು. ಅದು ತೂಕತಪ್ಪಿ, ವಿಕಾರವಾಗಿ, ಗರ್ಭಪಾತದಂತೆ ಆದೀತು. ಅದರಿಂದ ಮನುಷ್ಯ ಸುಲಭವಾಗಿ ದುಷ್ಟ, ಕಪಟಿ ಆಗಬಹುದು. ಸಮತೂಕದ ಬುದ್ಧಿ ಎಂದರೆ ದೇಹ ಮನ ಆತ್ಮಗಳ ಸಮರಸ ವಿಕಾಸ. ಆದುದರಿಂದಲೇ ಇಲ್ಲಿ ನಮ್ಮ ತರಪೇತಿನ ಪಾಠಕ್ರಮದಲ್ಲಿ ಕೈಗೆಲಸಕ್ಕೆ ಅಷ್ಟು ಪ್ರಾಧಾನ್ಯ. ಸಮಾಜಕ್ಕೆ ಉಪಯುಕ್ತವಾದ ಶ್ರಮದ ಮೂಲಕ ವಿಕಸಿತವಾದ ಬುದ್ಧಿ ಸೇವಾ ಸಾಧನವಾಗುತ್ತದೆ. ಅದನ್ನು ಸುಲಭವಾಗಿ ದಾರಿ ತಪ್ಪಿಸಲು, ಅಡ್ಡಹಾದಿ ಹಿಡಿಸಲು ಸಾಧ್ಯವಲ್ಲ. ಕೇವಲ ತೀಕ್ಷ್ಣಬುದ್ಧಿ ಒಂದು ಪೀಡೆಯೂ ಆಗ ಬಹುದು. ಈ ಮುಖ್ಯವಾದ ಮಾತನ್ನು ನೀವು ಗ್ರಹಿಸಿದರೆ, ನಿಮ್ಮನ್ನು

ಇಲ್ಲಿಗೆ ತರಪೇತಿಗಾಗಿ ಕಳಿಸಿ ನಿಮ್ಮ ಸರಕಾರಗಳು ಮಾಡಿದ ವೆಚ್ಚ ಸಾರ್ಥಕ ವಾಗುತ್ತದೆ.'೫೫

## ೧೧

## ಮೂಲಶಿಕ್ಷಣದ ವಿದ್ಯಾರ್ಥಿಗಳ ಲಕ್ಷಣ

ಶ್ರೀ ಆರ್ಯನಾಯಕಂ ಒನೆ ತರಗತಿಯ ಒಂಬತ್ತು ವಿದ್ಯಾರ್ಥಿಗಳನ್ನು ಗಾಂಧೀಜಿಯ ಭೇಟಿಗೆ ಕರೆತಂದರು. ಸೇವಾಗ್ರಾಮದ ಮೂಲಶಿಕ್ಷಣ ಶಾಲೆಯಲ್ಲಿ ಇವರೆಲ್ಲರೂ ತಮ್ಮ ಏಳು ವರ್ಷದ ಶಿಕ್ಷಣವನ್ನು ಮುಗಿಸಿದ್ದರು. ಶಾಲೆಯ ಮುಖ ವನ್ನೇ ಕಾಣದೆ ಹೊಲದಲ್ಲಿ ಕೆಲಸ ಮಾಡುವ ಹುಡುಗರನ್ನೂ ಇವರನ್ನೂ ಹೋಲಿಸಿದರೆ ಪ್ರಥಮ ಪ್ರಯತ್ನಕ್ಕೆ ಬಹಳ ಒಳ್ಳೆಯ ಹರ್ಷಪ್ರದ ಫಲವೆನ್ನ ಬಹುದು. ಶುಚಿಯಾಗಿ ಮಟ್ಟಸವಾಗಿದ್ದರು. ಒಳ್ಳೇ ಶಿಸ್ತು, ಸಜ್ಜನಿಕೆ. ಗಾಂಧೀಜೀ ಅವರೊಡನೆ ವಿನೋದವಾಡಿದರು. ಅವರೂ ಹಿಗ್ಗಿನಿಂದ ನಕ್ಕು ನಲಿದರು. ಅವರಲ್ಲೊಬ್ಬ ಧೈರ್ಯಮಾಡಿ ಗಾಂಧೀಜಿಯನ್ನು ಕೇಳಿಯೇ ಬಿಟ್ಟ : 'ಮೂಲಶಿಕ್ಷಣ ಶಾಲೆಯಲ್ಲಿ ಏಳು ವರ್ಷ ಶಿಕ್ಷಣ ಪಡೆದ ಮೇಲೆ ಆ ೧೪ ವರ್ಷದ ಹುಡುಗ ಎಂಥವನಾಗಬೇಕೆಂದು ನಿಮ್ಮ ಬಯಕೆ?' ಗಾಂಧೀಜೀ ಈ ಪ್ರಸಂಗ ವನ್ನು ಉಪಯೋಗಿಸಿಕೊಂಡು, ಶಾಲೆ ತನ್ನ ಕರ್ತವ್ಯವನ್ನು ಸರಿಯಾಗಿ ಮಾಡಿ ದರೆ ಹದಿನಾಲ್ಕರ ಹುಡುಗರು ಸತ್ಯವಂತರೂ, ಶುದ್ಧರೂ, ಆರೋಗ್ಯವಂತರೂ ಆಗಬೇಕು ಎಂದು ಹೇಳಿದರು. ಅವರಿಗೆ ಹಳ್ಳಿಯ ಒಲವು ಇರಬೇಕು. ಅವರ ಬುದ್ಧಿ–ಕೈ ಎರಡೂ ಸಮವಾಗಿ ವಿಕಾಸವಾಗಬೇಕು. ಅವರಲ್ಲಿ ಕಪಟವಿರದು. ಬುದ್ಧಿ ಚುರುಕಾಗಿದ್ದರೂ ಹಣ ಗಳಿಸುವ ಚಿಂತೆ ಅವರಿಗಿರದು. ಪ್ರಾಮಾಣಿಕ ವಾದ ಯಾವ ಕೆಲಸವೇ ಬರಲಿ ಅದನ್ನು ಕೈಯಾರ ಮಾಡಿಯಾರು. ಪಟ್ಟಣ ಗಳಿಗೆ ಹೋಗುವ ಭ್ರಾಂತಿಯಿರದು. ಶಾಲೆಯಲ್ಲಿ ಸೇರಿ–ಸಹಕಾರಗಳನ್ನು ಕಲಿತು, ತಮ್ಮ ನೆರೆಹೊರೆಯಲ್ಲೆಲ್ಲಾ ಆ ಭಾವನೆಯನ್ನೆ ಹರಡಿಯಾರು. ಅವರು ಎಂದಿಗೂ ತಿರುಕರು, ಪರೋಪಜೀವಿಗಳು ಆಗರು.

## ೧೨
## ಮಂತ್ರಿಗಳ ಸಭೆಯಲ್ಲಿ ಪ್ರಶ್ನೋತ್ತರ

ಪ್ರಶ್ನೆ : ಸ್ವಾವಲಂಬನದ ತಳಹದಿ ಬಿಟ್ಟು ಮೂಲಶಿಕ್ಷಣವನ್ನು ನಡೆಸ ಬಹುದೆ ?

ಉತ್ತರ : ಪ್ರಯತ್ನ ಮಾಡಿ ನೋಡಿ. ನನ್ನ ಸಲಹೆ ಕೇಳುತ್ತೀರೋ, ಆ ಸಂದರ್ಭದಲ್ಲಿ ಮೂಲಶಿಕ್ಷಣವೆಂಬುದನ್ನು ಮರೆತೇಬಿಡಿ. ಸ್ವಾವಲಂಬನ ಮೂಲ ಕಾರಣವಲ್ಲ; ಅದು ಕೊನೆಯ ಗುರಿ, ಫಲ. ಮೂಲಶಿಕ್ಷಣ ಪ್ರಾರಂಭದಲ್ಲಿಯೇ ಸ್ವಾವಲಂಬಿಯಾಗದು. ಆದರೆ ಈ ಯೋಜನೆಯ ಏಳು ವರ್ಷಗಳ ಲೆಕ್ಕ ಹಾಕಿದರೆ ಆದಾಯ–ವೆಚ್ಚ ಎರಡೂ ಸರಿತೂಗಬೇಕು. ಇಲ್ಲದಿದ್ದರೆ, ಈ ಶಿಕ್ಷಣ ಮುಗಿದ ಮೇಲೂ ಮೂಲಶಿಕ್ಷಣದ ವಿದ್ಯಾರ್ಥಿಗಳು ಬದುಕಿಗೆ ತಕ್ಕವರಲ್ಲ ಎಂದಂತೆ. ಹಾಗೆಂದರೆ ಮೂಲಶಿಕ್ಷಣ ವಿಫಲವಾಯಿತು; ಅದು ಮೂಲ ಶಿಕ್ಷಣವೇ ಅಲ್ಲ. ಸ್ವಾವಲಂಬನದ ತಳಹದಿಯಿಲ್ಲದ ನಯೀ ತಾಲೀಂ ಪ್ರಾಣ ವಿಲ್ಲದ ದೇಹ.

ಪ್ರ : ಮೂಲೋದ್ಯೋಗವೊಂದರ ಮೂಲಕ ಶಿಕ್ಷಣ ಕೊಡುವ ತತ್ವ ವನ್ನು ನಾವು ಒಪ್ಪಿದೇವೆ. ಆದರೆ ಮುಸಲ್ಮಾನರು ಏಕೋ ರಾಟೆಗೆ ವಿರುದ್ಧ ವಾಗಿದಾರೆ. ಹತ್ತಿ ಬೆಳೆಯುವ ಪ್ರದೇಶಗಳಲ್ಲಿ ನೀವು ನೂಲುವುದಕ್ಕೆ ಪ್ರಾಧಾನ್ಯ ಕೊಡುವುದು ಸರಿಯೆ. ಹತ್ತಿ ಬೆಳೆಯುವ ಸ್ಥಳಗಳಿಗೆ ಅದು ಹೊಂದುವುದಿಲ್ಲ ವೆಂದು ಒಪ್ಪುತ್ತೀರಾ ? ಅಂಥ ಸ್ಥಳಗಳಲ್ಲಿ ಬೇರೊಂದು ಕೈಗಾರಿಕೆಯನ್ನು, ಉದಾ-ಬೇಸಾಯವನ್ನು, ಬಳಸಬಹುದಲ್ಲ ?

ಉ : ಇದು ಬಹಳ ಹಳೆಯ ಪ್ರಶ್ನೆ. ಶಿಕ್ಷಣ ಮಾಧ್ಯಮವಾಗಲು ಆ ಮೂಲೋದ್ಯೋಗ ಸಾರ್ವತ್ರಿಕವಾಗಿರಬೇಕು. ೧೯೦೮ ರಷ್ಟು ಹಿಂದೆಯೇ, ಹಿಂದುಸ್ತಾನ ಸ್ವತಂತ್ರವಾಗಲು ತನ್ನ ಕಾಲಿನ ಮೇಲೆ ತಾನು ನಿಲ್ಲಲು, ಮನೆ ಮನೆಯಲ್ಲೂ ರಾಟೆ ತಿರುಗಬೇಕು ಎಂಬ ನಿರ್ಧಾರಕ್ಕೆ ನಾನು ಬಂದೆ. ಒಂದು ತೊಳೆ ಹತ್ತಿಯನ್ನೂ ಬೆಳೆಯದ ಇಂಗ್ಲೆಂಡೇ ಭಾರತಕ್ಕೂ ಉಳಿದ ಜಗತ್ತಿಗೂ ಬಟ್ಟೆಗಳನ್ನು ರಫ್ತು ಮಾಡಬಹುದಂತೆ; ನಮ್ಮ ನೆರೆಯ ಪ್ರಾಂತದಿಂದ, ಜಿಲ್ಲೆ ಯಿಂದ, ಹತ್ತಿಯನ್ನು ತರಿಸಬೇಕಲ್ಲ ಎಂದು ನಮ್ಮ ಮನೆಗಳಲ್ಲಿ ನೂಲುವುದೇ

ಬೇಡವೆ? ಒಂದು ಕಾಲಕ್ಕೆ ಹಿಂದುಸ್ತಾನದಲ್ಲಿ ಹತ್ತಿ ಬೆಳೆಯದ ಪ್ರದೇಶವೇ ಇರಲಿಲ್ಲ. 'ಹತ್ತಿಯ ಸೀಮೆ'ಯಲ್ಲಿ ಮಾತ್ರ ಹತ್ತಿ ಬೆಳೆಯುವುದು ಇತ್ತೀಚಿನ ಅಸಂಗತ ಪದ್ಧತಿ. ಹಿಂದುಸ್ತಾನದ ನೂಲುಗಾರರಿಗೆ, ತೆರಿಗೆದಾರರಿಗೆ, ನಷ್ಟ ಮಾಡಿ, ಹತ್ತಿಯ ಗಿರಣಿಗಳ ಹಿತಕ್ಕಾಗಿ ಮಾಡಿದುದು ಇದು. ಇವೊತ್ತೂ ಗಿಡಹತ್ತಿ ಎಲ್ಲೆಲ್ಲೂ ಬೆಳೆಯುತ್ತದೆ. ನೀವು ಮಾಡುವ ವಾದ ನಮ್ಮ ಕ್ರಿಯಾ ಶಕ್ತಿಗೆ, ಉಪಾಯಗಾರಿಕೆಗೆ, ಸಾಹಸಕ್ಕೆ ಕಳಂಕ. ಒಂದುಕಡೆಯಿಂದ ಇನ್ನೊಂದು ಕಡೆಗೆ ಕಚ್ಚಾ ಮಾಲನ್ನು ಸಾಗಿಸುವುದು ದೊಡ್ಡ ಆತಂಕ ಎಂದರೆ ಎಲ್ಲಾ ಉದ್ಯೋಗಗಳಿಗೂ ಸ್ವಸ್ತಿ ಹೇಳಿದಂತೆಯೆ.

ತನ್ನ ಕೈಯಿಂದಲೇ ತನ್ನ ಬಟ್ಟೆ ಮಾಡಿಕೊಳ್ಳಬೇಕು, ಇಲ್ಲದಿದ್ದರೆ ಬೆತ್ತಲೆ ಯಿರಬೇಕು ; ಆಗ ಬಟ್ಟೆ ಮಾಡಿಕೊಳ್ಳಲು ಕಲಿಯುವುದೇ ಶಿಕ್ಷಣ. ಹತ್ತಿಯ ನೂಲುವಿಕೆಗೆ ಸಂಬಂಧಿಸಿದ ಉಳಿದ ಕ್ರಿಯೆಗಳೆಲ್ಲವನ್ನೂ ಜಾಣತನದಿಂದ ಕಲಿತರೆ ಅದರಲ್ಲಿ ಅತ್ಯುತ್ತಮ ಶೈಕ್ಷಣಿಕ ಗುಣವಿದೆ. ಇದು ಮನುಷ್ಯನಿಗೆ ಸಮಗ್ರ ಶಿಕ್ಷಣ ಕೊಡುವ ಹಾಗೆ ಉಳಿದ ಯಾವ ಕೈಗಾರಿಕೆಯೂ ಕೊಡದು. ಮುಸಲ್ಮಾನರೀಗ ಭ್ರಾಂತಿಯಲ್ಲಿ ಮುಳುಗಿದಾರೆ, ಅವರ ಸಂದೇಹಗಳನ್ನು ಪರಿಹರಿಸಲಾರೆವು. ಭ್ರಾಂತಿಗೊಳಗಾದವನಿಗೆ ಅದೇ ನಿಜ. ಆದರೆ ನಮ್ಮ ಶ್ರದ್ಧೆ ದೃಢ, ಸ್ಪಷ್ಟ ಆಗಿದ್ದರೆ, ನಮ್ಮ ಪದ್ಧತಿಯನ್ನು ಸಫಲಗೊಳಿಸಿ ತೋರಿಸಿದರೆ, ಮುಸಲ್ಮಾನರು ತಾವೇ ನಮ್ಮ ಬಳಿಗೆ ಬಂದು ನಿಮ್ಮ ಸಫಲತೆಯ ಗುಟ್ಟೇನು ಎಂದು ಕೇಳುತ್ತಾರೆ. ಯಾವ ಮುಸ್ಲಿಂ ಸಂಸ್ಥೆಯೂ ಮುಸ್ಲಿಂ ಲೀಗೂ ಬಡ ಮುಸಲ್ಮಾನರಿಗೆ ರಾಟೆ ಮಾಡಿದಷ್ಟು ಸಹಾಯ ಮಾಡಿಲ್ಲ ಎಂಬುದು ಅವರಿಗಿನ್ನೂ ಅರಿವಾಗಿಲ್ಲ. ಬಂಗಾಳದ ನೇಕಾರರು ಹೆಚ್ಚಾಗಿ ಮುಸಲ್ಮಾನರು. ಢಾಕಾದ 'ಷಬ್‌ನಮ್' ಮಲಮಲುಗಳ ಜಗತ್ಪ್ರಸಿದ್ಧಿಗೆ ಕಾರಣ ಮುಸ್ಲಿಂ ನೂಲುಗಾರರ ನೇಕಾರರ ಚಳಕ, ಕೌಶಲ ಎಂಬುದನ್ನು ಮರೆಯಲಾಗದು.

ಮಹಾರಾಷ್ಟ್ರಕ್ಕೂ ಇದೇ. ಭ್ರಾಂತಿನಿರಸನಕ್ಕೆ ಉತ್ತಮೋಪಾಯ ಸ್ವಧರ್ಮ ಪರಿಪಾಲನೆ. ಸತ್ಯವೇ ಉಳಿಯುತ್ತದೆ, ಉಳಿದುದೆಲ್ಲ ಕಾಲಗರ್ಭದಲ್ಲಿ ಲಯ ವಾಗುತ್ತದೆ. ಆದುದರಿಂದ ಎಲ್ಲರೂ ನನ್ನ ಕೈಬಿಟ್ಟರೂ ನಾನೊಬ್ಬನೇ ಆದರೂ ನಾನು ಸತ್ಯವನ್ನೇ ಎತ್ತಿಹಿಡಿಯಬೇಕು. ಇಂದು ನನ್ನ ಮಾತು ಅರಣ್ಯರೋದನ ವಾದೀತು. ಆದರೆ ಉಳಿದೆಲ್ಲ ದನಿಗಳೂ ಅಡಗಿಹೋದಾಗ, ಇದು ಸತ್ಯವಾಣಿಯೆ ಆಗಿದ್ದರೆ, ಇದು ಕೇಳಿಬಂದೀತು.

## ವಿಷಚಕ್ರ

'ನಯೀ ತಾಲೀಂಗೆ ದಕ್ಷರಾದ ಶಿಕ್ಷಕರನ್ನು ಅಣಿಮಾಡಲು ನಿಧಾನ ವಾಗುತ್ತದೆ. ಈ ಮಧ್ಯೆ ಶಾಲೆಗಳಲ್ಲಿ ಶಿಕ್ಷಣವನ್ನು ಉತ್ತಮಪಡಿಸಲು ಏನು ಮಾಡಬೇಕು ?' ಅವಿನಾಶ ಲಿಂಗಂಚೆಟ್ಟಿ ಇಂಗ್ಲೀಷಿನಲ್ಲಿ ಕೇಳಿದರು.

ಅದಕ್ಕಾಗಿ ಅವರನ್ನು ಹಾಸ್ಯಮಾಡುತ್ತ ಗಾಂಧೀಜೀ ಹಿಂದೂಸ್ತಾನಿ ಬಾರದಿದ್ದರೆ ಪಕ್ಕದವರ ಕಿವಿಯಲ್ಲಿ ಪಿಸುಮಾತಿನಲ್ಲಿ ಹೇಳಿ, ಅವರು ಹಿಂದುಸ್ತಾನಿ ಯಲ್ಲಿ ಹೇಳಲಿ ಎಂದರು. ಎಲ್ಲರೂ ಗೊಳ್ಳೆಂದು ನಕ್ಕರು.

'ಈಗಿನ ವಿದ್ಯಾಭ್ಯಾಸ ಭಾರತಕ್ಕೆ ಸ್ವಾತಂತ್ರ್ಯ ತಾರದು, ಗುಲಾಮ ಗಿರಿಯನ್ನೇ ಭದ್ರಗೊಳಿಸುತ್ತದೆ ಎಂದು ನಿಮಗೆ ಅರ್ಥವಾದರೆ ಇದರ ಬದಲು ಇನ್ನೊಂದು ಪದ್ಧತಿ ಬರಲಿ ಬಿಡಲಿ ಇದನ್ನು ನೀವು ಪ್ರೋತ್ಸಾಹಿಸಲು ತಿರಸ್ಕರಿ ಸೀರಿ. ನಯೀ ತಾಲೀಮಿನ ಚೌಕಟ್ಟಿನಲ್ಲಿ ನಿಮ್ಮ ಕೈಲಾದುದನ್ನು ಮಾಡಿ ತೃಪ್ತರಾದೀರಿ.' ಜನರಿಗೆ ಈ ಕರಾರಿನಂತೆ ಮಂತ್ರಿಗಳು ಬೇಡವೆನಿಸಿದರೆ ಅವರು ಬಿಟ್ಟುಬಿಡಲಿ. ಒಳ್ಳೆಯದನ್ನು ಕೊಡಲು ಕೈಲಾಗಲಿಲ್ಲ, ಜನರಿಗೆ ಅಮೃತ ಇಷ್ಟವಿಲ್ಲ ಎಂದು ವಿಷವನ್ನು ಕೊಡಲು ತೊಡಗಬಹುದೆ ?

ಪ್ರಶ್ನೆ : ನಯೀ ತಾಲೀಂಗೆ ಹಣ ಬೇಕಾಗಿಲ್ಲ, ಜನ ಬೇಕು ಎನ್ನುತ್ತೀರಿ. ಜನರನ್ನು ತಯಾರು ಮಾಡಲು ಸಂಸ್ಥೆಗಳು ಬೇಕು. ಅದಕ್ಕೆ ಹಣ ಬೇಕು. ಈ ವಿಷಚಕ್ರದ ಸುಳಿಯಿಂದ ಪಾರಾಗುವುದು ಹೇಗೆ ?

ಉತ್ತರ : ಉಪಾಯ ನಿಮ್ಮ ಕೈಯಲ್ಲೇ ಇದೆ. ನೀವೇ ಮೊದಲಿಡಿ. ಮೊದಲು ತಾನು, ಆಮೇಲೆ ಲೋಕ ಎಂಬ ಗಾದೆ ಬಂದಿದೆ. ನೀವೇ ಸಾಹೇಬರ ಹಾಗೆ ಆರಾಮ ಕುರ್ಚಿಯಲ್ಲಿ ಕುಳಿತು ಕೆಳಗಿನ ಜನ ಕೆಲಸಕ್ಕೆ ಬರಲಿ ಎಂದರೆ ಏನೂ ಆಗದು. ನನ್ನ ರೀತಿ ಅದಲ್ಲ. ಚಿಕ್ಕಂದಿನಿಂದಲೂ ನನ್ನಿಂದಲೇ ನನ್ನ ಸುತ್ತಣ ಜನರಿಂದಲೇ ಅತ್ಯಲ್ಪರೀತಿಯಲ್ಲಿ ಮೊದಲಿಡುವುದು ನನಗೆ ಅಭ್ಯಾಸ. ಬ್ರಿಟಿಷರಿಂದ ಈ ಬಗ್ಗೆ ಪಾಠಕಲಿಯೋಣ. ಒಂದು ಹಿಡಿ ಜನ ಇಲ್ಲಿಗೆ ಬಂದು ನೆಲೆಸಿ ತಮ್ಮದೇ ಸಾಮ್ರಾಜ್ಯವನ್ನು ಕಟ್ಟಿದರು. ರಾಜ ಕೀಯಕ್ಕಿಂತ ಅದರ ಸಾಂಸ್ಕೃತಿಕ ಬಲ ಅಭೇದ್ಯವಾಗಿದೆ. ಇಂಗ್ಲೀಷು ಎಂದರೆ ನಮಗೆ ವ್ಯಾಮೋಹ. ಗುಲಾಮ ತನ್ನ ಬಂಧನವನ್ನೇ ಬಯಸುವಂತೆ ನಮ್ಮ ತಾಯಿನುಡಿ ಹಾಳಾದರೂ ಚಿಂತೆಯಿಲ್ಲ, ಇಂಗ್ಲೀಷನ್ನೇ ಬಯಸುತ್ತೇವೆ. ಇಷ್ಟನ್ನು ಸಾಧಿಸಲು ಅವರಿಗೆ ಎಷ್ಟು ಶ್ರದ್ಧೆ, ಏಕಾಗ್ರ ನಿಷ್ಠೆ, ತ್ಯಾಗ, ದೃಢ

ಸಾಧನೆ ಇದ್ದಿರಬೇಕೋ ಯೋಚಿಸಿ. ಇದರ ಅರ್ಥ, ಮನಸ್ಸಿದ್ದರೆ ಮಾರ್ಗ ವಿದ್ದೇ ಇದೆ. ಬಂದದ್ದೆಲ್ಲಾ ಬರಲಿ, ಕೈಬಿಡದೆ ನಡೆಸೋಣ ಎಂಬ ದೃಢ ನಿರ್ಧಾರ ಮಾಡಿ ಏಳಿ; ಎಲ್ಲಾ ಅಡ್ಡಿ ಅಡಚಣೆಗಳೂ ಕರಗಿ ಹೋಗುತ್ತವೆ.

## ಇಂಗ್ಲೀಷಿನ ಸ್ಥಾನ

ಪ್ರ : ಈ ಕಾರ್ಯಕ್ರಮದಲ್ಲಿ ಇಂಗ್ಲೀಷಿಗೇನು ಸ್ಥಾನ? ಅದನ್ನು ಕಡ್ಡಾಯವಾಗಿ ಕಲಿಸಬೇಕೆ ಅಥವಾ ಐಚ್ಛಿಕ ದ್ವಿತೀಯ ಭಾಷೆಯಾಗಿಯೆ?

ಉ : ತಾಯಿಯ ಎದೆಗೆ ಅವಚಿಕೊಳ್ಳುವಂತೆ ನಾನು ತಾಯಿನುಡಿಯನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕು, ಅದರಲ್ಲಿ ಎಷ್ಟೇ ಲೋಪ ದೋಷಗಳಿರಲಿ. ಅದೊಂದೇ ನನಗೆ ಅಮೃತ ದಾನ ಮಾಡಬಲ್ಲದು. ಹಾಗೆ ನನಗೆ ಇಂಗ್ಲೀಷ್ ಭಾಷೆ ಇಷ್ಟವೇ. ಆದರೆ ತನ್ನದಲ್ಲದ ಸ್ಥಾನವನ್ನು ಅದು ಆಕ್ರಮಿಸಿದರೆ ನಾನದಕ್ಕೆ ಬದ್ಧ ವೈರಿ. ಇಂಗ್ಲೀಷ್ ಜಗತ್ತಿನ ಭಾಷೆಯೆಂದು ಈಗೆಲ್ಲರೂ ಒಪ್ಪಿದಾರೆ. ಆದುದರಿಂದ ಅದಕ್ಕೆ ದ್ವಿತೀಯ ಐಚ್ಛಿಕ ಭಾಷೆಯ ಸ್ಥಾನವನ್ನು ಕೊಟ್ಟೇನು, ಅದೂ ವಿಶ್ವವಿದ್ಯಾಲಯದಲ್ಲಿ. ಅದು ಜನಕೋಟಿಗಲ್ಲ, ಎಲ್ಲೋ ಕೆಲವರಿಗೆ ಮಾತ್ರ. ಇವೊತ್ತು ಉಚಿತ ಬಲಾತ್ಕಾರ ಶಿಕ್ಷಣವನ್ನು ಕೊಡಲಿಕ್ಕೇ ನಮಗೆ ಅನುಕೂಲವಿಲ್ಲ. ಅಂಥದರಲ್ಲಿ ಇಂಗ್ಲೀಷನ್ನು ಕಲಿಸಲು ಏರ್ಪಾಡು ಮಾಡೋಣವೆ? ಇಂಗ್ಲೀಷಿಲ್ಲದೆಯೆ ರಷ್ಯಾ ವೈಜ್ಞಾನಿಕ ಪ್ರಗತಿಯೆಲ್ಲವನ್ನೂ ಸಾಧಿಸಿದೆ. ಇಂಗ್ಲೀಷ್ ಇಲ್ಲದೆ ಸಾಧ್ಯವಿಲ್ಲವೆಂದು ನಮಗನಿಸುವುದು ನಮ್ಮ ಮಾನಸಿಕ ದಾಸ್ಯ. ಇಂಥ ಆಶಾಹೀನ ತತ್ವವನ್ನು ನಾನು ಎಂದಿಗೂ ಒಪ್ಪಲಾರೆ.

## ೧೩

## ತಾಯಿನುಡಿ ವಿ. ಇಂಗ್ಲಿಷು

ಒಬ್ಬ ಶಿಕ್ಷಣ ಪಂಡಿತ ಬರೆಯುತ್ತಾನೆ :

**'ಸ್ವಲ್ಪ ಎಚ್ಚರ ತಪ್ಪಿದಿರೋ, ಹಳ್ಳಿಗಳ ಮೂಲ ಶಿಕ್ಷಣವೇ ಬೇರೆ, ಪಟ್ಟಣಗಳ ಮೂಲಶಿಕ್ಷಣವೇ ಬೇರೆ ಆಗುತ್ತದೆ. ಉದಾ— ತಾಯಿನುಡಿಗೆ ನಷ್ಟವಾಗುವಂತೆ ಇಂಗ್ಲೀಷನ್ನು ತಂದಿಡುತ್ತಾರೆ; ಒಂದು ಬಗೆಯ ಮೇಲ್ತನದ ಗರ್ವ ಬರುತ್ತದೆ.'**

ನನ್ನ ಯೋಜನೆಯನ್ನು ರಚಿಸಿದಾಗ ಹಳ್ಳಿಗಳಿಗಾಗಿ ಎಂದು ನಾನು

ಮಾಡಿದೆ. ಪಟ್ಟಣಗಳಿಗೆ ಇದನ್ನು ಸ್ವಲ್ಪ ವ್ಯತ್ಯಾಸ ಮಾಡಬೇಕಾದೀತು ಎಂದಿದ್ದೆ. ಶಿಕ್ಷಣ ಮಾಧ್ಯಮವಾಗಿ ಯಾವ ಉದ್ಯೋಗವನ್ನು ಆರಿಸಬೇಕು ಎಂಬುದಕ್ಕೆ ಸಂಬಂಧಿಸಿದ್ದು ಅದು. ಆಪರೆ ಪ್ರಾಥಮಿಕ ತರಗತಿಗಳಲ್ಲಿ ಇಂಗ್ಲೀಷಿಗೆ ಸ್ಥಳವಿದೆಯೆಂದು ನಾನು ಎಂದೂ ತಿಳಿದಿರಲಿಲ್ಲ. ಇದುವರೆಗೆ ಈ ಯೋಜನೆ ಪ್ರಾಥಮಿಕ ಹಂತಕ್ಕೇ ಸಂಬಂಧಿಸಿದೆ. ಅದನ್ನೇ ಇಂಗ್ಲೀಷಿಲ್ಲದ ಮೆಟ್ರಿಕ್ಯುಲೇಷನ್ ಮಟ್ಟಕ್ಕೆ ತಂದಿದೇವೆ. ಮಕ್ಕಳ ಮೇಲೆ ಇಂಗ್ಲೀಷನ್ನು ಹೇರುವುದು ಅವರ ಬೆಳವಣಿಗೆಯನ್ನು ಮೊಟಕಿಸಿ, ಬಹುಶಃ ಅವರ ಸ್ವಬುದ್ಧಿಯನ್ನು ಸಾಯಿಸಿದ ಹಾಗೆ. ಭಾಷೆಯನ್ನು ಕಲಿಯುವುದು ಎಂದರೆ ಜ್ಞಾಪಕ ಶಕ್ತಿಯನ್ನು ಬೆಳೆಸುವುದು. ಮೊದಲಿನಿಂದಲೇ ಇಂಗ್ಲೀಷು ಕಲಿಯುವುದು ಮಗುವಿನ ತಲೆಯ ಮೇಲೆ ಗುಡ್ಡವನ್ನು ಹೊರಿಸಿದ ಹಾಗೆ. ಅದನ್ನು ಕಲಿಯಲು ಹೋಗಿ ಮಾತೃಭಾಷೆಗೆ ಅಷ್ಟು ನಷ್ಟ, ಹಳ್ಳಿಯ ಮಗುವಿಗೆ ಹೇಗೋ ಪಟ್ಟಣದ ಮಗುವಿಗೂ ಹಾಗೇ ಮಾತೃಭಾಷೆಯ ಗಟ್ಟಿ ತಳಹದಿ ಅಗತ್ಯ, ಅವರ ಬೆಳವಣಿಗೆಗೆ. ಈ ದೌರ್ಭಾಗ್ಯ-ದಷ್ಟ ಭಾರತದಲ್ಲಿಯೆ ಈ ಮಾತನ್ನು ತರ್ಕ ಮಾಡಬೇಕಾಗಿ ಬಂದಿದೆ.೫೭

## ನಯೀ ತಾಲೀಮಿನಲ್ಲಿ ವೈದ್ಯದ ಸ್ಥಾನ

ಆಶಾದೇವಿಗೆ ತುಂಬಾ ಕೆಲಸ. ನನ್ನ ಸಮಯದ ಬಗ್ಗೆ ಬಹಳ ಕಾಳಜಿ. ಅನಗತ್ಯವಾಗಿ ನನ್ನ ಸಮಯವನ್ನು ತೆಗೆದುಕೊಳ್ಳುವುದಿಲ್ಲ. ಆದರೂ ನಾನು ದಿಲ್ಲಿಯಿಂದ ಹೊರಡುವ ಮುನ್ನಾ ದಿನ ಐದು ನಿಮಿಷದ ಮಟ್ಟಿಗೆ ಬಂದು, ತಾಲೀಮೀ ಸಂಘದ ಶಿಕ್ಷಕರು ವೈದ್ಯವನ್ನು ಕಲಿಯಬೇಕೆ, ತಾನು ಎಲ್ಲಾ ವೈದ್ಯರಂತೆ ನಾಲ್ಕು-ಐದು ವರ್ಷ ಕಲಿಯಬೇಕೆ, ನನ್ನ ಅಭಿಪ್ರಾಯವೇನು ಎಂದು ಕೇಳಿದಳು.

ನನಗೆ ಒಡನೆಯೆ ಅರ್ಥವಾಯಿತು. ಹಳೆಯ ಶಿಕ್ಷಣ ಪದ್ಧತಿಯಲ್ಲಿ ಎಂ. ಎ. ಪ್ಯಾಸು ಮಾಡಿದುದರ ದೆಸೆಯಿಂದ ಆಶಾದೇವಿಯಂಥವಳಿಗೂ ಅದರ ಪ್ರಭಾವದಿಂದ ಪೂರಾ ಮುಕ್ತಳಾಗುವುದು ಕಷ್ಟ.

ಹೇಳಿಕೊಳ್ಳಲು ನನಗೆ ಯಾವ ಪ್ರಶಸ್ತಿಯೂ ಇಲ್ಲ. ಹೈಸ್ಕೂಲಿನಲ್ಲಿ ಕಲಿತ ಅಲ್ಪಜ್ಞಾನಕ್ಕೆ ಬೆಲೆ ಕೊಡುವುದನ್ನು ನಾನು ಮರೆತು ಬಹಳ ಕಾಲವಾಯಿತು. ಪ್ರಕೃತಿ ಚಿಕಿತ್ಸೆಯ ಚಿಲುಮೆಯಲ್ಲಿ ಧಾರಾಳವಾಗಿ ಕುಡಿದಿದೇನೆ.

ಆದುದರಿಂದ ನಾನಾಕೆಗೆ ಹೇಳಿದೆ :

' ನಮ್ಮ ಮಕ್ಕಳು ಕಲಿಯಬೇಕಾದ ಮೊದಲನೆ ಪಾಠ, ತಾವು ಆರೋಗ್ಯದಿಂದಿರಬೇಕು, ತಮ್ಮ ಅಕ್ಕಪಕ್ಕವೆಲ್ಲ ಚೊಕ್ಕಟವಾಗಿರಬೇಕು, ತಾವೂ ಶುಚಿಯಾಗಿರಬೇಕು—ಎಂದು ನೀನೇ ಹೇಳುತ್ತೀಯೆ. ನಿನಗೆ ಬೇಕಾದ ವೈದ್ಯಜ್ಞಾನವೆಲ್ಲವೂ ಇದರಲ್ಲೇ ಬಂತು ಎನ್ನುತ್ತೇನೆ. ನಮ್ಮ ಶಿಕ್ಷಣ ಕೋಟ್ಯಂತರ ಗ್ರಾಮಸ್ಥರಿಗೆ, ಅವರ ಪ್ರಯೋಜನಕ್ಕಾಗಿ, ರೂಪಿತವಾಗಿದೆ. ಅವರು ಪ್ರಕೃತಿಯ ಮಡಿಲಲ್ಲೆ ವಾಸವಾಗಿದಾರೆ. ಆದರೂ ಪ್ರಕೃತಿಯ ನಿಯಮಗಳು ಅವರಿಗೆ ಗೊತ್ತಿಲ್ಲ. ಗೊತ್ತಿರುವ ಅಲ್ಪಸ್ವಲ್ಪವನ್ನೂ ಅವರು ನಡೆಸರು. ಹಳ್ಳಿಗಳ ಈ ಜನರ ಕರುಣಾಮಯ ಅವಸ್ಥೆಯ ಪರಿಜ್ಞಾನದಿಂದ ಹುಟ್ಟಿದೆ ನಯೀ ತಾಲೀಂ. ಆದುದರಿಂದ ಪುಸ್ತಕಗಳಿಂದ ಇದರ ವಿಷಯವನ್ನು ಅರಿಯಲಾಗದು. ಇದುವರೆಗೆ ನಾವು ಗ್ರಹಿಸಿದುದು ಪ್ರಕೃತಿಯ ಪುಸ್ತಕದಿಂದ. ಅದೇ ರೀತಿ ಹಳ್ಳಿಯ ವೈದ್ಯವನ್ನೂ ಪ್ರಕೃತಿಯಿಂದಲೇ ಕಲಿಯಬೇಕು. ಪ್ರಕೃತಿ ಚಿಕಿತ್ಸೆಯ ತಿರುಳೇನು ? ಆರೋಗ್ಯ ನೈರ್ಮಲ್ಯಗಳ (ಸಫಾಯಿ) ಸೂತ್ರಗಳನ್ನೂ ಆಹಾರಶಾಸ್ತ್ರವನ್ನೂ ಅರಿತು ಅದರಂತೆ ನಡೆಯುವುದು. ಹೀಗೆ ಪ್ರತಿಯೊಬ್ಬನೂ ತನ್ನ ತನ್ನ ವೈದ್ಯನಾಗಬೇಕು. ಉದರಪೋಷಣೆಗಾಗಿ ತಿನ್ನುತ್ತ, ಭೂಮಿ ನೀರು ಆಕಾಶ ಬೆಳಕು ಗಾಳಿ—ಈ ಪಂಚಭೂತಗಳ ಗೆಳೆಯನಾಗಿ, ಇವನ್ನೆಲ್ಲ ಸೃಜಿಸಿದ ದೇವರ ಕಿಂಕರನಾದವನು ಕಾಯಿಲೆ ಬೀಳಲಾಗದು. ಒಂದು ವೇಳೆ ಕಾಯಿಲೆ ಬಿದ್ದರೂ ದೇವರನ್ನು ನಂಬಿ ಶಾಂತವಾಗಿದ್ದಾನು. ಮರಣ ಬಂದುದೇ ಆದರೆ ಶಾಂತಿಯಿಂದ ಸತ್ತಾನು. ತನ್ನ ಹಳ್ಳಿಯ ಹೊಲಗಳಲ್ಲಿ ಗಿಡಮೂಲಿಕೆಗಳಿದ್ದರೆ ಅವನ್ನು ಉಪಯೋಗಿಸಿಯಾನು. ಕೋಟಿಗಟ್ಟಲೆ ಜನ ಒಂದು ಮಾತೂ ಗೊಣಗದೆ ಹೀಗೆ ಬದುಕಿ ಬಾಳಿ ಸಾಯುತ್ತಾರೆ. ಅವರು ವೈದ್ಯರ ಹೆಸರನ್ನೆ ಕೇಳಿಲ್ಲ, ಕಣ್ಣಾರೆ ನೋಡಿದುದಂತೂ ಇಲ್ಲವೇ ಇಲ್ಲ. ನಾವು ನಿಜವಾಗಿ ಗ್ರಾಮಧರ್ಮಿಗಳಾಗೋಣ ಹಳ್ಳಿಯ ಮಕ್ಕಳೂ ವಯಸ್ಕರೂ ನಮ್ಮ ಬಳಿಗೆ ಬರುತ್ತಾರೆ. ಸತ್ಯವಾಗಿ ಬದುಕುವುದು ಹೇಗೋ ಅವರಿಗೆ ತಿಳಿಸಿ ಹೇಳೋಣ. ನೂರಕ್ಕೆ ತೊಂಬತ್ತೊಂಬತ್ತು ಜನ ಅನೈರ್ಮಲ್ಯದಿಂದ, ಆಹಾರದೋಷದಿಂದ ಆಹಾರಾಭಾವದಿಂದ ಕಾಯಿಲೆ ಬೀಳುತ್ತಾರೆ ಎಂದು ವೈದ್ಯರು ಹೇಳುತ್ತಾರೆ. ಈ ಶೇ. ೯೯ ಜನಕ್ಕೆ ಜೀವನ ಕಲೆಯನ್ನು ಕಲಿಸಿದರೆ ಉಳಿದ ಶೇ. ೧ರ ಜನವನ್ನು ಮರೆತರೂ ಚಿಂತೆಯಿಲ್ಲ. ಡಾ. ಸುಶೀಲಾನಯರ್‌ರಂಥ ಧರ್ಮಿಷ್ಠ ವೈದ್ಯರು ಯಾರಾದರೂ ಅವರಿಗೆ

ದೊರೆತಾರು. ಅವರ ಚಿಂತೆ ನಮಗೆ ಬೇಡ. ಇಂದು ಶುದ್ಧ ಜಲ, ಒಳ್ಳೆಯ ಮಣ್ಣು, ಹೊಸ ಗಾಳಿ ನಮಗೆ ಗೊತ್ತೇ ಇಲ್ಲ. ಆಕಾಶ–ಸೂರ್ಯತೇಜಗಳ ಅಖಂಡ ಪ್ರಯೋಜನದ ಅರಿವೇ ನಮಗಿಲ್ಲ. ಈ ಪಂಚಶಕ್ತಿಗಳನ್ನು ವಿವೇಕ ದಿಂದ ಬಳಸಿಕೊಂಡರೆ, ಯೋಗ್ಯ ಆಹಾರವನ್ನು ತಿಂದರೆ, ಕಾಲಾನುಕಾಲಕ್ಕೂ ಅದರಿಂದ ಉಪಯೋಗವಾದೀತು. ಈ ಜ್ಞಾನವನ್ನು ಪಡೆಯಲು ಕೋಟಿಗಟ್ಟಲೆ ಹಣ ಸುರಿಯಲೂ ಬೇಕಾಗಿಲ್ಲ, ಪ್ರಶಸ್ತಿಗಳೂ ಬೇಕಾಗಿಲ್ಲ. ಜೀವಂತ ಆಸ್ತಿಕತೆ, ಸೇವಾ ಪರಾಯಣತೆ, ಪಂಚಭೂತಗಳ ಜ್ಞಾನ, ಆಹಾರಶಾಸ್ತ್ರ ಪರಿಚಯ – ಇಷ್ಟಾದರೆ ಸಾಕು. ಶಾಲೆ ಕಾಲೇಜುಗಳಲ್ಲಿ ಕಾಲವನ್ನು ವ್ಯರ್ಥವಾಗಿ ಕಳೆಯ ದೆಯೆ ಇದನ್ನು ಕಲಿಯಬಹುದು.'೫೮

## ೧೫
## ಶಿಕ್ಷಣ ಪಂಡಿತರೊಡನೆ

೧೯೪೭, ಏಪ್ರಿಲ್ ೨೨, ೨೩ ರಲ್ಲಿ ಪಾಟ್ನಾದಲ್ಲಿ ನಡೆದ ಹಿಂದುಸ್ತಾನಿ ತಾಲೀಮಿ ಸಂಘದ ಸಭೆಯಲ್ಲಿ ಗಾಂಧೀಜೀ ಸದಸ್ಯರಿದಿರಿಗೆ ತಮ್ಮ ಆತ್ಮವನ್ನೇ ತೋಡಿಕೊಂಡರು.

### ಸ್ವಾವಲಂಬನ

ಆಯವ್ಯಯದ ಅಂದಾಜು ಪಟ್ಟಿಯನ್ನು ಚರ್ಚಿಸುತ್ತ ಸರಕಾರದ ಆಶ್ರಯ ವನ್ನು ನಿರೀಕ್ಷಿಸಬೇಡಿ ಎಂದು ಗಾಂಧೀಜೀ ಎಚ್ಚರಿಕೆ ಕೊಟ್ಟರು. 'ನಾವು ಕೇಳಿ ದಷ್ಟು ಅವರು ಕೊಟ್ಟಾರು. ಅವರನ್ನು ನಾವು ನಂಬಿ ಕೂತರೆ ನಯೀ ತಾಲೀಂ ಕೊನೆಗಂಡಂತೆಯೆ.' ಮೂರು ವರ್ಷದ ಅಂದಾಜು ಪಟ್ಟಿ ಅದು. ಆ ವೇಳೆಗೆ ಪೂರ್ಣ ಸ್ವಾವಲಂಬಿಗಳಾಗಬೇಕು. ಆ ರೀತಿ ಅಂದಾಜು ಪಟ್ಟಿ ಮಾಡಬೇಕು ಮೂರು ವರ್ಷದ ಹೊತ್ತಿಗೆ ಅದನ್ನು ಸಾಧಿಸದಿದ್ದರೆ ಬಹಿರಂಗವಾಗಿ ತಮ್ಮ ಅಸಮರ್ಥತೆಯನ್ನು, ದಿವಾಳಿಯನ್ನು ಒಪ್ಪಿಕೊಳ್ಳಬೇಕು. ಸರಿಯಾಗಿ ಅರಿತರೆ ಸೋಲು ಗೆಲುವಿನ ಮೆಟ್ಟಿಲು.

### ನಿಮ್ಮ ಇತಿಮಿತಿ ಅರಿತುಕೊಳ್ಳಿ

ಮದರಾಸಿನ ವಿದ್ಯಾಮಂತ್ರಿ ಶ್ರೀ ಅವಿನಾಶಲಿಂಗಂ ಕೇಳಿದರು, ಮದರಾಸಿ

ನಲ್ಲಿ ಹಿಂದುಸ್ತಾನಿ ತಾಲೀಮೀ ಸಂಘದವರು ಒಂದು ಶಿಕ್ಷಕ ಶಿಕ್ಷಣ ಶಾಲೆಯನ್ನು ನಡೆಸಲಿ, ಮದರಾಸು ಸರಕಾರ ಅದರ ವೆಚ್ಚ ಹೊರುತ್ತದೆ ಎಂತ. ಅದರ ಬಗ್ಗೆ ಗಾಂಧೀಜೀ ನಿಮ್ಮ ಶಕ್ತಿಗೆ ಮೀರಿದ ಕೆಲಸಕ್ಕೆ ಕೈಹಾಕಬೇಡಿ ಎಂದರು. ಅದರಿಂದ ಇತ್ತ ಸಂಘದ ಶಕ್ತಿಯೂ ವ್ಯರ್ಥ, ಅತ್ತ ಮದರಾಸು ಸರಕಾರಕ್ಕೂ ತೊಡಕು. ಅಧಿಕಾರ ವಹಿಸಿಕೊಂಡುದರಿಂದ ಕಾಂಗ್ರೆಸ್ ಸರಕಾರಗಳಿಗೆ ಕೋಟಿಗಟ್ಟಲೆ ಹಣ ದೊರೆತಿದೆ. ಕಾರ್ಯ ಕಾರಣ ವಿವೇಚನೆ ಮಾಡಿ ನಾಕಷ್ಟು ಜನ ಶಿಕ್ಷಕ ರಿದ್ದರೆ, ಯಶಸ್ವಿಯಾಗುವ ಭರವಸೆಯಿದ್ದರೆ, ಸಂಘ ಈ ಕೆಲಸ ಕೈಗೊಳ್ಳಲಿ. ನಮ್ಮ ನಮ್ಮ ಇತಿಮಿತಿ ತಿಳಿದಿರುವುದು ಒಳಿತು.

## ಮೂರು ಬಗೆಯ ವಿಕಾಸ

'ನಮ್ಮ ಶಿಕ್ಷಣ ಪದ್ಧತಿ ಮನಸ್ಸು, ದೇಹ, ಆತ್ಮಗಳ ವಿಕಾಸಕ್ಕೆ ದಾರಿ ಮಾಡುತ್ತದೆ. ಸಾಧಾರಣ ಪದ್ಧತಿ ಬರೀ ಮನಸ್ಸಿನ ಬೆಳವಣಿಗೆಗೆ ಗಮನ ಕೊಡುತ್ತದೆ. ಸ್ವಲ್ಪ ನೂಲುವುದನ್ನು ಕಸ ಗುಡಿಸುವುದನ್ನು ಹೇಳಿಕೊಟ್ಟರೆ ನಯೀ ತಾಲೀಂ ಅಲ್ಲ. ಇವು ಅನಿವಾರ್ಯವಾದರೂ ಮೇಲೆ ಹೇಳಿದ ಸಮ ವಿಕಾಸವನ್ನು ತಾರದಿದ್ದರೆ ವ್ಯರ್ಥ. ಇವೊತ್ತು ನಾನು ಬೇರೆ ಕೆಲಸದಲ್ಲಿ ತೊಡಗಿದೇನೆ. ಆದರೂ ನಯೀ ತಾಲೀಂ ಯಾವಾಗಲೂ ನನ್ನ ಮನಸ್ಸಿನಲ್ಲಿದ್ದೇ ಇದೆ.'

## ಖಾದಿಯ ಸ್ಥಾನ

ಆಮೇಲೆ ನಯೀ ತಾಲೀಂನಲ್ಲಿ ಖಾದಿಯ ಸ್ಥಾನದ ಕಡೆ ತಿರುಗಿದರು ಗಾಂಧೀಜೀ. 'ದಕ್ಷಿಣ ಆಫ್ರಿಕಾದಲ್ಲಿ, ೧೯೦೮ರಲ್ಲಿ, ಖಾದಿ ನನ್ನ ಮನಸ್ಸಿನಲ್ಲಿ ಅತಿ ಮುಖ್ಯಸ್ಥಾನವನ್ನು ಹಿಡಿದಿತ್ತು. ಆದರೆ ಅದಕ್ಕಿಂತ ಉತ್ತಮ ಸಾಕಲ್ಯಗುಣದ ಮತ್ತೊಂದು ಉದ್ಯೋಗವಿದ್ದರೆ ನಯೀ ತಾಲೀಮನ್ನು ಖಾದಿಯ ಸುತ್ತಲೂ ಹೆಣೆಯುತ್ತಿರಲಿಲ್ಲ. ಪ್ರತಿಯೊಬ್ಬರೂ ದಿನವೂ ಒಂದೊಂದು ತಾಸು ನೂತರೆ ಹಿಂದೂಸ್ಥಾನಕ್ಕೆ ಬೇಕಾದ ಬಟ್ಟೆಯೆಲ್ಲವೂ ಉತ್ಪತ್ತಿಯಾಗುತ್ತದೆಯೆಂದು ಅವರ ವಿಚಾರ. ಹಾಗಲ್ಲದೆ ದಿನವೂ ಆರು ಗಂಟೆ ನೂಲಬೇಕಾಗಿ ಬಂದರೆ ತಮಗೆ ಖಾದಿ ಬೇಡ ಎಂದರು. ಜನರಿಗೆ ಬೇರೆ ಕೆಲಸಗಳಿಲ್ಲವೆ? ಸ್ವಲ್ಪ ಬುದ್ಧಿಯ ಕೆಲಸವನ್ನೂ ಮಾಡಬೇಕು. ನಯೀ ತಾಲೀಂನಲ್ಲಿ ಗುಲಾಮಗಿರಿಗೆ ಅವಕಾಶ

ವಿಲ್ಲ. ಒಂದು ಗಂಟೆ ನೂತರೆ ಆ ಗಂಟೆ ನೂಲುವವನ ಆತ್ಮವಿಕಾಸಕ್ಕೆ ವಿನಿಯೋಗಿಸಿದಂತೆ.

### ಖಾದಿ—ಉತ್ತರ ಬುನಿಯಾದಿ

"ಉತ್ತರ–ಬುನಿಯಾದಿ ಹಂತದಲ್ಲಾದರೂ ಗಿರಣಿಗಳ ಕಾರ್ಯವಿಧಾನವನ್ನು ಕಲಿಸಬೇಕೆಂದು ಸೈಯದರ್ ಸಾಹೇಬರು ಹೇಳಿದಾಗ ನಾನೊಪ್ಪಲಿಲ್ಲ. ನೂಲುವುದು ಶಿಕ್ಷಣ ಮಾಧ್ಯಮವಾಗಿ ಉತ್ತಮ ವಸ್ತು. ಅಷ್ಟೇ ಅಲ್ಲ, ಕೋಟಿಗಟ್ಟಲೆ ವಿದ್ಯಾರ್ಥಿಗಳಿಗೆ ಈ ಆವಶ್ಯಕ ವೃತ್ತಿಯ ಪರಿಚಯವಿಲ್ಲದಂತೆ ಮಾಡಲಾಗದು. ತಕಲಿ, ಕಸಪೊರಕೆಗಳ ಮೇಲೆ ತಾನು ಬರೆದುದನ್ನು ದೇವ ಪ್ರಕಾಶ್ ನನಗೆ ತೋರಿಸಿದ. ಅವನು ಬರೆದುದೆಲ್ಲ ನಿಜವಿದ್ದರೆ, ಈ ಎರಡು ಕ್ರಿಯೆಗಳನ್ನು ಕಲಿಯುವಾಗ ಎಷ್ಟೋ ಜ್ಞಾನ ಬರುತ್ತದೆ. ಅದನ್ನು ಬುನಿಯಾದಿ ಹಂತದಲ್ಲಿ ಮುಗಿಸಲಾರೆವು. ಈ ಆವಶ್ಯಕ ಉದ್ಯೋಗಗಳ ಶಾಸ್ತ್ರವನ್ನು ಸರ್ವೋದಯ ದೃಷ್ಟಿಯಿಂದ ನಾವು ಅರಳಿಸಿಲ್ಲ. ಗಿರಣಿಯ ನೂಲು–ನೇಯ್ಗೆಗೆ ತಕಲಿ, ಕೈಮಗ್ಗಗಳೇ ಆಧಾರ. ನಮ್ಮನ್ನು ಸುಲಿಗೆ ಮಾಡಬೇಕೆಂದು ಪಶ್ಚಿಮ ದೇಶಗಳು ಗಿರಣಿಗಳನ್ನು ರಚಿಸಿದರು. ನಾವು ಯಾರನ್ನೂ ಸುಲಿಯಬಯಸುತ್ತಿಲ್ಲ. ಆದುದರಿಂದ ನಮಗೆ ಗಿರಣಿಗಳ ಅಗತ್ಯವಿಲ್ಲ; ತಕಲಿ, ಮಗ್ಗಗಳ ಶಾಸ್ತ್ರ ತಿಳಿದಿರಬೇಕು. ಈ ವಿಷಯದಲ್ಲಿ ಯೂರೋಪನ್ನು ಅನುಕರಿಸಿದರೆ ಹಿಂದೂಸ್ತಾನವೂ ಹಾಳಾದೀತು, ಲೋಕವೂ ಹಾಳಾದೀತು."

### ಖಾದಿ—ಗಿರಣಿ

ಹುಡುಗರು ಶಿಕ್ಷಣ ಮುಗಿಸಿ ಹೊರಗೆ ಬಂದೊಡನೆ ಗಿರಣಿಗಳ ನೌಕರಿಗೆ ಕೈಯೊಡ್ಡುವಾಗ ಶಿಕ್ಷಣ ಪಂಡಿತರು ಈ ರೀತಿ ವಿಚಾರ ಮಾಡಲು ಕಷ್ಟ ಎಂದರು ಡಾ|| **ಜಾಕಿರ್** ಹುಸೇನ್. ಗಾಂಧೀಜೀ ಹೇಳಿದರು—"ನನ್ನ ಕಲ್ಪನೆಯ ಶಾಲೆಗಳ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮುಗಿದ ಮೇಲೆ ಉದ್ಯೋಗಕ್ಕಾಗಿ ಗಿರಣಿಗಳಿಗೆ ಹೋಗರು. ವಾಸ್ತವವಾಗಿ, ಖಾದಿ-ಗಿರಣಿ ಬಟ್ಟೆ ಎರಡೂ ಒಂದು ಕಡೆ ಮಾರಲೇಕೂಡದು. ಬೇಕಾದರೆ ಗಿರಣಿಗಳು ತಮ್ಮ ಬಟ್ಟೆಯನ್ನು ಭಾರತದ ಹೊರಗಡೆ ಮಾರಲಿ. ಲಂಕಾಷೈರಿನಲ್ಲಿ ತಯಾರಾದ ಬಟ್ಟೆ ಇಂಗ್ಲೆಂಡಿನಲ್ಲಿ ಸಿಗುವುದಿಲ್ಲ. ಎಲ್ಲವನ್ನೂ ಹೊರಗೆ ಕಳಿಸುತ್ತಾರೆ. ನಮ್ಮ ಗಿರಣಿಗಳು ಹೊರ ದೇಶಗಳಲ್ಲಿ ಕೂಡ ಬಹಳ ದಿನ ಮಾರಲಾರವು.

## ನಮಗೆ ದಾರಿ

"ಸುತ್ತಲೂ ಗಿರಣಿಗಳ ಗಾಳಿ ಬೀಸುತ್ತಿರುವಾಗ ನಿಮ್ಮ ಕಷ್ಟವೇನೆಂಬುದು ನನಗೆ ಅರ್ಥವಾಗುತ್ತದೆ. ನಮ್ಮ ಮಂತ್ರಿಗಳು ಕೂಡ ಗಿರಣಿಗಳ ವಿಷಯವಾಗಿಯೇ ಮಾತನಾಡುತ್ತಾರೆ. ನಮ್ಮ ನಂಬಿಕೆಯಂತೆ ನಡೆದು, ಅದಕ್ಕಾಗಿ ದುಡಿಯುವುದೇ ನಮಗೆ ದಾರಿ. ನಮಗೆ ಖಾದಿಯ ಸತ್ಯದಲ್ಲಿ ನಂಬಿಕೆಯಿದ್ದರೆ ಅದರಂತೆ ನಡೆಯಬೇಕು, ಅದನ್ನು ಹರಡಬೇಕು, ದೇಶದ ಕಲ್ಯಾಣಕ್ಕಾಗಿ ನಾವು ಸರಿಯಾದುದನ್ನು ಮಾಡುತ್ತಿದ್ದೇವೆ ಎಂದು ಮಂತ್ರಿಗಳಿಗೆ ತಿಳಿಸಿ ಹೇಳಬೇಕು.

" ಕಾಂಗ್ರೆಸ್ಸು ಹಿಂದೂಸ್ತಾನಿ ತಾಲೀಮಿ ಸಂಘವನ್ನು ರಚಿಸಿತು. ಆದರೆ ಅದರಲ್ಲಿ ಶ್ರದ್ಧೆ ತೋರಿಸಲಿಲ್ಲ. ಚರಕಾ ಸಂಘವೂ ಕಾಂಗ್ರೆಸ್ಸಿನ ಮರಿ. ಆದರೆ ಕಾಂಗ್ರೆಸ್ಸು ಅದನ್ನು ಎತ್ತಿಕೊಳ್ಳಲಿಲ್ಲ. ಈ ಸಂಸ್ಥೆಗಳ ಚಿಂತೆ ಯಾರಿಗಿದೆ ಈಗ ? ಕಾಂಗ್ರೆಸ್ಸಿನವರಲ್ಲಿ ಹಣ – ಅನುಭವ ಕಡಮೆಯಿದ್ದಾಗ ರಚನಾತ್ಮಕ ಕೆಲಸಕ್ಕೆ ಗಮನ ಕೊಟ್ಟರು. ಇವೊತ್ತು ಇಡೀ ಸರಕಾರ ಅವರ ಕೈಗೆ ಬಂದಿದೆ. ಕೈಗೆ ಬಂದ ಅಧಿಕಾರ ಇನ್ನೂ ಜೀರ್ಣವಾಗಿಲ್ಲ. ಇನ್ನೂ ಸ್ವಲ್ಪ ಕಾಲವಾಗಬೇಕು."

## ಹಿಂದಿದ್ದ ಅಧಿಕಾರವಿಲ್ಲ

ನಯೀ ತಾಲೀಂ ಎಂದರೆ ಹೊಸ ಸಮಾಜ ವ್ಯವಸ್ಥೆಯ ಪ್ರಚಾರ ಎಂಬುದನ್ನು ಗಾಂಧೀಜೀ ಮನಗಂಡಿದ್ದರು. ಅಧಿಕಾರಾರೂಢರಾದ ಮಂತ್ರಿಗಳು ಸಂಘದ ಅಭಿಪ್ರಾಯವನ್ನು ಪೂರ್ಣವಾಗಿ ಒಪ್ಪದಿರಬಹುದು. ಸಹಕಾರ–ಸಂಘ ಎರಡರ ಕಾರ್ಯವನ್ನೂ ಮೇಳಗೂಡಿಸಿ, ಇಲ್ಲವಾದರೆ ಸಂಘ ಕಾಡುಪಾಲಾಗಲಿ ಎಂದು ಗಾಂಧೀಜಿಯನ್ನು ಡಾ|| ಜಾಕಿರ್‌ಹುಸೇನರು ಕೇಳಿದರು. ಹಿಂದಿದ್ದ ಪ್ರಭಾವ ಇಂದು ತಮಗಿಲ್ಲವೆಂದು ಗಾಂಧೀಜೀ ಹೇಳಿಕೊಂಡರು. ಈ ಅಲಕ್ಷ್ಯಕ್ಕಾಗಿ ನಾನು ಸರಕಾರವನ್ನು ನಿಂದಿಸುವುದಿಲ್ಲ. ಅವರ ಕೈಗೆ ಒಂದು ಯಂತ್ರ ಸಿಕ್ಕಿದೆ. ಅದರ ಪರಂಪರೆಯನ್ನು ಅವರು ನಡೆಸಬೇಕು. ಮಂತ್ರಿಯಾಗಿದ್ದರೆ, ಬಹುಶಃ, ನಾನೂ ಹಾಗೇ ಮಾಡುತ್ತಿದ್ದೆನೋ ಏನೋ. ಏನೇ ಇರಲಿ, ಜವಾಹರಲಾಲರೊಡನೆ, ಇತರರೊಡನೆ ಮಾತನಾಡುತ್ತಿದೇನೆ. ವಿಷಯಗಳನ್ನು ವಿವರಿಸಿ ಹೇಳುವುದೂ ಶಿಕ್ಷಣ ಪಂಡಿತರದೊಂದು ಕೆಲಸವಲ್ಲವೆ ?

ಡಾ|| ಜಾಕಿರ್‌ಹುಸೇನ್ : " ಕಾಂಗ್ರೆಸ್ಸು ತನ್ನ ಶಿಕ್ಷಣ ನೀತಿಯನ್ನು ಮಂತ್ರಿಗಳಿಗೆ ವಿವರಿಸಲಿಲ್ಲ. ಅದು ತಪ್ಪಾಯಿತು. ಇಲ್ಲಿಗೆ ಬರುವ ಮೊದಲು

ಮೌಲಾನಾ ಅಬುಲ್ ಕಲಾಂ ಆಜಾದರನ್ನು ನೋಡಿದ್ದೆ. ಅವರು ಸಾನುಭೂತಿ ತೋರಿಸಿದರು. ಸಂಘದವರನ್ನು ಭೇಟಿಯಾಗುತ್ತೇನೆ ಎಂದರು. ಸಂಘವೂ ಅವರನ್ನು ಕಾಣಲು ತೀರ್ಮಾನಿಸಿದೆ."

ಗಾಂಧೀಜೀ: "ಸರಕಾರ ಮೊದಲಿಗೇ ನಿಮ್ಮನ್ನು ಕರೆಸಬೇಕಾಗಿತ್ತು. ಸಂಘದ ಮಾರ್ಗದರ್ಶನದಂತೆ ಸಾರ್ಜೆಂಟ್ ಕೆಲಸ ಮಾಡಬೇಕಾಗಿತ್ತು : ನಿಮಗೆ ಆಹ್ವಾನ ಕಳಿಸಿ ಎಂದು ಸರಕಾರಕ್ಕೆ ನಾನು ಹೇಳಿದ್ದೆ."

## ಧಾರ್ಮಿಕ ಶಿಕ್ಷಣ

ಧಾರ್ಮಿಕ ಶಿಕ್ಷಣಕ್ಕೆ ಅವಕಾಶ ಮಾಡಿಕೊಟ್ಟು ಶಾಲೆಗಳಲ್ಲಿ ಅದಕ್ಕೆ ವೇಳೆಯನ್ನು ಗೊತ್ತುಮಾಡಬೇಕು ; ಧರ್ಮವನ್ನು ಬಲ್ಲವರು ಬಂದು ಪಾಠ ಹೇಳಲಿ. ಆದರೆ ಸರಕಾರದವರು ಹೆಚ್ಚೇನೂ ಮಾಡಬಾರದು ಎಂದರು ಜಾಕಿರ್‌ಹುಸೇನ್.

ಉತ್ತರವಾಗಿ ಗಾಂಧೀಜೀ ಹೇಳಿದರು—'ಮೌಲಾನಾ ಸಾಹೇಬರೊಡನೆ ಮಾತನಾಡಿ ನೋಡಿ. ಸರಕಾರ ಧಾರ್ಮಿಕ ಶಿಕ್ಷಣವನ್ನು ಒದಗಿಸಬೇಕೆಂಬುದನ್ನು ನಾನು ಒಪ್ಪುವುದಿಲ್ಲ. ತಪ್ಪು ರೀತಿಯ ಧಾರ್ಮಿಕ ಶಿಕ್ಷಣ ಕೊಡಬೇಕೆಂಬ ಜನರಿದ್ದರೆ ಅವನ್ನು ತಡೆಯಲಾಗಲಿಕ್ಕಿಲ್ಲ. ಹಾಗೆ ಮಾಡಿದರೆ, ಪರಿಣಾಮ ಕೆಟ್ಟದೇ ಆದೀತು. ಧಾರ್ಮಿಕ ಶಿಕ್ಷಣ ಕೊಡುವವರು ತಾವೇ ವ್ಯವಸ್ಥೆ ಮಾಡಿಕೊಳ್ಳಲಿ. ಆದರೆ ನ್ಯಾಯ–ನೀತಿಗೆ ವಿರುದ್ಧವಾಗಿರಬಾರದು, ಸರ್ವ ಧರ್ಮಗಳಿಗೂ ಸಮಾನವಾದ, ಎಲ್ಲಾ ಗುಂಪುಗಳಿಗೂ ಒಪ್ಪಿಗೆಯಾಗುವ ಮುಖ್ಯ ನೀತಿಧರ್ಮವನ್ನು ಮಾತ್ರ ಸರಕಾರ ಕಲಿಸಬಹುದು. ವಸ್ತುತಃ ನಮ್ಮದು ಮತಾತೀತ ರಾಷ್ಟ್ರ.'

## ಪ್ರಶಸ್ತಿ ಪತ್ರಗಳು

ಮೂಲ ಶಿಕ್ಷಣ ಪಡೆದು ಮುಂದೆ ಹೋಗುವವರಿಗೆ ಪ್ರಶಸ್ತಿ ಪತ್ರಗಳನ್ನು ಕೊಡುವ ವಿಚಾರದಲ್ಲಿ ಗಾಂಧೀಜೀ ಹೇಳಿದರು—ಅದಕ್ಕೆ ಚಿಕ್ಕದೊಂದು ಸರಿಯಾದ ಅರ್ಥ ಕೊಡುವ ಹೆಸರಿರಲಿ. ಪ್ರಶಸ್ತಿ ಪತ್ರದಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲದೆ ವಿದ್ಯಾರ್ಥಿಯ ಪ್ರಶಸ್ತಿಯನ್ನು ಹಿಂದುಸ್ತಾನಿಯಲ್ಲಿ ತಿಳಿಸಿ. 'ತಿರುಳಿಲ್ಲದುದಕ್ಕೆ ಬರೀ ದೊಡ್ಡ ಹೆಸರನ್ನು ಕೊಟ್ಟರೆ ಕೊಟ್ಟವರಿಗೇನು ಗೌರವವಲ್ಲ.'

## ಸಹಶಿಕ್ಷಣ

ತಾಲೀಮೀ ಸಂಘದ ಸಹಶಿಕ್ಷಣ ಪದ್ಧತಿ ಮದರಾಸಿಗೆ ಸರಿಯಲ್ಲವೆಂದು ಮದರಾಸಿನ ಮಂತ್ರಿ, ಶ್ರೀ ಅವಿನಾಶ ಲಿಂಗಂ ಹೇಳಿದರು. ಎಳೆಯ ಮಕ್ಕಳಲ್ಲಿ, ವಯಸ್ಸಾದವರಲ್ಲಿ ಅಡ್ಡಿಯಿಲ್ಲ; ೧೫–೧೬ರ ಹರೆಯದ, ಸುಲಭವಾಗಿ ಪ್ರೇರಿಸಲಾಗುವ ಮನಸ್ಸಿನ ಹುಡುಗಿಯರು ಶಿಕ್ಷಕ–ಶಿಕ್ಷಣಕ್ಕೆ ಬರುತ್ತಾರೆ. ಆ ವಯಸ್ಸಿನಲ್ಲಿ ಸಹಶಿಕ್ಷಣ ಸರಿಯಲ್ಲವೆಂದರು. ಗಾಂಧೀಜೀ ಅದಕ್ಕೆ ಒಪ್ಪಲಿಲ್ಲ. 'ಪಾಠಶಾಲೆಗಳಲ್ಲಿ ಸಹಶಿಕ್ಷಣ, ಶಿಕ್ಷಕ-ಶಿಕ್ಷಣ ಶಾಲೆಗಳಲ್ಲಿ ಮಾತ್ರ ಇಲ್ಲ ಎಂದರೆ, ಇದರಲ್ಲೇನೋ ದೋಷವಿದೆ ಎಂದು ಮಕ್ಕಳು ಯೋಚಿಸುತ್ತಾರೆ. ಮಕ್ಕಳು ಈ ಅಪಾಯವನ್ನು ಇದರಿಸಲಿ ಎನ್ನುತ್ತೇನೆ. ಒಂದಲ್ಲ ಒಂದು ದಿನ ಈ 'ಕಾಮಿನೀ ಭಾವನೆ'ಯನ್ನು ನಾವು ಕಳೆದುಕೊಳ್ಳಬೇಕು. ಪಶ್ಚಿಮದಿಂದ ಉದಾಹರಣೆ ಹುಡುಕಿ ತರಬೇಕಾಗಿಲ್ಲ. ಶಿಕ್ಷಕ ಶಾಲೆಗಳಲ್ಲೂ ಅಧ್ಯಾಪಕರು ಬುದ್ಧಿವಂತರೂ ಪರಿಶುದ್ಧರೂ ನಯೀ ತಾಲೀಂ ಸತ್ವಸಂಪನ್ನರೂ ಆದರೆ ಏನೂ ಅಪಾಯವಿಲ್ಲ. ಒಂದೆರಡು ಅಚಾತುರ್ಯಗಳು ನಡೆದರೂ ಅದರಿಂದ ನಾವು ಗಾಬರಿಯಾಗಬಾರದು. ಅಂಥವು ಎಲ್ಲಾದರೂ ಆಗುತ್ತವೆ. ನಾನು ಹೀಗೆ ಧೈರ್ಯವಾಗಿ ಮಾತನಾಡಿದುದರಿಂದ ನನಗೆ ಅಪಾಯಗಳು ಗೊತ್ತಿಲ್ಲವೆಂದು ತಿಳಿಯಬೇಡಿ. ನೀವು ಜವಾಬುದಾರ ಮಂತ್ರಿಗಳು. ವಿಚಾರ ಮಾಡಿ ಕೆಲಸ ಮಾಡಿ.'

## ಖಾದಿ-ಸ್ವಾವಲಂಬನ

ಸ್ವಾವಲಂಬನದ ಬಗ್ಗೆ ಮಾತಾಡುತ್ತ ಮರಗೆಲಸಕ್ಕಿಂತ ನೂಲುಗಾರಿಕೆ ನೇಕಾರಿಕೆ ಕಡಮೆ ಹಣ ಕೊಡುತ್ತವೆ. ಏಳು ವರ್ಷ ಮೂಲ ಶಿಕ್ಷಣ ಪಡೆದ ಮೇಲೂ ವಿದ್ಯಾರ್ಥಿಗಳು ಸ್ವಾವಲಂಬಿಗಳಾಗುವುದು ಸಂದೇಹ. ಚರಖಾ ಸಂಘದ ದರದಂತೆ ದಿನಕ್ಕೆ ೬-೮ ಆಣೆ ಗಳಿಸಬಹುದು ಎಂದರು. ಗಾಂಧೀಜೀ ಹೇಳಿದರು: ಹಣದ ಲೆಕ್ಕ ಹಾಕುವುದು ಬೇಡ. ನಮಗೆಲ್ಲರಿಗೂ ಬಟ್ಟೆ ಬೇಕು. ಆದುದರಿಂದ ಖಾದಿ ನಮ್ಮ ಕಾರ್ಯಕ್ರಮದ ಮಧ್ಯಬಿಂಧು. ಏಳು ಲಕ್ಷ ಹಳ್ಳಿಗಳಿಗೆ ಬಟ್ಟೆ ಬೇಕು. ಇವೊತ್ತು ನೇಕಾರರಿಗೆ ಹೆಚ್ಚು ಹಣ ಕೊಟ್ಟು ನಮ್ಮ ನೂಲನ್ನು ನೇಯಿಸುತ್ತಿದೇವೆ. ನೂಲುವುದನ್ನು ಕಲಿಯಲು ಆಗ್ರಹ ಮಾಡಿದಂತೆ ಪ್ರತಿಯೊಬ್ಬರೂ ನೇಯಿಗೆಯನ್ನೂ ಕಲಿಯಬೇಕೆಂದು ನಾನು ಹಠ ಹಿಡಿಯಬೇಕಾಗಿತ್ತು. ತಪ್ಪಾಯಿತು. ಅದಕ್ಕಾಗಿ ಎಷ್ಟು ಹೊತ್ತನ್ನು ಕೊಡಬಹುದೋ ಅಷ್ಟ

ಕ್ಕಿಂತ ಹೆಚ್ಚು ಕಾಲ ಅದಕ್ಕೆ ಅಗತ್ಯವಾಗದಂತೆ ಮಾಡಬೇಕು. ನಮ್ಮ ವೇಳೆಯೆಲ್ಲ ಅದಕ್ಕೇ ಬೇಕು ಎಂದರೆ ಹೊಸದಾಗಿ ನಾವು ವಿಚಾರ ಮಾಡಬೇಕಾದೀತು.

## ಕೆಲಸದ ಹಿಗ್ಗಿಗಾಗಿ ನೇಯ್ಗೆ

'ನಯೀ ತಾಲೀಂ ಶಿಕ್ಷಕ ಬರೀ ಸಂಬಳಕ್ಕಾಗಿಯೆ ಕೈಗಾರಿಕೆ, ಶಿಕ್ಷಣಗಳನ್ನು ನಡೆಯಿಸಲಾಗದು. ಸಂಬಳ ಎಂಬುದು ಕೆಟ್ಟ ಮಾತು. ಆತ ಕೆಲಸಗಾರ. ಅವನ ಹೆಂಡತಿ ಮಕ್ಕಳು ಕೂಡ ಕೆಲಸಗಾರರೇ. ಹಾಗಾದರೆ ನಿಜವಾದ ಸಹಕಾರ ಹುಟ್ಟೀತು. ಆಗಲೇ ಭಾರತದ ಪ್ರತಿಯೊಂದು ಹಳ್ಳಿಯಲ್ಲೂ ನಯೀ ತಾಲೀಂ ಹರಡೀತು.'

## ಕೃಷಿ-ಮೂಲೋದ್ಯೋಗ

'ಬೇಸಾಯವೇಕೆ ಮೂಲೋದ್ಯೋಗವಾಗಬಾರದು ಎಂದು ಕೆಲವರು ಕೇಳುತ್ತಾರೆ. ಅದರಲ್ಲಿ ನೂಲುಗಾರಿಕೆಯಲ್ಲಿರುವಷ್ಟು ಶಿಕ್ಷಣದ ಅವಕಾಶವಿಲ್ಲ ಎಂಬುದೇ ಅದರ ಉತ್ತರ. ನೂಲುಗಾರಿಕೆಯಲ್ಲಿ ಬರುವಂತೆ ಹಸ್ತಕೌಶಲ ಬರುವುದಿಲ್ಲ ಅದರಲ್ಲಿ. ನಯೀ ತಾಲೀಮಿನ ಕೆಲಸ ಒಂದು ಕೈಗಾರಿಕೆ ಕಲಿಸುವುದಷ್ಟೇ ಅಲ್ಲ, ಅದರ ಮೂಲಕ ಇಡೀ ಮನುಷ್ಯನ ವಿಕಾಸವನ್ನು ಸಾಧಿಸುವುದು.

'ಮೊದಲು ಬೇಸಾಯವನ್ನು ಕಲಿಸದಿದ್ದರೂ ಕಡೆಗಂತೂ ಬಂದೇ ಬರಬೇಕು ನಯೀ ತಾಲೀಮಿನ ಕ್ಷೇತ್ರ ಸರ್ವವ್ಯಾಪಿ. ನನ್ನ ಕಲ್ಪನೆಯ ಶಾಲೆಯಲ್ಲಿ ವಿದ್ಯಾರ್ಥಿಗಳೂ ಶಿಕ್ಷಕರೂ ಕಲೆತು ತಮಗೆ ಬೇಕಾದುದನ್ನೆಲ್ಲ ತಾವೇ ಉತ್ಪತ್ತಿ ಮಾಡಿಕೊಳ್ಳಬೇಕು. ನಯೀ ತಾಲೀಂ ಶಿಕ್ಷಕ ಉತ್ತಮ ಉದ್ಯೋಗಕುಶಲನಾಗಬೇಕು. ಹಳ್ಳಿಯ ಮಕ್ಕಳೆಲ್ಲ ಶಾಲೆಗೆ ಸೆಳೆಯಲ್ಪಟ್ಟಾರು. ಹೀಗೆ ಶಿಕ್ಷಣ ಸಹಜವಾಗಿಯೆ ಉಚಿತವೂ ಸಾರ್ವಜನಿಕವೂ ಆದೀತು.

'ಇವೊತ್ತು ಹಳ್ಳಿಗಳಲ್ಲಿ ಬೆಳೆದ ಕಾಯಿಪಲ್ಯ ಹಳ್ಳಿಯವರ ಪಾಲಿಗೇ ಇಲ್ಲ. ಇದು ಹಳ್ಳಿಗಳ ಸ್ಥಿತಿ. ಇಲ್ಲಿ ಬಿಡುವ ತೆಂಗಿನಕಾಯನ್ನು ಈ ತಿರುವಾಂಕೂರಿನ ಜನ ಬಳಸಲಾರರು. ಅವನ್ನೆಲ್ಲ ಕಲೆಹಾಕಿ ಪಟ್ಟಣಗಳಿಗೆ ಕಳಿಸುತ್ತಾರೆ. ಮೂಲಶಿಕ್ಷಣ ಶಾಲೆಗಳು ತಲೆಯೆತ್ತಿದರೆ ಈ ವಿಚಿತ್ರವೆಲ್ಲ ಮಾಯವಾದೀತು. ಇವೊತ್ತು ಅಫೀಮು ತಂಬಾಕು ಹತ್ತಿ ಮುಂತಾದ ಹಣದ ಬೆಳೆಗಳನ್ನು ಬೆಳೆಯುತ್ತಿದೇವೆ. ನಯೀ ತಾಲೀಂ ತರಬೇತು ಪಡೆದವರು ಆಹಾರದ ಬೆಳೆಗಳನ್ನು ಬೆಳೆದಾರು.'[೫೯]

## ಅಧ್ಯಾಯ ೬

# ಭಾಷೆಯ ಪ್ರಶ್ನೆ

### ಶಿಕ್ಷಣ ಮಾಧ್ಯಮ

ನಮ್ಮ ಭಾಷೆ ನಮ್ಮದೇ ಪ್ರತಿಬಿಂಬ. ವಿಚಾರ ಪ್ರಕಟನೆಗೆ ನಮ್ಮ ಭಾಷೆಗಳು ತೀರಾ ಅಶಕ್ತ ಎಂದರೆ ಆದಷ್ಟು ಬೇಗ ನಾವು ನಿರ್ನಾಮವಾಗುವುದೇ ಮೇಲು. ಇಂಗ್ಲೀಷು ನಮ್ಮ ರಾಷ್ಟ್ರ ಭಾಷೆಯಾದೀತೆಂದು ಕನಸು ಕಾಣಬಲ್ಲವರೂ ಉಂಟೆ? (ಎಂದಿಗೂ ಇಲ್ಲ ಎಂಬ ಕೂಗು) ಈ ಭಾರವೇಕೆ ರಾಷ್ಟ್ರಕ್ಕೆ? ಕಳೆದ ಐವತ್ತು ವರ್ಷ ನಮ್ಮ ದೇಶಭಾಷೆಗಳಲ್ಲೇ ಶಿಕ್ಷಣ ದೊರೆತಿದ್ದರೆ ಈ ವೇಳೆಗೆ ಹಿಂದುಸ್ಥಾನ ಸ್ವತಂತ್ರವಾಗುತ್ತಿತ್ತು. ನಮ್ಮ ವಿದ್ಯಾವಂತರು ತಮ್ಮ ಜನರ ನಡುವೆಯ ಪರದೇಶಿಗಳಾಗಿ ಇರುತ್ತಿರಲಿಲ್ಲ. ರಾಷ್ಟ್ರಹೃದಯವನ್ನು ಅರಿಯುತ್ತಿದ್ದರು. ಇವತ್ತು ನಮ್ಮ ಉತ್ತಮ ವಿಚಾರ ಹೆಂಡತಿಗೂ ತಿಳಿಯದು, ಬೋಸ್, ರಾಯ್ ಮಾಡಿದ ಸಂಶೋಧನೆಗಳನ್ನು ನೋಡಿ. ಅವು ಸಾಮಾನ್ಯಜನತೆಯ ಪಾಲಿಗೆ ಇಲ್ಲ ಎಂದರೆ ಎಂಥ ನಾಚಿಕೆಗೇಡು?೬೦

ಪರಭಾಷೆಯ ಮಾಧ್ಯಮ ಬುದ್ಧಿಗೆ ಆಯಾಸ ಮಕ್ಕಳ ಶಕ್ತಿಗೆ ಒಂದು ಭಾರ; ಅದರಿಂದ ಅವರು ಬರೀ ಗಿಳಿಪಂಡಿತರೂ ಅನುಕರಣಶೀಲರೂ ಆಗಿದಾರೆ. ಸ್ವತಂತ್ರ ವಿಚಾರ ಕೃತಿಗಳಿಗೆ ಅಸಮರ್ಥರಾಗಿದಾರೆ. ತಮ್ಮ ವಿದ್ಯೆಯನ್ನು ಜನತೆಗೆ ನೀಡಲು ಅವರಿಗೆ ಸಾಧ್ಯವಿಲ್ಲ. ನನಗೇ ನಿರಂಕುಶಾಧಿಕಾರವಿದ್ದಿದ್ದರೆ ಇವತ್ತೇ ಈ ಪರಭಾಷಾ ಮಾಧ್ಯಮದ ಶಿಕ್ಷಣವನ್ನು ನಿಲ್ಲಿಸಿಬಿಡುತ್ತಿದ್ದೆ. ಪಠ್ಯ ಪುಸ್ತಕಗಳಿಗಾಗಿ ನಾನು ಕಾಯುವುದಿಲ್ಲ. ಪರಿವರ್ತನೆಯಾದರೆ ಅವು ತಾನೇ ಬರುತ್ತವೆ. ಕೂಡಲೆ ಪರಿಗಣಿಸಬೇಕಾದ ರೋಗ ಇದು.೬೧

ಪರದೇಶೀ ಪ್ರಭುತ್ವದ ಅನೇಕ ದೋಷಗಳಲ್ಲಿ ಪರಭಾಷಾ ಶಿಕ್ಷಣದ ಈ ದುರ್ಭರ ಆಘಾತ ಬಹಳ ಹೆಚ್ಚಾದ ದೋಷವೆಂದು ಇತಿಹಾಸ ಹೇಳೀತು, ರಾಷ್ಟ್ರ ನಿರ್ವೀರ್ಯವಾಗಿದೆ ಅದರಿಂದ, ವಿದ್ಯಾರ್ಥಿಗಳ ಆಯುಸ್ಸು ಕ್ಷೀಣವಾಗಿದೆ, ಜನತೆಯಿಂದ ಅವರನ್ನು ಸಿಡಿಸಿದೆ, ಶಿಕ್ಷಣ ಅನಾವಶ್ಯಕವಾಗಿ ದುಬಾರಿಯಾಗಿದೆ, ಹೀಗೆ

ನಡೆದರೆ ರಾಷ್ಟ್ರದ ಆತ್ಮ ಘಾತವಾದೀತು. ಭಾರತದ ವಿದ್ಯಾವಂತರು ಬೇಗ ಈ ಪರಭಾಷಾ ಮಾಧ್ಯಮದ ಮೋಹವನ್ನು ತೊಲಗಿಸಿದರೆ ಅಷ್ಟು ಅವರಿಗೂ ಒಳ್ಳೆಯದು, ದೇಶಕ್ಕೂ ಒಳ್ಳೆಯದು.[೬೨]

ಶಿಕ್ಷಣ ಮಾಧ್ಯಮವನ್ನು ಈ ಕ್ಷಣವೇ ಬದಲಾಯಿಸಬೇಕು, ದೇಶಭಾಷೆಗಳಿಗೆ ಸರಿಯಾದ ಸ್ಥಾನ ಕೊಡಬೇಕು, ದಿನದಿನವೂ ಹೆಚ್ಚುತ್ತಿರುವ ಅನರ್ಥಕ್ಕಿಂತ ಅಕ್ಷಮ್ಯ ನಿರರ್ಥಕತೆ ನಿಲ್ಲಲಿ, ಉನ್ನತ ವಿದ್ಯೆ ಸ್ವಲ್ಪ ಕಾಲ ಗೊಂದಲಗೆಟ್ಟರೂ ಚಿಂತೆಯಿಲ್ಲ.

ಪ್ರಾಂತಭಾಷೆಗಳ ಬೆಲೆ ಹೆಚ್ಚಿಸಲು, ಅವಕ್ಕೆ ಸ್ಥಾನಕೊಡಲು ಅವನ್ನು ಆಡಳಿತ– ನ್ಯಾಯಾಲಯಗಳ ಭಾಷೆಯಾಗಿ ಮಾಡಬಯಸುತ್ತೇನೆ. ಶಾಸನ ಸಭೆಗಳ ಕಾರ್ಯಕಲಾಪ ಆಯಾ ದೇಶಭಾಷೆಯಲ್ಲಿ, ಒಂದಲ್ಲ ಹಲವು ಭಾಷೆ ಒಂದು ಪ್ರಾಂತದಲ್ಲಿದ್ದರೆ ಆ ಭಾಷೆಗಳಲ್ಲಿ ನಡೆಯಬೇಕು, ಒಂದು ತಿಂಗಳು ಕಷ್ಟಪಟ್ಟರೆ ತಮ್ಮ ಪ್ರಾಂತದ ಇತರ ಭಾಷೆಗಳನ್ನು ಕಲಿಯಬಹುದು ಶಾಸನಸಭಾ ಸದಸ್ಯರು.

ಈ ಪ್ರಶ್ನೆಯನ್ನು ತೀರ್ಮಾನಿಸಬೇಕಾದವರು ಪಂಡಿತರಲ್ಲ. ನಮ್ಮ ಹುಡುಗರಿಗೆ ಎಲ್ಲಿ ಯಾವ ಮಾಧ್ಯಮ ಬೇಕೆಂಬುದನ್ನು ಅವರು ನಿರ್ಧರಿಸಲಾರರು. ಯಾವ ವಿಷಯಗಳನ್ನು ಕಲಿಸಬೇಕೆಂಬುದನ್ನೂ ಅವರು ನಿಶ್ಚಯಿಸಲಾರರು, ದೇಶಕ್ಕೆ ಏನು ಬೇಕೋ ಅದನ್ನು ಕಲಿಸಬೇಕು. ವಿದ್ಯಾವಂತ ವರ್ಗ ಈ ಸಮಸ್ಯೆಯ ಬಗ್ಗೆ ಚೆಲ್ಲಾಟ ಆಡುತ್ತಿರುವವರೆಗೆ ನಮ್ಮ ಕನಸಿನ ಸ್ವತಂತ್ರ ಆರೋಗ್ಯವಂತ ಭಾರತದ ನಿರ್ಮಾಣ ಆಗಲಾರದು.[೬೩]

ಮಾಧ್ಯಮವನ್ನು ಕ್ರಮೇಣ ಬದಲಾಯಿಸಬಾರದು, ಒಮ್ಮೆಲೇ ಬದಲಾಯಿಸಬೇಕು. ಆಗ ಪಠ್ಯಪುಸ್ತಕಗಳು ಉಪಾಧ್ಯಾಯರು ನಂಬಲೂ ಆದಷ್ಟು ಸ್ವಲ್ಪ ಸಮಯದಲ್ಲಿ ನಮಗೆ ಲಭಿಸಬಹುದು. ಒಮ್ಮೆಲೇ ಕೋರ್ಟು ಕಛೇರಿಗಳಲ್ಲಿ ದೇಶಭಾಷೆಗಳನ್ನು ರೂಢಿಗೆ ತರಬೇಕು—ಅದೇ ಸೂತ್ರ. ಈ ಸುಧಾರಣೆಯಲ್ಲಿ ನಮಗೆ ಸಂಕಲ್ಪವಿದ್ದರೆ ಇದನ್ನು ಒಂದು ಗಳಿಗೆಯಲ್ಲಿ ಮಾಡಿಬಿಡಬಹುದು.[೬೪]

ನನ್ನ ತಾಯಿಯ ಸ್ತನ್ಯ ಸಾರವೆ ನನಗೆ ಆಧಾರವಿದ್ದ ಹಾಗೆ ನನ್ನ ತಾಯಿನುಡಿಯೇ ನನಗೆ ಶರಣ್ಯ. ಅದರಲ್ಲಿ ಎಷ್ಟೇ ಲೋಪಗಳಿದ್ದರೂ ಕೂಡ, ಅದೇ ನನಗೆ ಜೀವನದಾಯಿ ಅಮೃತವನ್ನು ನೀಡಬಲ್ಲದ್ದು.[೬೫]

ಇಂಗ್ಲೀಷು ಅಂತರ ರಾಷ್ಟ್ರೀಯ ವ್ಯಾಪಾರದ ಭಾಷೆ, ರಾಜಕೀಯ ಸಂಧಾನ

ವ್ಯವಹಾರದ ಭಾಷೆ. ಅದರಲ್ಲಿ ಅಪಾರ ಸಾಹಿತ್ಯವಿದೆ. ಪಶ್ಚಿಮದ ವಿಚಾರ–ಸಂಸ್ಕೃತಿಗಳಿಗೆ ಅದು ಬಾಗಿಲು, ನಮಗೆ ಕೆಲವರಿಗೆ ಇಂಗ್ಲೀಷಿನ ಜ್ಞಾನ ಅತ್ಯಗತ್ಯ. ಇವತ್ತು ಇಂಗ್ಲೀಷು ನಮ್ಮ ಮಾತೃಭಾಷೆಯನ್ನು ಸಿಂಹಾಸನದಿಂದ ತಳ್ಳಿ, ಇಂಗ್ಲೀಷರ ಜ್ಞಾನವಿಲ್ಲದೆಯೆ ಭಾರತೀಯ ಮನಸ್ಸು ಅತ್ಯುತ್ತಮ ವಿಕಾಸವನ್ನು ಪಡೆಯುವಂತಿರಬೇಕು. ಇಂಗ್ಲೀಷು ಗೊತ್ತಿಲ್ಲದಿದ್ದರೆ ಉತ್ತಮರ ಸಹವಾಸ ಸೌಲಭ್ಯ, ಉನ್ನತ ಸಮಾಜದಲ್ಲಿ ಪ್ರವೇಶವಿಲ್ಲ ಎಂದರೆ ನಮ್ಮ ಪುರುಷತ್ವಕ್ಕೇ ನಮ್ಮ ಸ್ತ್ರೀತ್ವಕ್ಕೇ ಅಪಮಾನ. ನಮ್ಮ ಹುಡುಗರಿಗೆ ಆ ಅಭಿಪ್ರಾಯ ಬರುವಂತೆ ಮಾಡಬಾರದು, ಈ ವಿಚಾರವೇ ಅತ್ಯಂತ ಅಪಮಾನಕರ, ಸಹಿಸಲಾರದಷ್ಟು ದುರ್ಭರ, ಇಂಗ್ಲೀಷಿನ ವ್ಯಾಮೋಹವನ್ನು ನೀಗುವುದೂ ಸ್ವರಾಜ್ಯದ ಒಂದು ಮುಖ್ಯಲಕ್ಷಣ.೬೩

ಇಂಗ್ಲೀಷು ಹಿಂದೀಗಳ ಈ ವಿರೋಧ ಎಂದಿಗೂ ಇದ್ದದ್ದೇ. ಇಂಗ್ಲೀಷನ್ನು ಕಲಿಯಿರಿ, ಬೇಡವೆನ್ನುವುದಿಲ್ಲ. ಆದರೆ ನನಗೆ ತಿಳಿದಮಟ್ಟಿಗೆ, ಇಂಗ್ಲೀಷು ನಮ್ಮ ಕೋಟ್ಯಂತರ ಮನೆಗಳ ಮಾತು ಆಗಲಾರದು. ಸಾವಿರಾರು ಜನರಿಗೆ ಮಾತ್ರ ಅದು ಬಂದೀತು, ಜನಸಮೂಹದವರೆಗೆ ಅದು ಹೋಗಲೇ ಆರದು.೬೭

ರಷ್ಯಾ ತನ್ನ ವೈಜ್ಞಾನಿಕ ಪ್ರಗತಿಯನ್ನು ಇಂಗ್ಲೀಷನ್ನು ಬಿಟ್ಟೇ ಸಾಧಿಸಿದೆ. ಇಂಗ್ಲೀಷಿಲ್ಲದೆ ಸಾಧ್ಯವಿಲ್ಲ ಎನಿಸುವುದು, ನಮ್ಮ ಮಾನಸಿಕ ದಾಸ್ಯದಿಂದ. ಈ ಪರಾಭವದ ಸಿದ್ಧಾಂತವನ್ನು ನಾನು ಎಂದಿಗೂ ಒಪ್ಪಲಾರೆ.೬೮

# ಅಧ್ಯಾಯ–೭

# ಶಿಕ್ಷಕರು

## ೧

## ಒಂದು ಬಿನ್ನಹ

ನಾನು ಪ್ರತಿಪಾದಿಸುತ್ತಿದ್ದ ಪ್ರಾಥಮಿಕ ಶಿಕ್ಷಣ ಪದ್ಧತಿಯಲ್ಲಿ ಬಹು ಮಟ್ಟಿಗೆ ನಂಬಿಕೆಯಿರುವ ಶಿಕ್ಷಕರು ಅನೇಕರಿದಾರೆ ; ನಾ ಬಲ್ಲೆ. ಅಂಥವರು ಕೆಲವರು ಯಾವುದೋ ಒಂದು ಕೈಗಾರಿಕೆಯ ಮೂಲಕ ಶಿಕ್ಷಣ ಕೊಡುವ ಪ್ರಯೋಗ ಮಾಡುತ್ತಿದಾರೆ ; ಇದನ್ನೂ ಬಲ್ಲೆ. ಈ ಮನೋಧರ್ಮ ಇನ್ನೂ ಕೆಲವರಿಗಿದೆ. ಆದರೆ ಪರಿಸ್ಥಿತಿ ಅವರನ್ನು ಶಿಕ್ಷಕ ವೃತ್ತಿಯಿಂದ ದೂರ ಸೆಳೆದೊಯ್ದಿದೆ. ನಾನು ಚಿತ್ರಿಸಿದ ಯೋಜನೆಯನ್ನು ಕಾಂಗ್ರೆಸ್ ಮಂತ್ರಿಮಂಡಲಗಳೀಗ ಒಪ್ಪುವಂತಿದೆ. ಆದುದರಿಂದ ಈ ಪ್ರಯೋಗಕ್ಕೆ ಯಾರು ಯಾರು ತಮ್ಮ ಸೇವೆ ಸಲ್ಲಿಸುತ್ತಾರೋ ಅವರ ಪಟ್ಟಿಯೊಂದು ಆಗಬೇಕಾಗಿದೆ. ಅಂಥ ಗೆಳೆಯರು ತಮ್ಮ ಹೆಸರು, ಪದವಿ, ಬಯಸುವ ಸಂಬಳ, ಉಳಿದ ಕರಾರು ಇದ್ದರೆ ಇವನ್ನು ನನಗೆ ಬರೆದು ಕಳಿಸುವರೆ ?[೬೯]

## ೨

## ಪ್ರಾಥಮಿಕ ಶಿಕ್ಷಕತನ ಬಯಸಿದವರಿಗೆ

ನಾನು ಪ್ರತಿಪಾದಿಸುತ್ತಿರುವ ಪ್ರಾಥಮಿಕ ಶಿಕ್ಷಣ ಯೋಜನೆಯನ್ನು ಒಪ್ಪಿ, ಅದಕ್ಕಾಗಿ ದುಡಿಯಲು ಸಿದ್ಧರಾದ ಶಿಕ್ಷಕರು ಬೇಕೆಂದು ನಾ ಮಾಡಿದ ಬಿನ್ನಹಕ್ಕೆ ಉತ್ತರವಾಗಿ ದಿನವೂ ಪತ್ರಗಳು ಬರುತ್ತಿವೆ. ಬಹಳ ಸಂತೋಷ. ಲಾಭಕರವಾದ ಒಂದು ಕೈಗೆಲಸದ ಮೂಲಕ ಕೊಡುವ ಶಿಕ್ಷಣದಲ್ಲಿ ಪೂರ್ಣ ನಂಬಿಕೆ ಬೇಕು ; ಬರೀ ಜೀವನವೇತನ ಪಡೆದು ಸಂತೋಷಕ್ಕಾಗಿ, ಈ ಯೋಜನೆಯ ಪ್ರೀತಿಗಾಗಿ ದುಡಿಯುವವರು ಬೇಕು ; ಇಲ್ಲದವರು ಬೇಡ. ಅಂಥವರಿಗೆಲ್ಲ ನನ್ನದೊಂದು ಸೂಚನೆ-ನೂಲುವುದರಲ್ಲೂ ಅದಕ್ಕೆ ಪೂರ್ವಭಾವಿಯಾದ

ಎಲ್ಲಾ ಕ್ರಿಯೆಗಳಲ್ಲೂ ಅವರು ನಿಪುಣರಾಗಲಿ. ನಾನು ಹೆಸರುಗಳನ್ನು ಪಟ್ಟಿ ಮಾಡುತ್ತಿದೇನೆ. ಯೋಜನೆ ಕಾರ್ಯಗತವಾಗಲು ಏನು ನಡೆಯುತ್ತಿದೆಯೋ ಅವರಿಗೆ ತಿಳಿಸಲಾಗುತ್ತದೆ. ಏಳು ಪ್ರಾಂತೀಯ ಸರಕಾರಗಳು ಈ ಯೋಜನೆಯನ್ನು ಒಪ್ಪಿ ಪ್ರಯೋಗ ಮಾಡಲು ಬಯಸಿದರೆ, ಆ ಸಮಯಕ್ಕೆ ಅವರಿಗೆ ಬೇಕಾಗುವುದನ್ನು ಮೊದಲೇ ಆಲೋಚಿಸಿ ಸಿದ್ಧಮಾಡಿಕೊಳ್ಳುವ ಪ್ರಯತ್ನ ನನ್ನ ಈ ಬಿನ್ನಹ.೭೦

## ೩

## ಮೂಲಶಿಕ್ಷಣ ಪದ್ಧತಿಯ ಶಿಕ್ಷಕರಿಗೆ

ನಿಮ್ಮ ಪ್ರತಿಜ್ಞೆ ಬೆಚ್ಚಿಸುತ್ತಿದೆ. ೫ ಸಾವಿರ ಅರ್ಜಿ ಬಂದಿದೆಯೆಂದರೆ ಅದು ದೇಶಾಭಿಮಾನದ ಗುರುತಲ್ಲ. ಅಗಿದ್ದರೆ ಚೆನ್ನಾಗಿತ್ತು. ವಿದ್ಯಾವಂತರ, ಅರೆ ವಿದ್ಯಾವಂತರ ನಿರುದ್ಯೋಗದ ಸಾಕ್ಷಿ ಇದು. ಸರಕಾರಿ ಚಾಕರಿಯ ಆಕರ್ಷಣೆಗೂ ಇದು ಗುರುತು. ಜನರು ಪೋಲೀಸು ಆಳಿನ ಕೆಲಸಕ್ಕೆ, ಶಿಕ್ಷಕ ವೃತ್ತಿಗೆ ನ್ಯಾಯವಾಗಿ ಬರುವ ಸಂಬಳದ ಜೊತೆಗೆ ಏನಾದರೂ ಅನ್ಯಾಯದ ಮೇಲ್ಸಂಪಾದನೆ ಸಿಕ್ಕೀತು ಎಂಬ ಆಸೆಯಿಂದ ಅರ್ಜಿ ಹಾಕುತ್ತಾರೆ; ಬಲ್ಲೆ. ನಿಮ್ಮಲ್ಲಿ ಯಾರಿಗೂ ಆ ಆಸೆ ಇಲ್ಲವೆಂದುಕೊಳ್ಳಲೆ? ನನಗೆ ಇಷ್ಟು ದೇಶಭಕ್ತಿಯಿದ್ದರೂ ತಿಂಗಳಿಗೆ ೧೫ ರೂ. ಸಂಬಳಕ್ಕೆ ಒಪ್ಪಿಕೊಳ್ಳಬಲ್ಲೆನೋ ಇಲ್ಲವೋ. ಶಾಲೆಗಳಲ್ಲಿ ಸ್ವಲ್ಪ ಲಾಭ ಬರುತ್ತದೆ, ನಮ್ಮೊಳಗೆ ಹಂಚಿಕೊಳ್ಳಬಹುದು ಎಂಬ ವಿಚಾರವಿದ್ದರೆ ಬಿಟ್ಟುಬಿಡಿ. ಆದುದರಿಂದ ಯಾರಿಗಾದರೂ ಈ ಕರಾರನ್ನೇಕೆ ಮಾಡಿಕೊಂಡೆ ಅನಿಸಿದರೆ, ಬಿಡುಗಡೆ ಮಾಡಲು ಮಂತ್ರಿಗಳನ್ನು ಕೇಳಿ. ನಾನು ನಿಮ್ಮ ಪರವಾಗಿ ಹೇಳುತ್ತೇನೆ. ಇಷ್ಟು ಹೇಳಿ, ಕರಾರಿಗೆ ಬದ್ಧರಾಗಿ ನಿಂತವರಿಗೆ ಅಭಿನಂದನೆ ಅರ್ಪಿಸುತ್ತೇನೆ. ನಿಮ್ಮ ಪ್ರತಿಜ್ಞೆಯಂತೆ ನಡೆಯಲು ದೇವರು ನಿಮಗೆ ಬಲ ಕೊಡಲಿ.

ಈ ಯೋಜನೆ ಕಾಂಗ್ರೆಸ್ ಕಾರ್ಯಪ್ರಣಾಳಿಯ ಪ್ರಕಾರ ರಚಿತವಾಗಿದೆ. ಕಾಂಗ್ರೆಸ್ಸು ಅಹಿಂಸೆ– ಸತ್ಯಗಳಿಂದ ಸ್ವರಾಜ್ಯವನ್ನು ಸಾಧಿಸುವ ಶಪಥಮಾಡಿದೆ. ಆ ಮೂಲ ಸದ್ಗುಣಗಳ ಅಭ್ಯಾಸವೇ ಈ ಯೋಜನೆಯ ತಳಹದಿ. ಈ ಗುಣಗಳನ್ನು ನೀವು ನಿಮ್ಮ ದಿನಚರಿಯ ಸಂಪರ್ಕದಲ್ಲಿ ವಿದ್ಯಾರ್ಥಿಗಳಿಗೆ ತೋರದಿದ್ದರೆ ಅದಕ್ಕೆ ತಕ್ಕ ಚಾರಿತ್ರ್ಯ ಗಳಿಸದಿದ್ದರೆ, ನೀವೂ ಸೋತಿರಿ, ನಿಮ್ಮ ಶಾಲೆಯೂ

ವಿಫಲವಾಯಿತು. ಜರ್ಮನಿಯಲ್ಲಿ ಹಿಟ್ಲರ್ ಏನು ಮಾಡುತ್ತಿದಾನೆ ಗೊತ್ತೆ? ಅವನಿಗೆ ಹಿಂಸೆಯಲ್ಲಿ ಶ್ರದ್ಧೆ. ಅದನ್ನು ಅವನು ಮರೆಮಾಚಿಲ್ಲ. ಮೊನ್ನೆ ಕತ್ತಿಯೇ ನಮ್ಮ ಜೀವ, ನಮ್ಮ ಆತ್ಮ ಎಂದ. ಅಲ್ಲಿ ಮೊದಲಿನಿಂದಲೂ ಹುಡುಗರಿಗೆ ಹಿಂಸೆಯನ್ನೇ ಕಲಿಸುತ್ತಾರೆ. ಅಂಕಗಣಿತದಲ್ಲೂ ಶತ್ರುಗಳ ದ್ವೇಷವನ್ನು ಕಲಿಸುತ್ತಾರೆ. ಅವರು ಕೊಡುವ ಉದಾಹರಣೆಗಳೆಲ್ಲ ಸೈನಿಕ ವೃತ್ತಿಯನ್ನು ಪ್ರೇರಿಸುವಂಥವು. ಅವರ ಧೋರಣೆಯನ್ನೊಪ್ಪಿದರೆ ನಾವೂ ಚಿಕ್ಕಂದಿನಿಂದಲೇ ಹಿಂಸೆಯನ್ನು ಕಲಿಸುವುದು ಅಗತ್ಯವೆಂಬುದನ್ನು ಅರಿಯಬೇಕು. ಇಟಲಿಯಲ್ಲೂ ಹಾಗೇ. ಅವರು ಹೇಗೆ ಪ್ರಾಮಾಣಿಕರೋ ನಾವೂ ಹಾಗೇ ಪ್ರಾಮಾಣಿಕರಾಗಬೇಕು. ಈ ಯೋಜನೆಯನ್ನು ಎಲ್ಲಾ ಬಗೆಯಲ್ಲೂ ನಡೆಸಿದರೆ, 'ಇದು ಹಿಂದೂಸ್ಥಾನದಲ್ಲೆಲ್ಲಾ ಜನಪ್ರಿಯವಾದರೆ, ಸದ್ದಿಲ್ಲದೆ ಒಂದು ಕ್ರಾಂತಿ ನಡೆಯುತ್ತದೆ; ಸ್ವರಾಜ್ಯ ಖಂಡಿತ ಸಿಗುತ್ತದೆ. ನನಗೆ ಸಂದೇಹವಿಲ್ಲ.೭೧

## ೪

## ಅಹಿಂಸೆಯೆ ಆಧಾರ

ಹೊಸದಾಗಿ ರಚಿಸಿದ ರಾಷ್ಟ್ರೀಯ ಶಿಕ್ಷಣ ಸಮಿತಿಯ ಸಭೆಯಲ್ಲಿ ಗಾಂಧೀಜೀ ಹೊಸ ಶಿಕ್ಷಣದ ಗುರಿ, ಒಳ ಅರ್ಥಗಳನ್ನು ತಿಳಿಸಿದರು. ಇಲ್ಲಿಯೂ ಅವರ ಆಶಾಭಂಗದ ಭಾವ ಕಾಣುತ್ತಿತ್ತು. ಕಡೆಗೆ ಹೇಳಿದರು: 'ಹೊಸ ಶಿಕ್ಷಣದ ಯೋಜನೆಯನ್ನು ಪ್ರಾರಂಭಿಸಿದಾಗ ನನಗೆ ಪೂರ್ಣ ಆತ್ಮವಿಶ್ವಾಸವಿತ್ತು. ಈಗ ಇಲ್ಲ ಎನಿಸುತ್ತದೆ. ಈಗ ನನ್ನ ಮಾತಿನಲ್ಲಿ ಶಕ್ತಿಯಿಲ್ಲ, ಆಗ ಒಂದು ಶಕ್ತಿಯಿತ್ತು ಈ ವಿಶ್ವಾಸಲೋಪಕ್ಕೆ ಕಾರಣ ಹೊರಗಿನದು ಯಾವುದೂ ಅಲ್ಲ, ಒಳಗಿನದೇ ಕಾರಣ. ನನ್ನ ಇಂದ್ರಿಯಗಳಿಗೇನು ಪಾರ್ಶ್ವವಾಯು ಬಡಿದಿಲ್ಲ. ನನ್ನ ವಯಸ್ಸಿಗೆ ನನ್ನ ಬುದ್ಧಿ ಹೆಚ್ಚಾಗಿಯೇ ಕೆಲಸಮಾಡುತ್ತಿದೆ. ಅಹಿಂಸೆಯಲ್ಲಿ ನನ್ನ ಶ್ರದ್ಧೆಯೂ ತಗ್ಗಿಲ್ಲ. ಆ ಶ್ರದ್ಧೆ ಮೊದಲಿಗಿಂತ ಹೆಚ್ಚು ಬೆಳಗುತ್ತಿದೆ. ಆದುದರಿಂದ ನಾನು ಹೇಳಿದುದನ್ನು ಬರಿದೇ ಒಪ್ಪಿಕೊಳ್ಳಬೇಡಿ. ನಿಮಗೆ ಹಿಡಿಸಿದುದನ್ನು ಮಾತ್ರ ಒಪ್ಪಿಕೊಳ್ಳಿ. ಸರಿಯಾದ ರೀತಿಯಲ್ಲಿ ಎರಡೇ ಶಾಲೆಗಳನ್ನು ನಡೆಸಿದರೂ ನಾನು ಸಂತೋಷದಿಂದ ಕುಣಿದೇನು.'

ಸಂವಾದದಲ್ಲಿ ಮೊದಲೇ ಸರಿಯಾದ ದಾರಿಯೆಂಥದ್ದೋ ಹೇಳಿದರು: 'ಇದು ಸ್ವಾತಂತ್ರ್ಯಸಾಧನ ಶಿಕ್ಷಣಶಾಲೆಯಾಗಬೇಕು. ನಮ್ಮ ಸಕಲ ಸಂಕಟ

ಗಳ, ಅದರಲ್ಲಿ ಮುಖ್ಯವಾಗಿ ಮತಾಂಧತೆಯ ಸಂಕಟವನ್ನು ಪರಿಹರಿಸುವ ಶಿಕ್ಷಣ ಶಾಲೆಯಾಗಬೇಕು. ಇದಕ್ಕಾಗಿ ನಾವು ಅಹಿಂಸೆಯನ್ನೇ ಅನುಸರಿಸಬೇಕು. ಹಿಟ್ಲರ್ ಮುಸಲೋನಿಗಳ ಶಾಲೆಗಳಿಗೆ ಹಿಂಸೆಯೇ ತಳಹದಿ. ಕಾಂಗ್ರೆಸ್ಸಿನ ಪ್ರಕಾರ ನಮ್ಮ ಆಧಾರ ಅಹಿಂಸೆ. ಅಂತೇ ನಮ್ಮ ಸಮಸ್ಯೆಗಳನ್ನೆಲ್ಲಾ ಅಹಿಂಸೆಯಿಂದಲೇ ಪರಿಹರಿಸಬೇಕು. ನಮ್ಮ ಗಣಿತ, ನಮ್ಮ ವಿಜ್ಞಾನ, ನಮ್ಮ ಇತಿಹಾಸವೆಲ್ಲವೂ ಅಹಿಂಸಾತ್ಮಕವಾಗಬೇಕು. ಈ ವಿಷಯಗಳಲ್ಲಿ ಉದಾಹರಣೆಗಳೆಲ್ಲವೂ ಅಹಿಂಸಾತ್ಮಕವೇ. ಜಾಮಿಯಾ ಮಿಲಿಯಾ ಇಸ್ಲಾಮಿಯಾದಲ್ಲಿ ಶ್ರೀಮತಿ ಹಾಲಿದಾ ಅದೀಬ್ ಹಾನೂಂ ತುರ್ಕಿಸ್ತಾನದ ಬಗ್ಗೆ ಭಾಷಣಮಾಡಿದಾಗ, ಇಲ್ಲಿಯ ವರೆಗೆ ಇತಿಹಾಸ ರಾಜರ ವಂಶಾವಳಿ, ಅವರ ಯುದ್ಧಗಳ ಕತೆಯಾಗಿತ್ತು ಇನ್ನು ಮಾನವನ ಇತಿಹಾಸವಾಗುತ್ತದೆ ಎಂದು ನಾನು ಹೇಳಿದೆ. ಆ ಇತಿಹಾಸ ಕೇವಲ ಅಹಿಂಸಾತ್ಮಕವಾದೀತು. ಆಗ ನಾವು ಪಟ್ಟಣಗಳ ಗಿರಣಿಗಳನ್ನು ಬಿಟ್ಟು ಗ್ರಾಮೋದ್ಯೋಗಗಳ ಕಡೆ ಗಮನಕೊಡಬೇಕಾದೀತು. ನಮ್ಮ ಏಳು ಲಕ್ಷ ಹಳ್ಳಿಗಳೂ ಬದುಕಬೇಕು. ಕೆಲವು ಮಾತ್ರ ಅಲ್ಲ. ಎಂದರೆ ಹಳ್ಳಿಗಳ ಕೈಗಾರಿಕೆಗಳನ್ನು ಪುನಃ ಚೇತನಗೊಳಿಸಬೇಕು. ಆ ಕೈಗಾರಿಕೆಗಳ ಮೂಲಕ ಶಾಲಾ ಶಿಕ್ಷಣವನ್ನೂ ಕೊಡಲು ಸಾಧ್ಯವಾದರೆ ಒಂದು ಕ್ರಾಂತಿಯನ್ನೇ ಮಾಡಬಹುದು ; ಖಂಡಿತ. ನಮ್ಮ ಪಠ್ಯಪುಸ್ತಕಗಳನ್ನೂ ಅದೇ ಉದ್ದೇಶಸಾಧನೆಗಾಗಿ ಬರೆಯಬೇಕು.

ನಾನು ಹೇಳುವುದನ್ನು ಮನಗೊಟ್ಟು ಕೇಳಿ, ನಿಮಗೆ ರುಚಿಸದಿದ್ದುದನ್ನು ಬಿಡಿ. ನಾನು ಹೇಳಿದುದು ನಮ್ಮ ಮುಸಲ್ಮಾನ ಸೋದರರಿಗೆ ಹಿಡಿಸದಿದ್ದರೆ ಅವರು ಅದನ್ನು ಪೂರಾ ತಿರಸ್ಕರಿಸಬಹುದು. ನನಗೆ ಬೇಕಾದ ಅಹಿಂಸೆ ಬ್ರಿಟಿಷರೊಡನೆ ಯುದ್ಧ ಮಾಡಲು ಮಾತ್ರವಲ್ಲ, ನಮ್ಮ ಎಲ್ಲಾ ಅಂತರಿಕ ಸಮಸ್ಯೆ-ವ್ಯವಹಾರಗಳಿಗೂ ಉಪಯುಕ್ತಬಾಗಬೇಕು. ಅವರಿಂದ ಹಿಂದೂ ಮುಸ್ಲಿಂ ಒಗ್ಗಟ್ಟು ಚಿಗರೀತು. ಹಿಟ್ಲರ್ ಮುಸಲೋನಿಗಳು ಅಂಜಿಕೆಯಿಂದ ಮಾಡಿಕೊಂಡ ಒಪ್ಪಂದದಂತಲ್ಲ. ತೇಜೋವಂತ ಏಕತೆ.'೬೨

## ೫

## ಮೂಲಶಿಕ್ಷಣದ ಅಧ್ಯಾಪಕರು

ವಿಶ್ವವಿದ್ಯಾನಿಲಯದ ಶಿಕ್ಷಣ ಕಾರ್ಯವನ್ನು ಕೈಬಿಟ್ಟು ರೈತರ ಶಿಕ್ಷಣವನ್ನು ಕೈಗೊಂಡಿದ್ದೇನೆ. ಮೂಲಶಿಕ್ಷಣ ಯೋಜನೆಯಲ್ಲಿ ಗಾಢ ಆಸಕ್ತಿ ನನಗೆ. ಅದರ ನಿಜವಾದ ತಿರುಳು ಏನು? ಎಂದು ಕೇಳಿದರು ಪ್ರೊ. ತಾವೊ.

'ಮುಖ್ಯವಾದ ಅಂಶ ಒಂದು ಗ್ರಾಮೋದ್ಯೋಗದ ಮೂಲಕ ಮಗುವಿನಲ್ಲಿರುವ ಪೂರ್ಣ ವ್ಯಕ್ತಿಯನ್ನು ಹೊರಚಿಮ್ಮಿಸುವುದು.'

ಅಧ್ಯಾಪಕರು ಸಿಗಬೇಕಲ್ಲ, ಅದೇ ಕಷ್ಟ ಎಂದರು ಪ್ರೊ. ತಾವೊ. ಗಾಂಧೀಜೀ ನಕ್ಕರು. ನಮಗೂ ಅದೇ ಕಷ್ಟವೇ. 'ತರಬೇತಾದ ಶಿಕ್ಷಕರಿಗೆ ನೀವು ಕೈಗಾರಿಕೆ ಕಲಿಸುತ್ತೀರೋ, ಕೈಗಾರಿಕೆ ಬಲ್ಲ ಕಸಬುದಾರನಿಗೇ ಶಿಕ್ಷಣ ವಿದ್ಯೆ ಕಲಿಸುತ್ತೀರೋ?' ಪ್ರೊ. ತಾವೊ. ಕೇಳಿದರು.

'ಸಾಮಾನ್ಯ ವಿದ್ಯಾವಂತ ಸುಲಭವಾಗಿ ಕೈಗಾರಿಕೆಯನ್ನು ಚೆನ್ನಾಗಿ ಕಲಿಯಬಲ್ಲ. ನಮ್ಮ ಕಸಬುದಾರರಿಗೆ ಸಾಧಾರಣ ವಿದ್ಯಾಭ್ಯಾಸ ಪಡೆಯಲಿಕ್ಕೂ ಕೂಡ ವಿದ್ಯಾವಂತರಿಗೆ, ನಿಮ್ಮಂಥವರಿಗೆ ಎನ್ನೋಣ, ಕೈಗಾರಿಕೆ ಕಲಿಯಲು ಹಿಡಿವ ಕಾಲಕ್ಕಿಂತ ಹೆಚ್ಚು ಬೇಕು.'

'ಆದರೆ ನಮ್ಮ ವಿದ್ಯಾವಂತರು ದೊಡ್ಡ ಕೆಲಸ, ಹೆಚ್ಚು ಸಂಬಳದ ಬೆನ್ನು ಹತ್ತಿದಾರಲ್ಲ. ಅವರಿಗೆ ಇದರಲ್ಲಿ ಆಸಕ್ತಿ ಹುಟ್ಟುತ್ತದೆಯೆ?'

'ಈ ಯೋಜನೆ ನಿರ್ದುಷ್ಟವಾಗಿದ್ದು ವಿದ್ಯಾವಂತರ ಮನಸ್ಸಿಗೆ ಹಿಡಿಸಬೇಕಾದರೆ ಇದು ಆಕರ್ಷಕವಾಗಿರಬೇಕು; ಅವರನ್ನು ಹಣದಾಸೆಯಿಂದ ಬಿಡಿಸುವಂತಿರಬೇಕು. ವಿದ್ಯಾವಂತ ತರುಣರಲ್ಲಿ ಇಷ್ಟು ಮಟ್ಟಿಗೆ ದೇಶಭಕ್ತಿಯನ್ನು ಪ್ರೇರಿಸಲಾರದಾದರೆ ಈ ಯೋಜನೆ ವಿಫಲವಾಗಬೇಕು. ನಮಗೊಂದು ಅನ್ನುಕೂಲವಿದೆ. ದೇಶಭಾಷೆಗಳಲ್ಲಿ ವಿದ್ಯೆ ಕಲಿತವರು ಕಾಲೇಜಿಗೆ ಸೇರಲಾರರು. ಅವರಿಗೆ ಇದು ಆಕರ್ಷಕವಾಗುವ ಸಂಭವವಿದೆ.೭೧

ಅಧ್ಯಾಯ ೮

# ಮೂಲಶಿಕ್ಷಣದ ಕಾರ್ಯರೂಪ

## ನೂಲುವುದು— ಚಾರಿತ್ರ್ಯ

ಬಡವರ ವಸತಿಗಳಲ್ಲಿನ ಸೇವಾಸದನಗಳಲ್ಲಿ ನೂಲುವುದರ ಪ್ರಯೋಗದ ಬಗ್ಗೆ ಅ. ಭಾ. ಚ. ಸಂಘದ ಕರ್ಣಾಟಕ ಶಾಖೆಯ ಕಾರ್ಯದರ್ಶಿ ವರದಿ ಕಳಿಸಿದಾರೆ.

'ಗದಗು ಬಿಜಾಪುರದ ವಸತಿಗಳಲ್ಲಿ ಉದ್ಯೋಗವಿಲ್ಲದವರಿಗೆ ಹಿಂಜುವುದನ್ನೂ ನೂಲುವುದನ್ನೂ ಕಲಿಸಲು ಕರ್ಣಾಟಕ ಶಾಖೆ ಶಿಕ್ಷಕರನ್ನು ಕಳಿಸಿದೆ ಎಂಬ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿ ಹುಬ್ಬಳ್ಳಿ ವಸತಿಯ ವ್ಯವಸ್ಥಾಪಕರಾದ ರೆವರೆಂಡ್ ವಿಲ್ಸನ್ ಮತ್ತು ವಸತಿ ಪಾಠಶಾಲೆಯ ವ್ಯವಸ್ಥಾಪಕಿ ಶ್ರೀಮತಿ ಬ್ರಿಸ್ಕೋ ಇಬ್ಬರೂ ತಮ್ಮಲ್ಲೂ ಈ ಪ್ರಯೋಗವನ್ನೇಕೆ ಮಾಡಬಾರದು ಎಂದು ಯೋಚಿಸಿದರು. ಇವರಿಬ್ಬರ ಹುರುಪು ಬಯಕೆಗಳೇ ಈ ಶಾಖೆ ಹುಬ್ಬಳ್ಳಿ ವಸತಿಯಲ್ಲಿ ಕೆಲಸ ಮಾಡಲು ಕಾರಣ.

'ಮೊದಲು ಹುಡುಗರ ಸೆರೆಮನೆಯಲ್ಲಿ ಪ್ರಾರಂಭಿಸಿದೆವು. ೮ ರಿಂದ ೧೬ ವರ್ಷದೊಳಗಿನ ೩೩ ಮಂದಿ ಹುಡುಗರಿದಾರೆ ಇಲ್ಲಿ. ಪೋಲೀಸರೋ ಹುಡುಗರ ತಂದೆ ತಾಯಿಗಳೋ ಇವರನ್ನು ಇಲ್ಲಿಟ್ಟಿರುತ್ತಾರೆ. ಅಡ್ಡದಾರಿ ಹಿಡಿದಿದ್ದರೆ, ಚಿಕ್ಕಪುಟ್ಟ ಕಳುವು ಮಾಡುತ್ತಿದ್ದರೆ ಅಂಥ ಹುಡುಗರನ್ನು ಇಲ್ಲಿಗೆ ಕಳಿಸುವುದು ವಾಡಿಕೆ. ಈ ಹುಡುಗರನ್ನು ಸರಿಯಾದ ದಾರಿಯಲ್ಲಿಡಲು ವ್ಯವಸ್ಥಾಪಕರಿಗೆ ಬಹಳ ಕಷ್ಟವಾಗಿತ್ತು. ಎಷ್ಟೋ ಹುಡುಗರು ಓಡಿಹೋದರು. ಅವರ ಬೆನ್ನು ಹತ್ತಿ ಹುಡುಕಿ ಹಿಡಿದು ಮತ್ತೆ ತರಬೇಕಾಯಿತು. ಊರೊಳಗಿನ ಶಾಲೆಗಳಿಗೆ ಕಳಿಸಿದರೆ ಓಡಿಹೋದಾರೆಂಬ ಹೆದರಿಕೆ. ಈ ಹುಡುಗರ ದೇಹ-ಮನಸ್ಸುಗಳಿಗೆ ಉದ್ಯೋಗ ಕೊಡುವಂಥ ಕೆಲಸ ಯಾವುದೂ ವಸತಿಯ ಅಧಿಕಾರಿಗಳಿಗೆ ಹೊಳಿದಿರಲಿಲ್ಲ.

**ಅ. ಭಾ. ಚ. ಸಂಘ ಒಬ್ಬ ಶಿಕ್ಷಕನನ್ನು ಕಳಿಸಿತು. ಆತ ೩॥ ತಿಂಗಳು ತರಬೇತು ಮಾಡಿದ. ಹತ್ತಿಯನ್ನು ಹಸಹಿಡಿದು ಹಿಂಜುವುದು, ನೂಲುವುದು ಅಂಥ್ರದ**

ರೀತಿ. ೧೪–೧೬ ರೊಳಗಿನ ದೊಡ್ಡ ಹುಡುಗರನ್ನು ತರಬೇತಿಗೆ ತೆಗೆದುಕೊಂಡೆವು. ದಿನವೂ ಒಬ್ಬೊಬ್ಬ ಹುಡುಗ ೧೨೦೦ ರಿಂದ ೧೫೦೦ ಗಜ ದಾರವನ್ನು ನೂಲುತ್ತಾನೆ. ನೂಲಿನ ನಂ. ೨೫–೩೦. ಕ್ರಮವಾದ ಕೆಲಸ, ಕೈಗೆ ಪುಡಿಕಾಸು ಮೊದಲಾದವೇಲೆ ಹುಡುಗರು ನಡತೆಯಲ್ಲಿ ಸ್ವಲ್ಪ ಪ್ರಗತಿಯಾಗಿದೆ ಎಂದು ವ್ಯವಸ್ಥಾಪಕರು ಹೇಳು ತ್ತಾರೆ. ಶ್ರೀಮತಿ ಬ್ರಿಸ್ಕೋ ಬರೆದ ಪತ್ರ ಸ್ವಯಂ ಸ್ಪಷ್ಟವಾಗಿದೆ. ನಾನೇನೂ ಹೆಚ್ಚು ಬರೆಯುವುದಿಲ್ಲ, ಆ ಪತ್ರವನ್ನೇ ಇಟ್ಟಿದೇನೆ.'

ಆಕೆಯ ಪತ್ರ ಹೀಗಿದೆ :

'ನಮ್ಮ ಶಾಲೆಯಲ್ಲಿ ಮಾಡುತ್ತಿರುವ ನೂಲುವ ಪ್ರಯೋಗದ ಬಗ್ಗೆ ನಿಮಗೆ ತಿಳಿಸಲು ಅ. ಭಾ. ಚ. ಸಂಘ ನನಗೆ ಹೇಳಿದೆ.

೧. ನಾವು ೧೯೪೦ ಜನವರಿ ೧೫ರಲ್ಲಿ ನೂಲುವ ತರಗತಿಯನ್ನು ಮೊದಲಿಟ್ಟೆವು.

೨. ಹುಡುಗರು ೧೪ ರಿಂದ ೧೬ ವರ್ಷದೊಳಗಿನವರು ಅವರಿಗೆ ಈ ಕೆಲಸ ದಲ್ಲಿ ಎಷ್ಟು ಸಂತೋಷವೋ ನೋಡಿ ನಮಗೇ ಅಚ್ಚರಿಯಾಯಿತು.

೩. ಹೆಚ್ಚು ವೆಚ್ಚ ಮಾಡಿ ಉದ್ಯೋಗಗಳನ್ನು ಪ್ರಾರಂಭಿಸಲು ನಮಗೆ ಶಕ್ತಿ ಯಿರಲಿಲ್ಲ. ಆದುದರಿಂದ ಏನೂ ಉದ್ಯೋಗವಿಲ್ಲದೆ ಕುಳಿತಿದ್ದರು ಇವರು. ಈಗ ಅವರು ಕೆಲಸದಲ್ಲಿ ಮಗ್ನರಾಗಿ ಹರ್ಷವಾಗಿದಾರೆ. ಓಡಿಹೋಗುವ ಬಯಕೆ ಯಿದ್ದಂತಿಲ್ಲ.

೪. ದಿನಕ್ಕೆ ತಲಾ ೨ ಆಣೆ ೩ ಕಾಸು ಗಳಿಸುತ್ತಾರೆ—೫ ಗಂಟೆ ಕೆಲಸಮಾಡಿ. ಈ ನೂಲುವ ಕೆಲಸವನ್ನು ಪ್ರಾರಂಭಿಸಲು ಕೊಟ್ಟ ಮುಂಗಡವನ್ನು ತೀರಿಸುತ್ತಿದಾರೆ. ಅವರ ಕೈಗೆ ಸ್ವಲ್ಪ ಕೊಟ್ಟು, ಉಳಿದುದನ್ನು ಅವರ ಹೆಸರಿನಲ್ಲಿ ತೆಗೆದಿಡುತ್ತಿದೇವೆ. ಸದನವನ್ನು ಬಿಟ್ಟು ಹೋಗುವಾಗ ಸ್ವಲ್ಪವಾದರೂ ಹಣ ಕೈಗೆ ಸಿಗುತ್ತದೆ. ಹುಡುಗರ ಗುಂಪಿನಲ್ಲಿ ಇದು ಯಶಸ್ವಿಯಾದುದರಿಂದ ಈ ವಾರ ಹುಡುಗಿಯರ ಸದನದಲ್ಲಿ ದೊಡ್ಡ ಹುಡುಗಿಯರಿಗೆ ಕಲಿಸಲು ಮೊದಲಿಟ್ಟಿದೇವೆ. ಈ ಸುದ್ದಿಯಲ್ಲಿ ನಿಮಗೆ ಆಸಕ್ತಿಯಿದ್ದೀತೆಂದು ಇದನ್ನು ಬರೆಯುತ್ತಿದೇನೆ. ನೂಲುವ ಹುಡುಗರ ಚಿತ್ರ ವೊಂದನ್ನು ಕಳಿಸುತ್ತಿದೇನೆ. ಹೇಗೆ ಹಸನ್ಮುಖಿಗಳಾಗಿದಾರೋ ನೋಡಿ.'

ನೂಲುವುದು ಸ್ಥೈರ್ಯವನ್ನು ಕೊಡುತ್ತದೆ ಎಂದು ಮೇಲೆ ಹೇಳಿದುದಕ್ಕೆ ಬೇಕಾದಷ್ಟು ಸಾಕ್ಷ್ಯವೂ ಇದೆ. ಶ್ರೀಮತಿ ಬ್ರಿಸ್ಕೋ ತನ್ನ ಪ್ರಯೋಗದ ಪ್ರಗತಿಯ ಬಗ್ಗೆ ಆಗಾಗ ವರದಿಗಳನ್ನು ಕಳಿಸುವಳೆಂದು ಆಶಿಸುತ್ತೇನೆ.೭೪

## ಮರುಭೂಮಿಯಲ್ಲಿ ನೀರು

ಬಿಹಾರ ಪ್ರಾಂತದ ಗವರ್ನರರಿಗೆ ಸಲಹೆಗಾರರಾದ ಶ್ರೀ ಕಸಿನ್ಸ್ ತಾಲೀಮೀ ಸಂಘದ ಕಾರ್ಯದರ್ಶಿ ಶ್ರೀ ಆರ್ಯನಾಯಕಂಗೆ ಬಿಹಾರದ ಮೂಲ

ಶಿಕ್ಷಣದ ಶಾಲೆಗಳನ್ನು ಪ್ರಶಂಸಿಸಿ ಒಂದು ಪತ್ರ ಬರೆದಿದಾರೆ. ಸರಕಾರಿ ಅಧಿಕಾರಿಗಳು ಮೂಲಶಿಕ್ಷಣದ ವಿರುದ್ಧವಾಗಿ ಮಾಡುತ್ತಿರುವ ಅಪ–ವಿಚಾರದ ಟೀಕೆಯ ಮರಳುಗಾಡಿನಲ್ಲಿ ಈ ಪತ್ರ ಒಂದು ಚಿಲುಮೆಯ ಹಾಗೆ ಇದೆ.

'ಮೂಲಶಿಕ್ಷಣ ಶಾಲೆಗಳ ಪರಿಶೀಲನೆಯ ನನ್ನ ಕಾರ್ಯಕ್ರಮ ವಿಶೇಷ ಮಳೆ ಬಂದುದರಿಂದ ನಿಂತುಹೋಯಿತು. ಅದಕ್ಕಾಗಿ ದುಃಖವಾಗುತ್ತದೆ. ಆದರೆ ಇರುವ ೨೭ ಮೂಲಶಿಕ್ಷಣ ಶಾಲೆಗಳಲ್ಲಿ ೧೮ ಶಾಲೆಗಳ ಅಧ್ಯಾಪಕರನ್ನೂ ವಿದ್ಯಾರ್ಥಿಗಳನ್ನೂ ನೋಡಿದೆ; ೬ ಬೃಂದಾವನ – ರಾಂಪುರದಲ್ಲಿ, ೧೨ ಚೌಬೆತೊಲಾ–ಪರೂಕಿಯಾದಲ್ಲಿ ನಾನು ನೋಡಿದುದರಲ್ಲೆಲ್ಲಾ ನನಗೆ ಆಸಕ್ತಿ ಹುಟ್ಟಿತು. ಏಳೂ ತರಗತಿ ಪೂರ್ಣವಾಗುವವರೆಗೆ ಈ ಪ್ರಯೋಗದ ಬಗ್ಗೆ ತೀರ್ಪು ಹೇಳಲು ಸಾಧ್ಯವಿಲ್ಲ, ಆದರೆ ಅಲ್ಲಿನ ಸ್ವಚ್ಛತೆ, ಹುಡುಗರ ಚುರುಕು, ಅವರಿಗೆ ತಮ್ಮ ಕೆಲಸದಲ್ಲಿದ್ದ ಹಿಗ್ಗು ಕಂಡು, ನಾವು ಸರಿಯಾದ ದಾರಿ ತುಳಿದಿದೇವೆ ಎಂಬ ಧೈರ್ಯವಾಯಿತು. ಸಾದಾರಣ ಪಾಠಶಾಲೆಯಲ್ಲಿ ಓದಿದ ಮಕ್ಕಳನ್ನೂ ಮೂಲಶಿಕ್ಷಣದ ಇಡೀ ಶಿಕ್ಷಣ ಕ್ರಮವನ್ನು ಮುಗಿಸಿದ ೧೪ ವರ್ಷದ ವಿದ್ಯಾರ್ಥಿಗಳನ್ನೂ ಹೋಲಿಸಿದರೆ ಅವರಿಗಿಂತ ಇವರು ಕಡಮೆಯಾಗದು.

'ನನಗೆ ಬಹಳ ಮಹತ್ವದ್ದು ಎನಿಸುವ ಒಂದು ವಿಶೇಷ ಲಕ್ಷಣವೆಂದರೆ, ಈ ಶಾಲೆಗಳು ನಿಸ್ಸಂಶಯವಾಗಿ ಹಳ್ಳಿಯ ಜನರ ಮನಸ್ಸನ್ನು ಸೆಳೆದು ಅವರಿಗೆ ಇದರಲ್ಲಿ ಆಸಕ್ತಿ ಹುಟ್ಟಿಸಿವೆ. ಹೀಗಿರುವವರೆಗೆ ಈ ಪದ್ಧತಿಗೆ ಸೋಲಿಲ್ಲ. ಚೌಬೆತೊಲಾ—ಪರೂಕಿಯಾಗಳ ಗ್ರಾಮಸ್ಥರೂ ಒಡೆಯರೂ ಶಾಲೆಗಳಿಗೆ ಉತ್ತಮವಾದ ಆಟದ ಬಯಲುಗಳನ್ನು ಒದಗಿಸುವುದರಲ್ಲಿ, ರಸ್ತೆಗಳನ್ನು ಮಾಡುವುದರಲ್ಲಿ, ನಾನು ನೋಡಿದುದರಲ್ಲಿ ಬಹಳ ದೊಡ್ಡದಾದ ಸ್ವಯಂಸೇವಕ ದಳಗಳಿಗೆ ಸಾಮಗ್ರಿಗಳನ್ನೊದಗಿಸುವುದರಲ್ಲಿ ತೋರಿದ ಸೇವಾ ಬುದ್ಧಿ, ಅದಕ್ಕಿಂತ ಹೆಚ್ಚಾಗಿ ಹುಡುಗರು ಶಾಲೆಗೆ ತಪ್ಪದೆ ಹೋಗಬೇಕೆಂದು ಮಾಡುತ್ತಿರುವ ಒತ್ತಾಯ, ಪ್ರಶಂಸನೀಯವಾಗಿದೆ. ನಾನು ಹೋಗಲಾಗದ ಉಳಿದ ಶಾಲೆಗಳಲ್ಲೂ ಸಾರ್ವಜನಿಕರ ಆಸಕ್ತಿ ಹೀಗೇ ಇದೆಯಂತೆ. ಗ್ರಾಮಸ್ಥರ ಪ್ರಯತ್ನಕ್ಕೆ ತಕ್ಕ ಫಲ ಸಿಗುತ್ತದೆ, ನನಗೆ ನಂಬಿಕೆಯಿದೆ. ಸಾಮಾನ್ಯ ವಿದ್ಯಾಭ್ಯಾಸವಲ್ಲದೆ ಈ ಹುಡುಗರಿಗೆ ಬುದ್ಧಿಯ ಚುರುಕು, ಹಸ್ತಕೌಶಲ, ಆರೋಗ್ಯ ಶುಚಿಗಳು ಲಭಿಸಿ, ಅವರು ತಮ್ಮ ಹಳ್ಳಿಗಳನ್ನು ಮೊದಲಿಗಿಂತ ಹೆಚ್ಚು ಆರೋಗ್ಯವಂತ, ನಿರ್ಮಲ, ವಿಚಾರಪೂರ್ಣ ಆಗಿ ಮಾಡುತ್ತಾರೆಂದು ನನಗನಿಸಿದೆ.' ೭೫

## ಕೈಗಾರಿಕೆಯ ಮೂಲಕ ವಿದ್ಯಾಭ್ಯಾಸ

ಶ್ರೀಮತಿ ಆಶಾದೇವಿ ಸ್ವಾರಸ್ಯವಾದ ಈ ಅಂಕೆಗಳನ್ನು ಕಳಿಸಿದಾಳೆ :

'ಬಿಹಾರದ ಚಂಪಾರಣ್ಯ ಜಿಲ್ಲೆ ಬೆಟ್ಟಿಯಾ ಠಾಣೆಯ ಕ್ಷೇತ್ರದ ೨೭ ಮೂಲ ಶಿಕ್ಷಣ ಶಾಲೆಗಳು ಏಪ್ರಿಲ್ ೧೯೪೨ ರಲ್ಲಿ ಮೂರು ವರ್ಷ ಮುಗಿಸಿದುವು. ಈ ಶಾಲೆ

ಗಳ ೧-೨-೩ ನೆ ತರಗತಿಗಳ ೧೯೪೧-೪೨ ರ ವರ್ಷದ ಆರ್ಥಿಕ ವರದಿಗಳು ಮೂಲ ಶಿಕ್ಷಣದ ಕೆಲಸಗಾರರಿಗೆ ಬಹಳ ಉತ್ತೇಜಕವಾಗಿವೆ. ನಯೀ ತಾಲೀಂ ಪತ್ರಿಕೆಯಲ್ಲಿ ಈ ವರದಿ-ನಕ್ಷೆಗಳನ್ನು ಕೊಡಲಾಗುತ್ತದೆ. ಮೂಲಶಿಕ್ಷಣದಲ್ಲಿ ಆಸಕ್ತಿಯುಳ್ಳವರಿಗಾಗಿ ಇಲ್ಲಿ ಅದರ ಸಾರವನ್ನು ಕೊಡುತ್ತಿದೇನೆ. ಈ ಶಾಲೆಗಳಿಲ್ಲಿ ಸರಾಸರಿ ಹಾಜರಿ-೧ ನೆ ತರಗತಿಯಲ್ಲಿ ಶೇ. ೭೬, ೩ ರಲ್ಲಿ ಶೇ. ೭೯. ಮೊದಲನೆ ತರಗತಿಯಲ್ಲಿ ಸರಾಸರಿ ಗಳಿಕೆ ರೂ. ೦-೧೧-೦, ಎರಡನೆ ತರಗತಿಯಲ್ಲಿ ರೂ. ೨-೪-೨, ಮೂರನೆಯದರಲ್ಲಿ ರೂ. ೬-೧-೧, (ಸರಾಸರಿಯಂತೆ) ಒಟ್ಟು ಮೊದಲನೆ ತರಗತಿಯ ೩೯೦ ಜನ ಮಕ್ಕಳು ೧೦,೨೬೪ ಗಂಟೆ ದುಡಿದು ರೂ. ೨೬೭-೮-೬ ಗಳಿಸಿದಾರೆ ; ಎರಡನೆ ತರಗತಿಯ ೩೫೬ ಮಕ್ಕಳು ೧೪,೦೮೨ ಗಂಟೆಯಲ್ಲಿ ರೂ. ೮೦೪-೧೩-೮ ಗಳಿಸಿದಾರೆ ; ಮೂರನೆ ತರಗತಿಯ ೩೧೯ ಮಕ್ಕಳು ೧೪,೩೬೨ ಗಂಟೆ ಕೆಲಸ ಮಾಡಿ ರೂ. ೧೯೩೫-೧೪-೧೧ ಗಳಿಸಿದಾರ. ಒಟ್ಟು ೧೦೬೫ ಮಂದಿ ಮಕ್ಕಳು ವರ್ಷದಲ್ಲಿ ರೂ. ೩೦೦೮-೦-೧ ಗಳಿಸಿದಾರೆ. ಈ ಶಾಲೆಗಳ ಸರಾಸರಿ ಗಳಿಕೆ ಮೂರನೆ ತರಗತಿಗೆ ರೂ. ೧೫-೧೨-೦, ಎರಡನೆ ತರಗತಿಗೆ ರೂ. ೬-೨-೦, ಒಂದನೆ ತರಗತಿಗೆ ರೂ. ೨-೧೦-೧ ಆಗಿದೆ. ಸರಾಸರಿ ವೇಗ ೩ ನೆ ತರಗತಿಯಲ್ಲಿ ಗಂಟೆಗೆ ೪೮೦ ಸುತ್ತು ರಾಟೆಯಲ್ಲಿ, ತಕಲಿಯಲ್ಲಿ ೨೦೧ ಸುತ್ತು ; ೨ ನೆ ತರಗತಿಯಲ್ಲಿ ರಾಟೆಯಲ್ಲಿ ೩೫೦ ಸುತ್ತು, ತಕಲಿಯಲ್ಲಿ ೨೪೨ ; ೧ ನೆ ತರಗತಿಯಲ್ಲಿ ತಕಲಿಯಲ್ಲಿ ೧೬೪ ಸುತ್ತು.'

ಉತ್ಪತ್ತಿ, ಆದಾಯಗಳನ್ನು ತೋರಿಸಲು ಈ ಅಂಕೆಗಳನ್ನು ಕೊಟ್ಟಿಲ್ಲ. ಉತ್ಪತ್ತಿ ಆದಾಯಗಳೂ ಮುಖ್ಯವೇ. ಆದರೂ ಶಿಕ್ಷಣದ ನಕ್ಷೆಗಳಲ್ಲಿ ಅದಕ್ಕೆ ಗೌಣ ಸ್ಥಾನ. ತರುಣರನ್ನು ತರಬೇತು ಮಾಡುವುದರಲ್ಲಿ ಕೈಗಾರಿಕೆಗೆ ಶೈಕ್ಷಣಿಕ ಮಹತ್ವವಿದೆಯೋ ತೋರಿಸಲು ಈ ಲೆಕ್ಕ ಕೊಟ್ಟಿದೆ. ಪರಿಶ್ರಮ, ಎಚ್ಚರ, ಎಲ್ಲಾ ಸೂಕ್ಷ್ಮ ವಿವರಗಳಿಗೂ ಗಮನವಿಲ್ಲದೆ ಈ ಕೆಲಸ ಸಾಧ್ಯವಿಲ್ಲವೆಂಬುದು ಸ್ಪಷ್ಟ.[೭೬]

ಅಧ್ಯಾಯ ೯

# ಶಿಕ್ಷಣದ ವಿವಿಧ ವಿಷಯಗಳು

## ೧

## ಕಾಂಗ್ರೆಸ್ ಮಂತ್ರಿಮಂಡಲಗಳೂ ಉತ್ತರ ಬುನಿಯಾದಿ ಶಿಕ್ಷಣವೂ

ಬಾಳಾ ಸಾಹೇಬ ಖೇರರ ಅಧ್ಯಕ್ಷತೆಯಲ್ಲಿ, ಅವರ ಆಹ್ವಾನದಂತೆ, ಕಾಂಗ್ರೆಸ್ ಸರಕಾರಗಳ ವಿದ್ಯಾ ಸಚಿವರೆಲ್ಲ ಪೂನಾದಲ್ಲಿ ಜುಲೈ ೨೯–೩೦ರಲ್ಲಿ ಸಭೆ ಸೇರಿದ್ದರು. ೨ನೆ ತಾ. ಮಧ್ಯಾಹ್ನ ಗಾಂಧೀಜಿ ಒಂದು ಒಂದೂವರೆ ಗಂಟೆಯ ಹೊತ್ತು ಸಭೆಯಲ್ಲಿ ಭಾಗ ವಹಿಸಿದ್ದರು.

ಬಂಧನದಿಂದ ಬಿಡುಗಡೆಯಾಗಿ ಬಂದ ಮೇಲೆ, ೨೯–೩೦ ರಲ್ಲಿ, ತಾಲೀಮೀ ಸಂಘದವರನ್ನು ಭೇಟಿಯಾದಾಗ ಇನ್ನು ಮೂಲಶಿಕ್ಷಣದ ವ್ಯಾಪ್ತಿಯನ್ನು ಬೆಳೆಸುವ ಕಾಲ ಬಂದಿದೆ ಎಂದು ಹೇಳಿದ್ದರು. ಉತ್ತರ ಬುನಿಯಾದಿ, ಪೂರ್ವ ಬುನಿಯಾದಿ ಶಿಕ್ಷಣಗಳನ್ನೂ ತೆಗೆದುಕೊಳ್ಳಬೇಕು ಎಂದರು. ಮೂಲ ಶಿಕ್ಷಣ ವಾಸ್ತವವಾಗಿ ಜೀವನಶಿಕ್ಷಣವಾಗಬೇಕು. ಆ ಮಾತನ್ನು ಮುಂಬರಿಸುತ್ತ ತಮ್ಮ ಭಾಷಣದಲ್ಲಿ ಈ ಬೆಳವಣಿಗೆ ಹೇಗೆ ಆಗಬೇಕು, ಯಾವ ರೀತಿ, ಮಂತ್ರಿಗಳು ಈ ಬಗ್ಗೆ ಏನು ಮಾಡಬೇಕು ಎಂಬುದನ್ನೂ ತಿಳಿಸಿದರು. ಅತ್ಯುತ್ಸಾಹದಲ್ಲಿ ಕೈಲಾಗದುದಕ್ಕೆಲ್ಲಾ ಪ್ರಯತ್ನ ಮಾಡಲಾಗದು, ಸಾಧಿಸಲು ಸಾಮರ್ಥ್ಯವಿಲ್ಲದ ಕಾರ್ಯಕ್ರಮದಿಂದ ನಮಗೆ ನಾವೇ ಬಲೆ ಬೀಸಿಕೊಂಡತಾದೀತು ಎಂದು ಡಾ॥ ಜಾಕಿರ್ ಹುಸೇನರು ಹೇಳಿದುದಕ್ಕೆ ಉತ್ತರವಾಗಿ ಇದನ್ನು ಹೇಳಿದರು.

### ನಾನು ಮಂತ್ರಿಯಾಗಿದ್ದರೆ

ಏನು ಮಾಡಬೇಕೆಂಬುದು ಗೊತ್ತು. ಆದರೆ ಹೇಗೆ ಮಾಡಬೇಕೋ ತಿಳಿಯದು ಎಂದರು. ಇಲ್ಲಿಯವರೆಗೆ ದಾರಿ ಗೊತ್ತಿತ್ತು ; ಮುಂದೆ ಜಾಡು ಇಲ್ಲ. ಈ ಕಷ್ಟ ಗೊತ್ತು. ಹಳೆಯ ಸಂಪ್ರದಾಯದಲ್ಲಿ ಬೆಳೆದವರಿಗೆ ಒಂದೇ ಏಟಿಗೆ ಅದನ್ನು ತೊರೆಯಲು ಸುಲಭವಲ್ಲ. ತಾವು ಮಂತ್ರಿಯಾಗಿದ್ದರೆ, ಇನ್ನು ಮುಂದೆ

ವಿದ್ಯಾಭ್ಯಾಸವೆಲ್ಲ ಮೂಲಶಿಕ್ಷಣದ ಪದ್ಧತಿಯಂತೆ ನಡೆಯಬೇಕು ಎಂದು ಸೂಚಿಸಿಬಿಡುತ್ತಿದ್ದರು. ಹಲವು ಪ್ರಾಂತಗಳಲ್ಲಿ ವಯಸ್ಕರ ಶಿಕ್ಷಣದ ಚಳುವಳಿ ಪ್ರಾರಂಭವಾಗಿದೆ. ತಮ್ಮ ಮಾತು ನಡೆಯುವುದಾದರೆ ಅದನ್ನೂ ಒಂದು ಮೂಲೋದ್ಯೋಗದ ಮೂಲಕ ನಡೆಸುತ್ತಿದ್ದರು. ಹತ್ತಿಯನ್ನು ನೂಲುವುದು, ಅದಕ್ಕೆ ಸಂಬಂಧಿಸಿದ ಉಳಿದ ಕೆಲಸ ಈ ಕಾರ್ಯಕ್ರಮಕ್ಕೆ ಅತ್ಯುತ್ತಮ ಸಾಧನ. ಆದರೆ ಯಾವ ಉದ್ಯೋಗವನ್ನು ಆರಿಸಿಕೊಳ್ಳಬೇಕೋ ಅವರವರೇ ಯೋಚಿಸಲಿ. ನಿಜವಾಗಿ ಯೋಗ್ಯತೆಯಿದ್ದುದೇ ಕಟ್ಟಕಡೆಗೆ ಉಳಿದುಕೊಂಡೀತು; ತಮಗೆ ದೃಢ ವಿಶ್ವಾಸವಿದೆ. ಶಿಕ್ಷಣ ಶಾಖಾಧಿಕಾರಿಗಳು ಇನ್‌ಸ್ಪೆಕ್ಟರರು ಜನ ರೊಡನೆ ಅಧ್ಯಾಪಕರೊಡನೆ ಕಲೆತು ಚರ್ಚೆ ಮಾಡಿ ತಿಳಿಸಿ ಹೇಳಿ, ಸರಕಾರದ ಹೊಸ ಶಿಕ್ಷಣ ನೀತಿಯ ಗುಣ–ಉಪಯೋಗಗಳನ್ನು ಅರಿತುಕೊಳ್ಳುವಂತೆ ಮಾಡ ಬೇಕು. ಅದು ಅವರ ಮೊದಲನೆ ಕೆಲಸ, ಅಧಿಕಾರ ಮಾಡುವುದಲ್ಲ. ಹೊಸ ಧೋರಣೆ ಅವರಿಗೆ ಇಷ್ಟವಿಲ್ಲದಿದ್ದರೆ, ಅದರಲ್ಲಿ ಶ್ರದ್ಧೆಯಿಲ್ಲದಿದ್ದರೆ ಅವರು ಕೆಲಸವನ್ನು ಬಿಡಲಿ, ಅಡ್ಡಿಯಿಲ್ಲ. ಆದರೆ ಮಂತ್ರಿಗಳಿಗೆ ತಮ್ಮ ಕೆಲಸದ ಅರಿ ವಿದ್ದರೆ, ಅವರು ಕೆಲಸಕ್ಕೆ ನಿಂತರೆ, ಇದು ಅಗತ್ಯವಾಗದು. ಸುಮ್ಮನೆ ಅಪ್ಪಣೆ ಗಳನ್ನು ಕಳಿಸಿದರೆ ಕೆಲಸವಾಗದು.

## ವಿಶ್ವವಿದ್ಯಾನಿಲಯ ಶಿಕ್ಷಣದಲ್ಲಿ ಪರಿವರ್ತನೆ

ವಯಸ್ಕರ ಶಿಕ್ಷಣಕ್ಕೆ ಹೇಳಿದುದೇ ವಿಶ್ವವಿದ್ಯಾನಿಲಯದ ಶಿಕ್ಷಣಕ್ಕೂ. ಭಾರತದ ರಂಗಕ್ಕೆ ಅದು ಜೀವಂತವಾಗಿ ಹೊಂದಿಕೊಂಡಿರಬೇಕು. ಆದುದರಿಂದ ಮೂಲಶಿಕ್ಷಣದ ವಿಸ್ತರಣ ಮುಂದಿನ ಹೆಜ್ಜೆ ಆಗಬೇಕು. ಅದೇ ಗಾಂಧೀಜಿಯ ಮುಖ್ಯ ವಿಚಾರ. ಆ ವಿಚಾರ ಅವರಿಗೆ ಒಪ್ಪಿಗೆಯಾಗದಿದ್ದರೆ ತಮ್ಮ ಸಲಹೆ ಯಿಂದ ಅವರಿಗೆ ಪ್ರಯೋಜನವಾಗಲಾರದೇನೋ ಎಂದರು-ಹಾಗಲ್ಲದೆ, ಈಗಿನ ವಿಶ್ವವಿದ್ಯಾನಿಲಯ-ಶಿಕ್ಷಣ ಸ್ವಾತಂತ್ರ್ಯಕ್ಕೆ ಯೋಗ್ಯರನ್ನಾಗಿ ಮಾಡದೆ ಗುಲಾಮ ರಾಗಿ ಮಾಡುತ್ತದೆ ಎಂದು ತಮ್ಮ ಜೊತೆಗೆ ಅವರೂ ಒಪ್ಪಿಕೊಂಡರೆ, ತಮ್ಮ ಹಾಗೇ ಅವರೂ ಕೂಡ ಈ ಪದ್ಧತಿಯನ್ನು ಕಿತ್ತುಹಾಕಿ, ದೇಶದ ಆವಶ್ಯಕತೆ ಗಳಿಗೆ ತಕ್ಕಂತೆ ಹೊಸ ಪದ್ಧತಿಯನ್ನು ರಚಿಸಲು ಆತುರಗೊಂಡಾರು.

ಇವೊತ್ತು ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣ ಪಡೆದ ಯುವಕರು ಸರಕಾರಿ ಚಾಕರಿಗೆಓಡುತ್ತಾರೆ, ಇಲ್ಲವೆ ಅಡ್ಡದಾರಿ ಹಿಡಿದು ತಮ್ಮ ನಿಶಾನೆಗೆ

ಅಶಾಂತಿ ಹುಟ್ಟಿಸುವ ಕೆಲಸ ಹುಡುಕುತ್ತಾರೆ. ತಿರುಪೆಗೂ ಪರರಿಗೆ ಭಾರವಾಗಿ ಬದುಕಲಿಕ್ಕೂ ಅವರು ಹೇಸರು. ಇದು ಅವರ ದುಃಸ್ಥಿತಿ. ದೇಶದ ಸ್ವಾತಂತ್ರ್ಯಕ್ಕಾಗಿ ಬದುಕುವ, ಸಾಯುವ ನಿಜವಾದ ಜನಸೇವಕರನ್ನು ಅಣಿಮಾಡುವುದು ವಿಶ್ವವಿದ್ಯಾನಿಲಯದ ಗುರಿ. ಆದುದರಿಂದ ವಿಶ್ವವಿದ್ಯಾಲಯದ ಶಿಕ್ಷಣವನ್ನೂ ಮೂಲಶಿಕ್ಷಣ ಪದ್ಧತಿಗೆ ಅಳವಡಿಸಿಕೊಳ್ಳಲು ತಾಲೀಮಿ ಸಂಘದ ಶಿಕ್ಷಕರನ್ನು ತೆಗೆದುಕೊಳ್ಳಬೇಕು.

ಜನತೆಯ ಪ್ರತಿನಿಧಿಗಳಾಗಿ ಮಂತ್ರಿಗಳು ಅಧಿಕಾರ ವಹಿಸಿಕೊಂಡರು. ಜನರ ಬೆಂಬಲವಿಲ್ಲದಿದ್ದರೆ ಅವರ ಅಪ್ಪಣೆ ಶಾಸನಸಭಾ ಭವನದ ಗೋಡೆ ದಾಟಿ ಬರಲಾರದು. ಬೊಂಬಾಯಿ, ಅಹಮದಾಬಾದುಗಳಲ್ಲಿ ಈಗ ನಡೆಯುತ್ತಿರುವುದು ಜನರ ಮೇಲೆ ಕಾಂಗ್ರೆಸ್ಸಿನ ಪ್ರಭಾವ ತಗ್ಗುತ್ತಿದೆಯೆಂಬ ಸೂಚನೆಯಾದರೆ ಶುಭ ಶಕುನವಲ್ಲ. ನಯೀ ತಾಲೀಂ ಇನ್ನೂ ಎಳೆಯ ಸಸಿ. ಆದರೆ ಬಹಳ ದೊಡ್ಡದಾಗಲಿದೆ. ಆದರೆ ಜನತೆಯ ಬೆಂಬಲವಿಲ್ಲದೆ ಬರೀ ಮಂತ್ರಿಗಳ ನಿರೂಪದಿಂದಲೇ ಅದು ಬೆಳೆಯಲಾರದು. ಆದುದರಿಂದ ಜನತೆಯ ಬೆಂಬಲ ಸಿಗದಿದ್ದರೆ ಅಧಿಕಾರವನ್ನು ಬಿಡಿ ಎಂದು ಹೇಳಿದರು ಗಾಂಧೀಜಿ. ಅರಾಜಕತೆಗೆ ಅಂಜಬೇಕಾಗಿಲ್ಲ. ತಮಗೆ ತಿಳಿದಂತೆ ತಮ್ಮ ಕರ್ತವ್ಯವನ್ನು ನಿರ್ವಹಿಸುವುದು ಅವರ ಕೆಲಸ. ಉಳಿದುದು ದೇವರಿಗೆ ಸೇರಿದುದು. ಈ ಅನುಭವದಿಂದಲೂ ಜನತೆಗೆ ನಿಜವಾದ ಸ್ವಾತಂತ್ರ್ಯದ ಪಾಠ ದೊರೆತೀತು.[೭೭]

## ೨

## ಹೊಸ ವಿಶ್ವವಿದ್ಯಾನಿಲಯಗಳ ಬಗ್ಗೆ

ಪ್ರಾಂತಗಳಲ್ಲಿ ಹೊಸ ವಿದ್ಯಾನಿಲಯಗಳನ್ನು ಸ್ಥಾಪಿಸುವ ಭ್ರಾಂತಿ ಹಿಡಿದಂತಿದೆ. ಗುಜರಾತಕ್ಕೆ ಒಂದು ಗುಜರಾತಿಯದು, ಮಹಾರಾಷ್ಟ್ರಕ್ಕೆ ಮರಾಠಿಯದು, ಕರ್ನಾಟಕಕ್ಕೆ ಕನ್ನಡದ್ದು, ಉತ್ಕಲಕ್ಕೆ ಒರಿಯಾದ್ದು, ಅಸ್ಸಾಮಿಗೆ—ಹೀಗೇ. ಸಕಲಸಂಪನ್ನವಾದ ಈ ದೇಶಭಾಷೆಗಳೂ ಆ ಭಾಷೆಗಳನ್ನಾಡುವ ಜನರೂ ಪೂರ್ಣವಿಕಾಸಗೊಳ್ಳಬೇಕಾದರೆ ಅಂಥ ವಿಶ್ವವಿದ್ಯಾನಿಲಯಗಳಿರಬೇಕೆಂದು ನನ್ನ ನಂಬಿಗೆ.

ಆದರೆ, ಈ ಗುರಿಯ ಸಾಧನೆಗಾಗಿ ನಾವು ಸಲ್ಲದ ಗಡಿಬಿಡಿ ಮಾಡುತ್ತಿದೇವೆ ಎಂಬ ಅಂಜಿಕೆಯೂ ಇದೆ. ಮೊದಲನೆ ಹೆಜ್ಜೆ ಭಾಷೀಯ ಪ್ರಾಂತ

ರಚನೆ. ಆಗ ವಿಶ್ವವಿದ್ಯಾನಿಲಯಗಳಿಲ್ಲದ ಕಡೆ ಹೊಸವನ್ನು ರಚಿಸಬೇಕಾಗುತ್ತದೆ ಬೇರೆ ಬೇರೆ ಪ್ರಾಂತಗಳಲ್ಲಿ. ಬೊಂಬಾಯಲ್ಲಿ ಮೂರು ಭಾಷೆಗಳಿವೆ; ಗುಜರಾತಿ, ಮರಾಠಿ, ಕನ್ನಡ. ಅವಕ್ಕೆ ಬೆಳವಣಿಗೆಯಿಲ್ಲ. ಮದರಾಸಿನಲ್ಲಿ ನಾಲ್ಕು ಭಾಷೆ; ತಮಿಳು, ತೆಲಗು, ಮಲೆಯಾಳಿ, ಕನ್ನಡ. ಒಂದಕ್ಕೆರಡೂ ಇದೆ. ಆಂಧ್ರ ದೇಶಕ್ಕೆ ಒಂದು ಆಂಧ್ರ ವಿಶ್ವವಿದ್ಯಾಲಯವಿದೆ. ಆದರೆ ಪರಾಧೀನವಲ್ಲದ ಆಂಧ್ರ ಒಂದು ಬೇರೆ ಪ್ರಾಂತವಾಗಿದ್ದರೆ ಆ ವಿಶ್ವವಿದ್ಯಾನಿಲಯಕ್ಕೆ ಇರುತ್ತಿದ್ದ ಸ್ಥಾನ ಈಗಿಲ್ಲ. ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಬಂದು ಇನ್ನೂ ಎರಡೇ ತಿಂಗಳು. ಅಣ್ಣಾಮಲೆ ವಿಶ್ವವಿದ್ಯಾನಿಲಯವೂ ಅಷ್ಟೇ—ಆ ವಿಶ್ವವಿದ್ಯಾನಿಲಯದಲ್ಲಿ ತಮಿಳಿಗೆ ಸ್ವಸ್ಥಾನ ಸಿಕ್ಕಿದೆಯೆನ್ನಬಹುದೆ?

ಹೊಸ ವಿಶ್ವವಿದ್ಯಾನಿಲಯಗಳಿಗೆ ಸರಿಯಾದ ಹಿನ್ನೆಲೆ ಅಗತ್ಯ. ಅದಕ್ಕೆ ಆಧಾರವಾಗಿ ದೇಶ ಭಾಷೆಯಲ್ಲಿ ಪಾಠ ಕಲಿಸುವ ಶಾಲೆಕಾಲೇಜುಗಳು ಬೇಕು. ಆಗಲೇ ಸರಿಯಾದ ವಿಶ್ವವಿದ್ಯಾನಿಲಯ, ಇದು ಗೋಪುರ. ಭದ್ರವಾದ ತಳಹದಿಯಿಲ್ಲದೆ ಗೋಪುರ ನಿಲ್ಲಲಾರದು.

ನಾವೀಗ ರಾಜಕೀಯವಾಗಿ ಸ್ವತಂತ್ರರಾದರೂ ಪಶ್ಚಿಮ ದೇಶಗಳ ಸೂಕ್ಷ್ಮ ಅಧಿಕಾರವಿನ್ನೂ ಹೋಗಿಲ್ಲ. ಪಶ್ಚಿಮದಿಂದಲೇ ಬರಬೇಕು ಜ್ಞಾನ ಎಂದು ನಂಬಿದ ರಾಜಕಾರಣಿಗಳಿಗೆ ನಾನೇನೂ ಹೇಳಲಾರೆ. ಅಥವಾ ಪಶ್ಚಿಮದಿಂದ ಒಳ್ಳೆಯದು ಏನೂ ಬರಲಾರದು ಎಂಬುದೂ ನನಗೆ ಒಪ್ಪಿಗೆಯಿಲ್ಲ. ಈ ವಿಷಯದಲ್ಲಿ ಸರಿಯಾದ ತೀರ್ಮಾನಕ್ಕೆ ಬರಲು ನಮಗೆ ಇನ್ನೂ ಶಕ್ತಿಯಿಲ್ಲ. ರಾಜಕೀಯವಾಗಿ ಸ್ವತಂತ್ರರಾದುದರಿಂದ ಪರಭಾಷೆ, ಪರಕೀಯ ವಿಚಾರಗಳ ಪ್ರಭಾವದಿಂದ ನಾವು ಮುಕ್ತರಾಗಿಯೇ ಬಿಟ್ಟೆವು ಎಂದು ಯಾರೂ ಹೇಳಲಾರರು. ಹೊಸದಾಗಿ ವಿಶ್ವವಿದ್ಯಾನಿಲಯಗಳನ್ನು ರಚಿಸುವ ಮುನ್ನ ಸ್ವಲ್ಪ ತಡೆದು ನಿಂತು ಹೊಸದಾಗಿ ಬಂದ ನಮ್ಮ ಸ್ವಾತಂತ್ರ್ಯದ ಸ್ವಚ್ಛವಾಯುವನ್ನು ಒಳಗಡೆ ತುಂಬಿಕೊಳ್ಳುವುದಲ್ಲವೆ ನಮ್ಮ ಕರ್ತವ್ಯ? ಅದಲ್ಲವೆ ವಿವೇಕ? ವಿಶ್ವವಿದ್ಯಾನಿಲಯಕ್ಕೆ ಬೇಕಾದುದು ದೊಡ್ಡ ಕಟ್ಟಡಗಳ ಸಾಲಲ್ಲ, ಬೆಳ್ಳಿ ಬಂಗಾರದ ರಾಶಿಯಲ್ಲ. ಅದಕ್ಕೆ ಮುಖ್ಯವಾಗಿ ಬೇಕಾದುದು ಸಾರ್ವಜನಿಕಾಭಿಪ್ರಾಯದ ಬುದ್ಧಿಪೂರ್ಣ ಬೆಂಬಲ. ಅದಕ್ಕೆ ಶಿಕ್ಷಕರ ಅಪಾರ ಸಾಗರವೇ ಅಗತ್ಯ. ಅದರ ಸಂಸ್ಥಾಪಕರಿಗೆ ದೂರದೃಷ್ಟಿ ಆವಶ್ಯಕ.

ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಪ್ರಜಾರಾಜ್ಯಗಳು ಹಣವನ್ನು

ಸುರಿಯಬಾರದೆಂದು ನನ್ನ ಅಭಿಪ್ರಾಯ. ಜನರಿಗೆ ಅಗತ್ಯವಿದ್ದರೆ ಅವರೇ ಹಣವನ್ನು ಒದಗಿಸುತ್ತಾರೆ. ಹಾಗೆ ಸ್ಥಾಪಿಸಿದ ವಿಶ್ವವಿದ್ಯಾನಿಲಯಗಳು ಆ ದೇಶಕ್ಕೇ ಭೂಷಣ. ಆಡಳಿತ ಪರಕೀಯರ ಕೈಯಲ್ಲಿದ್ದಾಗ ಜನರಿಗೆ ಎಲ್ಲವೂ ಮೇಲಿನಿಂದ ಇಳಿದುಬರುತ್ತದೆ. ಅದರಿಂದ ಜನ ಪರಾವಲಂಬಿಗಳಾಗುತ್ತಾರೆ. ಪ್ರಜಾಭೀಷ್ಟದ ಆಧಾರದ ಮೇಲೆ ನಿಂತಿದ್ದರೆ ಎಲ್ಲವೂ ಕೆಳಗಿನಿಂದ ಮೇಲಕ್ಕೇರುತ್ತದೆ, ಸ್ಥಿರವಾಗಿರುತ್ತದೆ. ಅದು ಚೆಂದ, ಜನತೆಗೆ ಬಲ ನೀಡುತ್ತದೆ. ಅಂಥ ಪ್ರಜಾಸತ್ತೆಯಲ್ಲಿ ವಿದ್ಯಾಭ್ಯಾಸಕ್ಕಾಗಿ ಮಾಡಿದ ವೆಚ್ಚ ಒಂದಕ್ಕೆ ಹತ್ತರಷ್ಟು ಫಲ ಕೊಡುತ್ತದೆ, ಹಸನಾದ ಭೂಮಿಯಲ್ಲಿ ಬಿತ್ತಿದ ಬೀಜ ಸಮೃದ್ಧಿಯಾಗಿ ಬೆಳೆಯುವಂತೆ. ಪರಕೀಯರ ಪ್ರಭುತ್ವದಲ್ಲಿ ಹುಟ್ಟಿದ ವಿಶ್ವವಿದ್ಯಾನಿಲಯಗಳು ಇದಕ್ಕೆ ವಿರುದ್ಧವಾಗಿ ಹೋಗಿವೆ. ಬೇರೆ ಪರಿಣಾಮ ಸಂಭವವಲ್ಲ. ಆದುದರಿಂದ ಹೊಸದಾಗಿ ಗಳಿಸಿದ ಸ್ವಾತಂತ್ರ್ಯವನ್ನು ಜೀರ್ಣಿಸಿಕೊಳ್ಳುವ ವರೆಗೆ ಹೊಸ ವಿಶ್ವವಿದ್ಯಾನಿಲಯಗಳನ್ನು ರಚಿಸುವಾಗ ಜಾಗರೂಕರಾಗಿರಬೇಕಾದುದು ಅಗತ್ಯ. ಅದಕ್ಕೆ ಕಾರಣವಿದೆ.

ಆಮೇಲೆ ಹಿಂದೂ—ಮುಸ್ಲಿಂ ಪ್ರಶ್ನೆ. ಈ ವಿಷ ದೊಡ್ಡದಾಗಿ ವಿಪತ್ಕಾರಕವಾಗಿ ಹರಡಿದೆ. ಏನು ಅದರ ಪರಿಣಾಮವೋ ಹೇಳಲು ಸಾಧ್ಯವಿಲ್ಲ. ಒಂದು ವೇಳೆ ಅಸಂಭವವಾದುದು ನಡೆದೇ ಹೋಗಿ ಭಾರತದಲ್ಲಿ ಒಬ್ಬ ಮುಸಲ್ಮಾನನೂ, ಪಾಕಿಸ್ತಾನದಲ್ಲಿ ಒಬ್ಬ ಹಿಂದೂ ಸಿಕ್ ವ್ಯಕ್ತಿಯೂ ಮರ್ಯಾದೆಯಾಗಿ ಕ್ಷೇಮವಾಗಿ ಇರಲು ಸಾಧ್ಯವಿಲ್ಲವೆನ್ನಿ. ಆಗ ನಮ್ಮ ಶಿಕ್ಷಣ ವಿಷಮವಾಗುತ್ತದೆ. ಹಾಗಲ್ಲದೆ ಹಿಂದೂಗಳು ಮುಸ್ಲಿಮರು ಉಳಿದ ಎಲ್ಲಾ ಮತಗಳವರೂ ಭಾರತದಲ್ಲಿ ಸುಕ್ಷೇಮವಾಗಿ ಮರ್ಯಾದೆಯಿಂದ ಬಾಳುವ ಹಾಗಾದರೆ ನಮ್ಮ ಶಿಕ್ಷಣದ ಸ್ವರೂಪವೇ ಬೇರೆಯಾಗಿ ಪ್ರಸನ್ನ ಗುಣದ್ದಾಗುತ್ತದೆ. ಬೇರೆ ಬೇರೆ ಮತಗಳ ಜನರು ಸ್ನೇಹದಿಂದ ಕೂಡಿ ಬಾಳಿ ಒಂದು ಸುಂದರ ಸಂಸ್ಕೃತಿ ರಸಾಯನವನ್ನು ನಿರ್ಮಿಸಿದ್ದಾರೆ; ಅದನ್ನು ಸ್ಥಿರಗೊಳಿಸಿ, ಅದರ ರೂಪನ್ನು ಇನ್ನಷ್ಟು ದೃಢಗೊಳಿಸೋಣ. ಇಲ್ಲವೆ, ಹಿಂದುಸ್ತಾನದಲ್ಲಿ ಒಂದೇ ಮತವಿದ್ದ ಕಾಲವನ್ನು ಗುರುತಿಸಿ. ಆ ಏಕಮೇವ ಸಂಸ್ಕೃತಿಗೆ ಹಿಂದಿರುಗೋಣ. ಅಂಥ ಐತಿಹಾಸಿಕ ಕಾಲ ಯಾವುದೂ ನಮಗೆ ಸಿಗಲಿಕ್ಕಿಲ್ಲ. ಒಂದು ವೇಳೆ ಸಿಕ್ಕರೆ, ನಾವು ಹಿಂದಿರುಗಿದರೆ, ನಮ್ಮ ಸಂಸ್ಕೃತಿಯನ್ನು ಆ ವಿಕಾರ ಕಾಲಕ್ಕೆ ತಳ್ಳಿ ಇಡೀ ವಿಶ್ವದ ಶಾಪವನ್ನು ಪಡೆದೇವು. ಉದಾಹರಣೆಗೆ, ಮುಸ್ಲಿಮರ ಕಾಲವನ್ನೇ ಅಳಿಸಿಹಾಕುವ ವ್ಯರ್ಥ ಪ್ರಯತ್ನ

ಮಾಡಿದರೆ, ಇಡೀ ಜಗತ್ತಿನಲ್ಲೇ ಅದ್ವಿತೀಯವಾದ ಡಿಲ್ಲಿಯ ಜುಮ್ಮಾ ಮಸೀದಿಯನ್ನು ಮರೆಯಬೇಕು, ಅಲಿಗಡದ ಮುಸ್ಲಿಂ ವಿಶ್ವವಿದ್ಯಾನಿಲಯ, ಮೊಗಲರ ಕಾಲದಲ್ಲಿ ಕಟ್ಟಿದ ಜಗತ್ತಿನ ಏಳು ಅದ್ಭುತಗಳಲ್ಲಿ ಒಂದಾದ ಆಗ್ರಾದ ತಾಜ ಮಹಾಲು, ಎಲ್ಲವನ್ನೂ ಮರೆಯಬೇಕು. ಹಾಗೆ ನಮ್ಮ ಇತಿಹಾಸವನ್ನು ತಿದ್ದಿ ಬರೆಯಬೇಕಾದೀತು. ಭಿನ್ನ ಭಿನ್ನ ಮಾರ್ಗಗಳಲ್ಲಿ ಯಾವುದು ಸರಿ ಎಂದು ಆರಿಸಿಕೊಳ್ಳಲು ಈಗ ವಾತಾವರಣ ಚೆನ್ನಾಗಿಲ್ಲ. ನಮ್ಮ ಸ್ವಾತಂತ್ರ್ಯ ಇನ್ನೂ ಎರಡು ತಿಂಗಳದು. ಒಂದು ಸ್ವರೂಪ ಪಡೆಯಲು ಪ್ರಯತ್ನಿಸುತ್ತಿದೆ. ಯಾವ ರೂಪು ತಳೆದೀತೋ ನಮಗೆ ತಿಳಿಯದು. ನಮಗೆ ಇದು ಖಚಿತವಾಗಿ ತಿಳಿಯುವವರೆಗೆ ಈಗಿರುವ ವಿಶ್ವವಿದ್ಯಾನಿಲಯಗಳಲ್ಲಿಯೆ ಸಾಧ್ಯವಿದ್ದ ಪರಿವರ್ತನೆಮಾಡಿ, ನಮ್ಮ ಶಿಕ್ಷಣ ಸಂಸ್ಥೆಗಳಲ್ಲಿ ಸ್ವಾತಂತ್ರ್ಯ ರಸವನ್ನು ತುಂಬಿದರೆ ಸಾಕು. ಅದರಿಂದ ಬರುವ ಅನುಭವ ಹೊಸ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸುವ ಕಾಲ ಬಂದಾಗ ನಮಗೆ ನೆರವಾದೀತು.

ಆದುದರಿಂದ ಹೊಸ ವಿಶ್ವವಿದ್ಯಾನಿಲಯಗಳ ಸ್ಥಾಪನೆಯ ಬಗ್ಗೆ ವಿವೇಕ ಪೂರ್ಣ ವಿಳಂಬ ಅಗತ್ಯವೆಂದು ಶಿಕ್ಷಣ ಪಂಡಿತರೆಲ್ಲರೂ ನಿರ್ಧಾರಕ್ಕೆ ಬಂದಾರೆಂದು ಆಶಿಸುತ್ತೇನೆ.೭೮

## ಧಾರ್ಮಿಕ ಶಿಕ್ಷಣ

ಧಾರ್ಮಿಕ ಶಿಕ್ಷಣದ ಪ್ರಶ್ನೆ ಬಹಳ ಕ್ಲಿಷ್ಟವಾದುದು. ಅದನ್ನು ಕೈಬಿಟ್ಟು ಸಾಗಲಾರೆವು. ಹಿಂದುಸ್ಥಾನ ಎಂದಿಗೂ ನಿರೀಶ್ವರವಾಗದು. ಶುದ್ಧ ನಾಸ್ತಿಕತೆ ಈ ದೇಶದಲ್ಲಿ ಬದುಕದು. ಈ ಕೆಲಸ ತುಂಬಾ ಕಷ್ಟತರ. ಧಾರ್ಮಿಕ ಶಿಕ್ಷಣದ ವಿಷಯವನ್ನು ಆಲೋಚಿಸಿದ ಕೂಡಲೆ ನನ್ನ ತಲೆ ಸುತ್ತುತ್ತದೆ. ನಮ್ಮ ಧರ್ಮೋಪದೇಶಗಳು ಕಪಟಿಗಳು, ಸ್ವಾರ್ಥಿಗಳು, ಅವರನ್ನು ಹಿಡಿದು ನೋಡಬೇಕು, ಮುಲ್ಲಾಗಳು, ದಸ್ತೂರರು, ಬ್ರಾಹ್ಮಣರು, ಇವರ ಕೈಯಲ್ಲಿದೆ ಬೀಗದ ಕೈ. ಅವರಿಗೆ ಒಳ್ಳೆಯ ಬುದ್ಧಿ ಬರದಿದ್ದರೆ ಇಂಗ್ಲೀಷು ವಿದ್ಯಾಭ್ಯಾಸದಿಂದ ನಮಗೆ ಬಂದ ಶಕ್ತಿಯನ್ನು ಧಾರ್ಮಿಕ ಶಿಕ್ಷಣಕ್ಕೆ ಉಪಯೋಗಿಸಬೇಕಾದೀತು. ಇದೇನು ಕಷ್ಟವಲ್ಲ, ಸಮುದ್ರದ ಅಂಚು ಮಾತ್ರ ಸ್ವಲ್ಪ ಅಪವಿತ್ರವಾಗಿದೆ. ಅಲ್ಲಿರುವವರನ್ನು ಮಾತ್ರ ಶುದ್ಧಿಮಾಡಬೇಕಾಗಿದೆ. ಈ ಮಾತು ಜನಕೋಟಿಗಲ್ಲ, ನಮಗೇ ನಮ್ಮನ್ನು ನಾವೇ ಶುದ್ಧಮಾಡಿಕೊಳ್ಳಬಹುದು. ಹಿಂದುಸ್ಥಾನವನ್ನು ಹಿಂದಿನ

ಸ್ಥಿತಿಗೆ ಒಯ್ಯಬೇಕು ಎಂದರೆ ನಾವು ಮೊದಲು ಪೂರ್ವಸ್ಥಿತಿಗೆ ತಿರುಗಬೇಕು. ೭೯

ಧರ್ಮ ಎಂದರೆ ನನಗೆ ಸತ್ಯ, ಅಹಿಂಸೆ, ಅಥವಾ ಸತ್ಯವೊಂದೇ, ಏಕೆಂದರೆ ಸತ್ಯದಲ್ಲಿ ಅಹಿಂಸೆ ಸೇರಿದೆ. ಸತ್ಯಶೋಧನೆಗೆ. ಅಹಿಂಸೆ ಅತ್ಯಗತ್ಯ, ಅನಿವಾರ್ಯ ಮಾರ್ಗ. ಆದ್ದರಿಂದ ಈ ಸದ್ಗುಣಗಳನ್ನು ಬೆಳೆಸುವುದು ಏನೇ ಆದರೂ ಧಾರ್ಮಿಕ ಶಿಕ್ಷಣಕ್ಕೆ ಸಾಧನ. ಇದನ್ನು ಮಾಡಲು ಉತ್ತಮೋಪಾಯ ಶಿಕ್ಷಕರು ಈ ಗುಣಗಳನ್ನು ತಮ್ಮ ಜೀವನಲ್ಲಿ ಬಲವಾಗಿ ಅಭ್ಯಾಸಮಾಡುವುದು. ಆಗ ಅವರು ಹುಡುಗರೊಡನೆ ಸಂಪರ್ಕ ಬೆಳೆಸಿದರೆ, ಆಟದ ಮೈದಾನದಲ್ಲಾಗಲಿ ತರಗತಿಯ ಕೋಣೆಯಲ್ಲಾಗಲಿ, ವಿದ್ಯಾರ್ಥಿಗಳಿಗೆ ಮೌಲಿಕ ಸದ್ಗುಣಗಳ ಶಿಕ್ಷಣ ದೊರೆಯುತ್ತದೆ.

ಧರ್ಮದ ಸರ್ವಸಾಮಾನ್ಯ ತತ್ತ್ವಗಳ ಶಿಕ್ಷಣದ ಬಗೆ ಇಷ್ಟು. ಧಾರ್ಮಿಕ ಶಿಕ್ಷಣದ ಪಾಠ ಕ್ರಮದಲ್ಲಿ ತನ್ನವಲ್ಲದೆ ಬೇರೆ ಮತ–ಪಂಥಗಳ ಸಿದ್ಧಾಂತಗಳ ಅಭ್ಯಾಸವೂ ಸೇರಬೇಕು. ಇದಕ್ಕಾಗಿ ಜಗತ್ತಿನ ನಾನಾ ಧರ್ಮಪಂಥಗಳನ್ನು ಅರಿತು ಅರ್ಥಮಾಡಿಕೊಂಡು ಅದರ ಭಾವದಿಂದ ಕಾಣುವ ವಿಶಾಲ ಮನಸ್ಸಿನಿಂದ ನೋಡುವ ರೂಢಿಯನ್ನು ವಿದ್ಯಾರ್ಥಿಗಳಿಗೆ ಮೊದಲಿನಿಂದಲೇ ಬಿತ್ತಬೇಕು, ಇದನ್ನು ಸರಿಯಾಗಿ ಮಾಡಿದರೆ ಅದರಲ್ಲಿ ಆಧ್ಯಾತ್ಮಿಕ ವಿಶ್ವಾಸವೂ ತಮ್ಮ ಧರ್ಮ ದಲ್ಲಿ ಹೆಚ್ಚು ನಂಬಿಕೆಯೂ ಹುಟ್ಟುತ್ತದೆ. ಎಲ್ಲಾ ಧರ್ಮಗಳನ್ನೂ ಅಧ್ಯಯನ ಮಾಡುವಾಗ ಒಂದು ಸೂತ್ರವನ್ನು ನೆನಪಿಡುವುದು ಅಗತ್ಯ. ಆಯಾ ಧರ್ಮ ಪಂಥದ ಅನುಯಾಯಿಗಳು ಬರೆದ ಗ್ರಂಥಗಳ ಮೂಲಕವೇ ಆಯಾ ಧರ್ಮವನ್ನು ಅರ್ಥಮಾಡಿಕೊಳ್ಳಬೇಕು. ಉದಾಹರಣೆ, ಭಾಗವತವನ್ನು ಓದಬೇಕೆನ್ನುವವರು ತದ್ವಿರುದ್ಧವಾಗಿ ಟೀಕೆ ಮಾಡಿ ಬರೆದ ಭಾಷಾಂತರವನ್ನು ಓದಬಾರದು, ಭಾಗವ ಪ್ರೇಮಿ ಬರೆದುದನ್ನು ಅಧ್ಯಯನ ಮಾಡಬೇಕು. ಬೈಬಲನ್ನು ಶ್ರದ್ಧಾವಂತ ಕ್ರಿಸ್ತಾನರು ಬರೆದ ವ್ಯಾಖ್ಯಾನಗಳ ಮೂಲಕ ಅಧ್ಯಯನ ಮಾಡಬೇಕು, ತನ್ನ ದಲ್ಲದೆ ಬೇರೆ ಧರ್ಮ ಪಂಥಗಳ ಅಧ್ಯಯನವನ್ನೂ ಮಾಡಿದರೆ ಸರ್ವಧರ್ಮಗಳೂ ಮೂಲತಃ ಒಂದೇ ಎಂಬುದನ್ನೂ, ಇವೆಲ್ಲ ಮತ ಪಂಥಗಳನ್ನು ಮೀರಿ ಇರುವ ಪರಮತತ್ತ್ವದ ಸ್ವರೂಪವನ್ನೂ ಅರಿಯಬಹುದು.

ಭಕ್ತಿಯಿಂದ ಇತರ ಧರ್ಮಗಳನ್ನು ಅಧ್ಯಯನ ಮಾಡಿದರೆ ತಮ್ಮ ಧರ್ಮ ದಲ್ಲಿ ಶ್ರದ್ಧೆ ಕಡಮೆಯಾದೀತೆಂದು ಯಾರೂ ಒಂದು ಗಳಿಗೆಯಾದರೂ ಭಯಪಡ ಬೇಕಾದ್ದಿಲ್ಲ. ಎಲ್ಲ ಧರ್ಮಗಳಲ್ಲೂ ಸತ್ಯದ ಅಂಶ ಇವೆ, ಎಲ್ಲವನ್ನೂ ಭಕ್ತಿ ಆದರ

ಗಳಿಂದ ಕಾಣಬೇಕು ಎಂದು ವಿಧಿಸಿದೆ ಹಿಂದೂ ಧರ್ಮ. ಇದಕ್ಕೆ ಪೂರ್ವಭಾವಿಯಾಗಿ ತನ್ನ ಧರ್ಮದಲ್ಲಿ ಶ್ರದ್ಧೆಯಿರಬೇಕು ಎಂದು ಭಾವ. ಆ ಶ್ರದ್ಧೆಯನ್ನು ಇತರ ಧರ್ಮಗಳ ಅಧ್ಯಯನ– ಆದರ ಕೆಡಿಸಬೇಕಾಗಿಲ್ಲ. ತನ್ನ ಧರ್ಮದಲ್ಲಿರುವ ಆದರವನ್ನೆ ಇತರ ಧರ್ಮಗಳಿಗೂ ವಿಸ್ತರಿಸಿದಂತೆ.

ಈ ವಿಷಯದಲ್ಲಿ ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸುವವನು ಇತರ ಸಂಸ್ಕೃತಿಗಳನ್ನು ತಿರಸ್ಕರಿಸಬೇಕಾದ್ದಿಲ್ಲ. ಉಳಿದ ಸಂಸ್ಕೃತಿಗಳಲ್ಲಿ ಉತ್ತಮವಾದುದನ್ನು ಗ್ರಹಿಸಬೇಕು. ಧರ್ಮಗಳ ವಿಷಯವೂ ಹಾಗೆಯೆ.೮೦

## ೨

ಒಬ್ಬ ಮುಸ್ಲಿಂ ಸ್ನೇಹಿತ ಹೀಗೆ ಬರೆದಿದಾನೆ :

'ನಾಲ್ಕು ತಿಂಗಳಿಂದ ಉರ್ದು ಪತ್ರಿಕೆಗಳಲ್ಲಿ ವರ್ಧಾಯೋಜನೆಯು ಬಗ್ಗೆ ಅಭಿಪ್ರಾಯಗಳು ಪ್ರಕಟವಾಗುತ್ತಿವೆ. ಎಂದಿನಂತೆಯೆ ಯಾರೂ ವರದಿಯನ್ನು ಎಚ್ಚರಿಕೆಯಿಂದ ಓದಿಲ್ಲ, ಮೂಲಶಿಕ್ಷಣದ ಬಗ್ಗೆ ಆಲೋಚನೆ ಮಾಡಿಯೂ ಇಲ್ಲ. ಮೂರು ಮಾತಿನ ಬಗ್ಗೆ ವಿರೋಧ ಕಂಡಿದೆ. ೧) ಧಾರ್ಮಿಕ ಶಿಕ್ಷಣವನ್ನು ಪೂರಾ ಕೈಬಿಟ್ಟಿದಾರೆ. ೨) ಹುಡುಗ ಹುಡುಗಿಯರಿಬ್ಬರಿಗೂ ಒಟ್ಟಿಗೆ ಶಿಕ್ಷಣ ಕೊಡುತ್ತಾರೆ. ೩) ಎಲ್ಲಾ ಧರ್ಮಗಳಿಗೂ ಗೌರವ ತೋರಿಸಲು ಹೇಳಿಕೊಡುತ್ತಾರೆ. ಈ ಆಕ್ಷೇಪಣೆಗಳನ್ನು ಉರ್ದು ಪತ್ರಿಕೆಗಳಿಂದ ಸಂಗ್ರಹಿಸಿದೆ.'

ಮತೀಯ ಶಿಕ್ಷಣವನ್ನು ಉದ್ದೇಶಪೂರ್ವಕವಾಗಿಯೇ ಕೈಬಿಟ್ಟಿದೇವೆ. ರಾಜ್ಯಕ್ಕೇ ಒಂದು ಧರ್ಮವಿದ್ದ ಹೊರತು ಧಾರ್ಮಿಕ ಶಿಕ್ಷಣ ಕೊಡುವುದು ಅಸಾಧ್ಯವಲ್ಲದಿದ್ದರೂ ದುಸ್ಸಾಧ್ಯ. ಎಲ್ಲಾ ಮತಗಳವರಿಗೂ ಕೊಡಬೇಕಲ್ಲ. ಅದನ್ನು ಮನೆಯಲ್ಲಿ ಕೊಡುವುದೇ ಉತ್ತಮ. ಮನೆಯಲ್ಲೋ ಬೇರೆಡೆಯಲ್ಲೋ ಈ ಶಿಕ್ಷಣ ಪಡೆಯಲು ಮಕ್ಕಳಿಗೆ ಸಾಕಷ್ಟು ಕಾಲವನ್ನು ಕೊಡಬೇಕು. ತಮ್ಮ ಮಕ್ಕಳಿಗೆ ಶಾಲೆಯಲ್ಲಿ ತಮ್ಮ ಮತ ಶಿಕ್ಷಣವನ್ನು ಕೊಡಬಯಸಿ, ಅದರ ವೆಚ್ಚವನ್ನು ಆ ಮತೀಯರು ಹೊರುವುದಾದರೆ, ರಾಜ್ಯವು ಅವರಿಗೆ ಅನುಕೂಲ ಮಾಡಿಕೊಡಬಹುದು.

ಸಹಶಿಕ್ಷಣವನ್ನು ಝಾಕಿರ್ ಹುಸೇನ್ ಸಮಿತಿಯವರು ಒತ್ತಾಯ ಮಾಡಿಲ್ಲ. ಹುಡುಗಿಯರಿಗೇ ಬೇರೆ ಶಾಲೆ ಬೇಕು ಎಂಬ ಕಡೆ ರಾಜ್ಯ ಅದನ್ನು ಒದಗಿಸಬೇಕು. ಸಹಶಿಕ್ಷಣದ ಪ್ರಶ್ನೆಯನ್ನು ಹಾಗೆಯೇ ಬಿಟ್ಟಿದೆ. ಕಾಲಾನುಗುಣವಾಗಿ ಅದು ತಾನೇ ಪರಿಹಾರವಾಗುತ್ತದೆ. ನನಗೆ ತಿಳಿದಮಟ್ಟಿಗೆ ಸಮಿ

ತಿಯ ಸದಸ್ಯರಲ್ಲಿ ಈ ಬಗ್ಗೆ ಏಕಾಭಿಪ್ರಾಯವಿರಲಿಲ್ಲ. ನನಗೆ ಮುಕ್ತ ಮನಸ್ಸು. ಸಹಶಿಕ್ಷಣ ಸರಿ ಎನ್ನಲೂ ಬಲವಾದ ಕಾರಣಗಳಿವೆ; ತಪ್ಪು ಎನ್ನಲೂ ಇವೆ. ಈ ಪ್ರಯೋಗವನ್ನು ಎಲ್ಲಾದರೂ ಮಾಡಿದರೆ ನಾನು ವಿರೋಧಿಸೆ.

ಎಲ್ಲ ಧರ್ಮಗಳಿಗೂ ಸಮಾನ ಗೌರವ ತೋರಲು ಕಲಿಸುತ್ತೀರಿ ಎಂಬು ದರ ಬಗ್ಗೆ ನನಗೆ ದೃಢವಾದ ಅಭಿಪ್ರಾಯವಿದೆ. ಆ ಸಂತೋಷ ಸಮಯ ಬರುವವರೆಗೆ ಬೇರೆಬೇರೆ ಮತಗಳಲ್ಲಿ ಐಕಮತ್ಯದ ಸಂಭವ ಕಾಣಬಾರದು. ತಮ್ಮ ಮತವೇ ಎಲ್ಲಕ್ಕಿಂತ ಶ್ರೇಷ್ಠವೆಂದಾಗಲಿ, ತಮ್ಮದೊಂದೇ ಸತ್ಯವಾದ ಮತ ವೆಂದಾಗಲಿ ಮಕ್ಕಳಿಗೆ ಹೇಳಿಕೊಟ್ಟರೆ, ಭಿನ್ನ ಭಿನ್ನ ಮತಗಳ ಮಕ್ಕಳ ನಡುವೆ ಗೆಳೆತನ ಬೆಳೆಯಲು ಬಾಧಕವಾಗುತ್ತದೆ ಎಂದು ನನಗನಿಸುತ್ತದೆ. ಈ ಪ್ರತ್ಯೇ-ಕತಾ ಭಾವ ದೇಶದಲ್ಲಿ ಹರಡಿದರೆ ಪ್ರತಿಯೊಂದು ಮತದವರಿಗೂ ಒಂದು ಬೇರೆ ಶಾಲೆ, ಅಲ್ಲಿ ಅನ್ಯಮತಗಳನ್ನು ಅವರು ಬೇಕಾದ ಹಾಗೆ ಹಳಿಯಬಹುದು ಎಂದಾದರೂ ಆಗಬೇಕು. ಇಲ್ಲವೆ ಮತ-ಧರ್ಮಗಳ ಮಾತನ್ನೇ ನಿಷೇಧಿಸ ಬೇಕು. ಬೇರೆ ದಾರಿಯಿಲ್ಲ. ಈ ಭಯಂಕರ ಧೋರಣೆಯ ಫಲವೇನಾದೀತೋ ಊಹಿಸಲೂ ಅಂಜಿಕೆಯಾಗುತ್ತದೆ. ನೀತಿಧರ್ಮ ಎಲ್ಲಾ ಮತಪಂಥಗಳಿಗೂ ಸಾಮಾನ್ಯ. ಮಕ್ಕಳಿಗೆ ಇದನ್ನು ಕಲಿಸಬೇಕು. ಅದೇ ಧಾರ್ಮಿಕ ಶಿಕ್ಷಣ ವರ್ಧಾಯೋಜನೆಯ ಶಾಲೆಗಳಲ್ಲಿ ಎಂದು ತಿಳಿಯಬೇಕು.[೮೧]

## ನನ್ನ ಸಮ್ಮತಿ

ಶಿಕ್ಷಣದ ಬಗ್ಗೆ ನನಗೆ ಸಮ್ಮತವಾದುದು ಇಷ್ಟು:

### ಪ್ರಥಮ ಕಾಲ

೧. ಹುಡುಗರಿಗೂ ಹುಡುಗಿಯರಿಗೂ ಒಟ್ಟಿಗೆ ಶಿಕ್ಷಣ ಕೊಡಬೇಕು. ಎಂಟು ವರ್ಷದವರೆಗೆ ಬಾಲ್ಯ.

೨. ಅವರ ಕಾಲ ಮುಖ್ಯವಾಗಿ ಶಾರೀರಕ ಕೆಲಸದಲ್ಲಿ ಕಳೆಯಬೇಕು. ಈ ಕೆಲಸವೂ ಶಿಕ್ಷಕನ ಮೇಲ್ವಿಚಾರಣೆಯಲ್ಲಿ ನಡೆಯಬೇಕು. ಶಾರೀರಕ ಕೆಲಸವನ್ನು ಶಿಕ್ಷಣದ ಅಂಗವೆಂದು ತಿಳಿಯಬೇಕು.

೩. ಪ್ರತಿಯೊಬ್ಬ ಹುಡುಗನ, ಹುಡುಗಿಯ ರುಚಿಯನ್ನು ಅರಿತು ಅವರಿಗೆ ಕೆಲಸವನ್ನು ವಹಿಸಬೇಕು.

೪. ಪ್ರತಿಯೊಂದು ಕೆಲಸವನ್ನೂ ಕೈಗೊಳ್ಳುವಾಗ ಅದಕ್ಕೆ ಕಾರಣವನ್ನು ತಿಳಿಸಿ ಹೇಳಬೇಕು.

೫. ಹುಡುಗರು ಅಥವಾ ಹುಡುಗಿ ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದಾಗಿನಿಂದ ಅವರಿಗೆ ಸಾಧಾರಣ ಜ್ಞಾನವನ್ನು ಕೊಡಬೇಕು. ಈ ಜ್ಞಾನ ಅಕ್ಷರ ಜ್ಞಾನದಿಂದ ಮೊದಲಾಗಬೇಕು.

೬. ಅಕ್ಷರಜ್ಞಾನ ಅಥವಾ ಸುಂದರ ಲೇಖನ ಕಲೆಯ ಅಂಗ ಎಂದರಿತು ಮೊಟ್ಟಮೊದಲು ಮಕ್ಕಳಿಗೆ ರೇಖಾಗಣಿತದ ಆಕೃತಿಗಳನ್ನು ಬರೆಯುವುದನ್ನು ಕಲಿಸಬೇಕು. ಅವರ ಬೆರಳು ಅವರಿಗೆ ಸ್ವಾಧೀನವಾಗಬೇಕು. ಆಮೇಲೆ ಅವರಿಗೆ ವರ್ಣಮಾಲೆ ಬರೆಯಲು ಕಲಿಸಬೇಕು. ಎಂದರೆ, ಮೊದಲಿನಿಂದಲೂ ಅವರಿಗೆ ಶುದ್ಧ ಅಕ್ಷರ ಬರೆಯಲು ಕಲಿಸಬೇಕು.

೭. ಬರೆಯುವುದಕ್ಕೆ ಮೊದಲು ಮಗು ಓದಲು ಕಲಿಯಲಿ. ಅಕ್ಷರಗಳನ್ನು ಚಿತ್ರಗಳೆಂದು ತಿಳಿದು ಅವನ್ನು ಗುರುತಿಸಲು ಕಲಿಯಲಿ.

೮. ಹೀಗೆ ಶಿಕ್ಷಕನ ಮುಖದಿಂದ ಜ್ಞಾನಪಡೆದ ಹುಡುಗ ಎಂಟು ವರ್ಷದೊಳಗಾಗಿಯೆ ತನ್ನ ಶಕ್ತಿಗೆ ಅನುಸಾರ ಸಾಕಷ್ಟು ಜ್ಞಾನ ಪಡೆಯುತ್ತಾನೆ

೯. ಮಕ್ಕಳಿಗೆ ಬಲಾತ್ಕಾರವಾಗಿ ಏನನ್ನೂ ಕಲಿಸಬಾರದು.

೧೦. ಅವರು ಕಲಿಯುವುದರಲ್ಲಿ ಅವರಿಗೆ ರುಚಿ ಎನಿಸಬೇಕು.

೧೧. ಮಕ್ಕಳಿಗೆ ಆಟ ಎನಿಸಬೇಕು ಶಿಕ್ಷಣ. ಆಟ–ಓಟಗಳೂ ಶಿಕ್ಷಣದ ಅಂಗವೇ.

೧೨. ಮಕ್ಕಳ ಶಿಕ್ಷಣ ಸಮಸ್ತವೂ ತಾಯಿ ನುಡಿಯಲ್ಲೇ ನಡೆಯಬೇಕು.

೧೩. ರಾಷ್ಟ್ರಭಾಷೆಯೆಂಬ ದೃಷ್ಟಿಯಿಂದ ಮಕ್ಕಳಿಗೆ ಹಿಂದೀ ಜ್ಞಾನ ಮಾಡಿಕೊಡಬೇಕು. ಅಕ್ಷರ ಜ್ಞಾನಕ್ಕೆ ಮೊದಲೇ ಅದು ಆರಂಭವಾಗಬೇಕು.

೧೪. ಧಾರ್ಮಿಕ ಶಿಕ್ಷಣ ಅಗತ್ಯವೆಂದು ತಿಳಿಯಬೇಕು. ಪುಸ್ತಕದ ಮೂಲಕವಲ್ಲ, ಶಿಕ್ಷಕನ ಆಚರಣೆಯ ಮೂಲಕ ಹಾಗೂ ಶಿಕ್ಷಕನ ಮುಖದಿಂದ ಅದು ದೊರೆಯಬೇಕು.

## ದ್ವಿತೀಯ ಕಾಲ

೧೫. ಒಂಭತ್ತರಿಂದ ಹದಿನಾರರವರೆಗೆ ಎರಡನೆ ಕಾಲ.

೧೬. ಎರಡನೆ ಕಾಲದಲ್ಲೂ ಕೊನೆಯವರೆಗೂ ಹುಡುಗರಿಗೂ ಹುಡುಗಿ

ಯರಿಗೂ ಒಟ್ಟಿಗೆ ಶಿಕ್ಷಣಕೊಟ್ಟರೆ ಒಳ್ಳೆಯದು.

೧೭. ಎರಡನೆ ಕಾಲದಲ್ಲಿ ಹಿಂದೂ ಹುಡುಗರಿಗೆ ಸಂಸ್ಕೃತಜ್ಞಾನ, ಮುಸಲ್ಮಾನರಿಗೆ ಅರಬ್ಬೀಜ್ಞಾನ ದೊರೆಯಬೇಕು.

೧೮. ಈ ಕಾಲದಲ್ಲೂ ಶಾರೀರಕ ಕೆಲಸ ನಡೆದೇ ಇರುತ್ತದೆ. ಓದು ಬರೆಹದ ಸಮಯವನ್ನು ಅಗತ್ಯವಿದ್ದಂತೆ ಬೆಳೆಸಬೇಕು.

೧೯. ತಂದೆ ತಾಯಿಗಳ ವೃತ್ತಿ ನಿಶ್ಚಿತವಾದುದು ಎನಿಸಿದರೆ, ಈ ಕಾಲದಲ್ಲಿ ಹುಡುಗನಿಗೆ ಆ ವೃತ್ತಿಯ ಜ್ಞಾನ ದೊರೆಯಬೇಕು. ತನ್ನ ತಂದೆ ತಾತಂದಿರು ನಡಸಿದ ವೃತ್ತಿಯನ್ನೆ ತಾನೂ ನಡಸಲು ಇಷ್ಟಪಡುವಂತೆ ಅವನನ್ನು ಅಣಿಮಾಡಬೇಕು. ಈ ನಿಯಮ ಹುಡುಗಿಗೆ ಅನ್ವಯಿಸದು.

೨೦. ಹದಿನಾರು ವರ್ಷದೊಳಗಾಗಿ ಹುಡುಗ–ಹುಡುಗಿಯರಿಗೆ ಜಗತ್ತಿನ ಇತಿಹಾಸ, ಭೂಗೋಳ, ವನಸ್ಪತಿಶಾಸ್ತ್ರ, ಜ್ಯೋತಿಷ, ಗಣಿತ, ರೇಖಾಗಣಿತ, ಬೀಜಗಣಿತಗಳ ಸಾಧಾರಣ ಜ್ಞಾನ ಆಗಬೇಕು.

೨೧. ಹದಿನಾರು ವರ್ಷದ ಹುಡುಗ–ಹುಡುಗಿಯರಿಗೆ ಹೊಲಿಗೆ, ಅಡಿಗೆ ಎರಡೂ ಬರಬೇಕು.

## ತೃತೀಯ ಕಾಲ

೨೨. ಹದಿನಾರರಿಂದ ಇಪ್ಪತ್ತೈದು ವರ್ಷದವರೆಗೆ ಮೂರನೆ ಕಾಲ. ಆ ಕಾಲದಲ್ಲಿ ಪ್ರತಿಯೊಬ್ಬ ಯುವಕನಿಗೂ ಅವರವರ ಇಚ್ಛೆ–ಸ್ಥಿತಿಗಳಿಗೆ ಅನುಸಾರವಾಗಿ ಶಿಕ್ಷಣ ದೊರೆಯಬೇಕು.

೨೩. ಒಂಭತ್ತು ವರ್ಷದ ತರುವಾಯ ಆರಂಭವಾಗುವ ಶಿಕ್ಷಣ ಸ್ವಾವಲಂಬಿಯಾಗಬೇಕು. ವಿದ್ಯಾರ್ಥಿ ಅಭ್ಯಾಸ ಮಾಡುವಾಗಲೇ ಶಾಲೆಯ ವೆಚ್ಚಕ್ಕೆ ಸಾಲುವಷ್ಟು ವರಮಾನ ಬರುವ ಉದ್ಯೋಗವನ್ನು ಮಾಡಬೇಕು.

೨೪. ಶಾಲೆಯಲ್ಲಿ ಮೊದಲಿನಿಂದಲೂ ವರಮಾನ ಬರಬೇಕು, ಆದರೆ ಪ್ರಾರಂಭದ ವರ್ಷಗಳಲ್ಲಿ ವೆಚ್ಚ, ಪೂರಾ ನಡೆಯುವಷ್ಟು ವರಮಾನ ಬರಲಿಕ್ಕಿಲ್ಲ.

೨೫. ಶಿಕ್ಷಕರಿಗೆ ಭಾರಿಭಾರಿ ಸಂಬಳ ಸಿಗದು, ಆದರೂ ಅವರು ಉಪಜೀವನ ಮಾಡುವಷ್ಟು ಯೋಗ್ಯರಾಗಬೇಕು. ಶಿಕ್ಷಕನಿಗೆ ಸೇವಾಭಾವನೆಯಿರಬೇಕು. ಪ್ರಾಥಮಿಕ ಶಿಕ್ಷಣವನ್ನು ಎಂಥ ಶಿಕ್ಷಕನಿಂದಾದರೂ ಮಾಡಿಸುವ ರೂಢಿ ನಿಂದನೀಯ. ಎಲ್ಲಾ ಶಿಕ್ಷಕರೂ ಗುಣವಂತರೂ ಚಾರಿತ್ರ್ಯವಂತರೂ

ಆಗಬೇಕು.

೨೬. ಶಿಕ್ಷಣಕ್ಕೆ ಬಹಳ ಹಣ ವೆಚ್ಚಮಾಡಿ ಕಟ್ಟಿದ ಭಾರಿ ಕಟ್ಟಡಗಳು ಅಗತ್ಯವಿಲ್ಲ.

೨೭. ಇಂಗ್ಲೀಷನ್ನು ಒಂದು ಭಾಷೆಯೆಂದು ಕಲಿಯಬೇಕು. ಅದಕ್ಕೆ ಪಾಠಕ್ರಮದಲ್ಲಿ ಸ್ಥಾನವಿರಬೇಕು, ಹಿಂದೀ ರಾಷ್ಟ್ರಭಾಷೆಯಿದ್ದ ಹಾಗೆ ಇತರ ರಾಷ್ಟ್ರಗಳೊಡನೆ ವ್ಯವಹಾರ – ವ್ಯಾಪಾರಗಳಿಗೆ ಇಂಗ್ಲೀಷು.

## ಸ್ತ್ರೀ ಶಿಕ್ಷಣ

೨೮. ಹೆಂಗಸರಿಗೆ ವಿಶೇಷ ಶಿಕ್ಷಣ ಹೇಗೆ ಮೊದಲಾಗಬೇಕೋ ಎಲ್ಲಿ ಮೊದಲಾಗಬೇಕೋ ನಾನು ಆಲೋಚಿಸಿದೇನೆ, ಬರೆದೂ ಇದೇನೆ. ಆದರೂ ಇದರ ಬಗ್ಗೆ ಯಾವುದೊಂದು ನಿಶ್ಚಯಕ್ಕೆ ಮುಟ್ಟಿಲ್ಲ. ಗಂಡಸಿಗೆ ಸಿಗುವಷ್ಟು ಸೌಕರ್ಯ ಹೆಂಗಸಿಗೂ ಸಿಗಬೇಕು; ಇದು ನನ್ನ ದೃಢಾಭಿಪ್ರಾಯ. ವಿಶೇಷ ಸೌಕರ್ಯ ಅಗತ್ಯವಾದರೆ ಅದೂ ಸಿಗಬೇಕು.

## ಪ್ರೌಢಶಿಕ್ಷಣ

೨೯. ಪ್ರೌಢವಯಸ್ಸಿನ ನಿರಕ್ಷರ ಸ್ತ್ರೀ ಪುರುಷರಿಗೆ ತರಗತಿಗಳು ಅಗತ್ಯ. ಆದರೆ ಅವರಿಗೆ ಅಕ್ಷರಜ್ಞಾನ ಆಗಲೇ ಬೇಕು ಎಂದು ನಾನು ಒಪ್ಪುವುದಿಲ್ಲ. ಭಾಷಣ ಮುಂತಾದವುಗಳ ಮೂಲಕ ಅವರಿಗೆ ಸಾಧಾರಣ ಜ್ಞಾನ ಸಿಗುವ ಸೌಕರ್ಯಗಳಿರಬೇಕು; ಯಾರಿಗೆ ಅಕ್ಷರಜ್ಞಾನ ಬೇಕೆನಿಸುತ್ತದೆಯೋ ಅವರಿಗೆ ಅದಕ್ಕೆ ಪೂರ್ಣ ಸೌಕರ್ಯ ದೊರೆಯಬೇಕು.

## ಶರೀರ ಶ್ರಮದ ಮಹಿಮೆ

ಕೆಲವು ದಿನದ ಹಿಂದೆ ಒಬ್ಬ ಗೆಳೆಯ ಗಾಂಧೀಜಿಯೊಡನೆ ಮಾತಾಡುತ್ತ, ವಿರಾಮದ ಪ್ರಶ್ನೆ ಬಹಳ ಕಠಿನವಾಗಿದೆ, ಅಂಥದರಲ್ಲಿ 'ಮನುಷ್ಯ ದಿನವೂ ಎಂಟು ಗಂಟೆ ಕೆಲಸ ಮಾಡಬೇಕು, ಶರೀರಶ್ರಮ ಎನ್ನುತ್ತೀರಲ್ಲ, ಸುವ್ಯವಸ್ಥಿತ ಸಮಾಜನಲ್ಲಿ ಕೆಲಸದ ವೇಳೆಯನ್ನು ತಗ್ಗಿಸಿ ಎರಡೇ ಗಂಟೆ ಮಾಡಿ, ಬುದ್ಧಿ–ಕಲೆಗಳ ಕೆಲಸಕ್ಕೆ ಮನುಷ್ಯನಿಗೆ ಹೆಚ್ಚು ಬಿಡುವಿರುವಂತೆ ಮಾಡಲು ಸಾಧ್ಯವಿಲ್ಲವೆ?'. ಎಂದು ಕೇಳಿದ.

‘ ಶ್ರಮಜೀವಿಯಾಗಲಿ ಬುದ್ಧಿಜೀವಿಯಾಗಲಿ, ಬಿಡುವು ದೊರೆತರೆ ಅದನ್ನು ಒಳ್ಳೆಯ ರೀತಿಯಲ್ಲಿ ಉಪಯೋಗಿಸರು. ಕೆಲಸವಿಲ್ಲದ ಮನಸ್ಸು ಕಲಿ ಪುರುಷನ ದರಬಾರು ಆಗಿಬಿಡುತ್ತದೆ. ನಾವು ಇದನ್ನು ಕಣ್ಣಾರೆ ನೋಡುತ್ತೇವೆ.’

‘ ಇಲ್ಲ. ಮನುಷ್ಯ ಕೆಲಸವಿಲ್ಲದೆ ಕೂಡುವುದಿಲ್ಲ. ಎರಡು ಗಂಟೆ ಶರೀರ ಶ್ರಮ, ಆರು ಗಂಟೆ ಬೌದ್ಧಿಕ ಶ್ರಮ ಎಂದು ದಿನವನ್ನು ಹಂಚಲಿ ಎನ್ನಿ, ಇದರಿಂದ ರಾಷ್ಟ್ರಕ್ಕೆ ಲಾಭವಾಗಿದೆ ?’

‘ ಹಾಗಾದೀತೆಂದು ನಾನು ಒಪ್ಪುವುದಿಲ್ಲ. ನಾನೇನು ಇದರ ಲೆಕ್ಕ ಮಾಡಿಲ್ಲ. ಆದರೆ ರಾಷ್ಟ್ರಕ್ಕಾಗಿ ಬೌದ್ಧಿಕ ಶ್ರಮ ಮಾಡದೆ ಬರೀ ಸ್ವಾರ್ಥಕ್ಕಾಗಿ ಮಾಡಿದರೆ, ಈ ಯೋಜನೆ ಸಫಲವಾಗದು. ಎರಡು ಗಂಟೆ ಕೆಲಸಕ್ಕಾಗಿ ಬದಲಾಗಿ ಸಾಕಷ್ಟು ರೂಪಾಯಿ ಕೊಟ್ಟು ಸರಕಾರ, ಏನೂ ಕೊಡದೆಯೆ ಬೇರೆ ಕೆಲಸ ಮಾಡಲು ಬಲಾತ್ಕಾರ ಮಾಡಿದರೆ ಆ ಮಾತು ಬೇರೆ. ಅದು ಬಹಳ ಚಲೋದಾದೀತು. ಆದರೆ ಸರಕಾರದ ಬಲಾತ್ಕಾರವಿಲ್ಲದೆ ಈ ಕೆಲಸ ಆಗದು.’

‘ ನಿಮ್ಮ ಉದಾಹರಣೆಯನ್ನು ತೆಗೆದುಕೊಳ್ಳಿ. ನಿಮ್ಮಿಂದ ಎಂಟು ಗಂಟೆ ಶರೀರಶ್ರಮ ಸಾಧ್ಯವಿಲ್ಲ. ಎಂಟು ಗಂಟೆ, ಇನ್ನೂ ಹೆಚ್ಚೇ ನೀವು ಬೌದ್ಧಿಕ ಕೆಲಸ ಮಾಡಬೇಕಾಗಿದೆ. ನೀವು ನಿಮ್ಮ ಬಿಡುವನ್ನು ದುರುಪಯೋಗ ಮಾಡುವುದಿಲ್ಲ !’

‘ ಇದೆಲ್ಲವೂ ಮಾಡಬೇಕಾದ ಕೆಲಸ. ಇದರಲ್ಲಿ ಬಿಡುವೆ ಇಲ್ಲ. ನಾನು ಟೆನಿಸ್ ಆಡಲು ಹೋದರೆ ಅದು ವಿರಾಮದ ಸಮಯ ಎನ್ನಬಹುದು. ನನ್ನ ಉದಾಹರಣೆಯನ್ನೆ ಹೇಳುತ್ತೇನೆ. ನಾವು ಎಂಟು ಗಂಟೆ ಕೈಕಾಲಿನಿಂದ ದುಡಿದರೆ ನಮ್ಮ ಮನಸ್ಸು ಇಂದಿಗಿಂತ ಇನ್ನೂ ಎಷ್ಟೋ ಉತ್ತಮವಾದೀತು, ಒಂದಾವರೂ ಅಪ್ರಯೋಜಕ ವಿಚಾರ ಬರಲಿಕ್ಕಿಲ್ಲ. ನನ್ನ ಮನಸ್ಸಿನಲ್ಲಿ ಕೆಟ್ಟ ವಿಚಾರ ಬರುವುದೇ ಇಲ್ಲ ಎಂದು ನಾನು ಹೇಳಲಾರೆ. ಇವತ್ತಾದರೂ ನಾನು ಇರುವ ಸ್ಥಿತಿಗೆ ಕಾರಣ, ನನ್ನ ಬಾಳಿನಲ್ಲಿ ಬಹು ಬೇಗನೆ ಶರೀರಶ್ರಮದ ಬೆಲೆಯನ್ನು ನಾನು ಅರಿತೆ.’

‘ ಶರೀರಶ್ರಮದಲ್ಲಿ ಇಷ್ಟೆಲ್ಲ ಗುಣವಿದ್ದರೆ ನಮ್ಮಲ್ಲಿ ದಿನವೂ ಎಂಟು ಗಂಟೆಗಿಂತ ಹೆಚ್ಚಾಗಿ ಕೆಲಸ ಮಾಡುತ್ತಾರಲ್ಲ, ಅವರ ಮನಸ್ಸಿನ ಪವಿತ್ರತೆ ಅಥವಾ ಶಕ್ತಿಯ ಮೇಲೆ ಏಕೆ ಅದರ ಪ್ರಭಾವ ಕಾಣುತ್ತಿಲ್ಲ ?’

‘ ಬರೀ ಮಾನಸಿಕ ಶ್ರಮದಲ್ಲಿಯೇ ಸಮಸ್ತ ಶಿಕ್ಷಣವೂ ಹೇಗೆ ಅಡಗುವು

ದಿಲ್ಲವೋ ಶರೀರಶ್ರಮದಲ್ಲಿಯೂ ಹಾಗೇ ಸಮಸ್ತ ಶಿಕ್ಷಣವೂ ಇಲ್ಲ. ನಮ್ಮ ಜನಕ್ಕೆ ಇದು ತಿಳಿದಿಲ್ಲ. ಅವರ ದೃಷ್ಟಿಗೆ ಇದು ವ್ಯರ್ಥ ಶ್ರಮ. ಇದರಿಂದ ಮನುಷ್ಯನ ಸೂಕ್ಷ್ಮವೃತ್ತಿ ಜಡವಾಗುತ್ತವೆ. ಸವರ್ಣ ಹಿಂದೂಗಳ ವಿರುದ್ಧ ನನ್ನ ದೊಡ್ಡ ಆಕ್ಷೇಪಣೆ ಇದು. ಕೂಲಿಗಾರರ ಕೆಲಸದಲ್ಲಿ ಏನೂ ಲಾಭವಿಲ್ಲದಂತೆ ಮಾಡಿದಾರೆ. ಇದರಿಂದ ಅವರಿಗೆ ಆನಂದವೂ ಇಲ್ಲ, ಕೆಲಸದಲ್ಲಿ ರುಚಿಯೂ ಇಲ್ಲ. ನಾವು ಅವರನ್ನು ಎಲ್ಲರ ಸಮಾನರು ಸಮಾಜದಲ್ಲಿ ಎಂದಿದ್ದರೆ ಅವರಿಗೆ ಎಲ್ಲರಿಗಿಂತ ಹೆಚ್ಚಿನ ಗೌರವದ ಸ್ಥಾನ ಸಿಗುತ್ತಿತ್ತು. ಇದು ಕಲಿಯುಗ ಎನ್ನುತ್ತಾರೆ. ಸತ್ಯಯುಗದಲ್ಲಿ ಸಮಾಜ ಹೆಚ್ಚು ಸುವ್ಯವಸ್ಥಿತವಾಗಿತ್ತು. ನಮ್ಮ ದೇಶ ಬಹಳ ಪುರಾತನವಾದುದು. ಇದರಲ್ಲಿ ಎಷ್ಟೋ ಸಂಸ್ಕೃತಿ ಹುಟ್ಟಿದವು, ಹಾಳಾದವು. ಯಾವ ಯುಗದಲ್ಲಿ ಹೇಗೆ ಇದ್ದೆವೋ ನಾವು, ನಿಶ್ಚಯವಾಗಿ ಹೇಳುವುದೂ ಕಷ್ಟ. ಆದರೆ ಬಹಳ ದೀರ್ಘಕಾಲ ನಾವು ಶೂದ್ರರನ್ನು ಉಪೇಕ್ಷೆ ಮಾಡಿದುದರ ಫಲವೇ ಈಗಿನ ದುರ್ದೆಶೆ ಎಂಬುದರಲ್ಲಿ ಸಂದೇಹವಿಲ್ಲ. ಇವತ್ತಿನ ಹಳ್ಳಿಗಳ ಸಂಸ್ಕೃತಿ—ಭಯಾನಕವಾಗಿದೆ. ದನಕ್ಕಿಂತಲೂ ಕಡಮೆಯಾಗಿ ಬದುಕುತ್ತಿದಾರೆ ಹಳ್ಳಿಗಳ ಜನ. ಕೆಲಸ ಮಾಡಲು, ಸ್ವಾಭಾವಿಕ ಜೀವನ ನಡಸಲು ಪಶುಗಳನ್ನು ಪ್ರಕೃತಿ ಒತ್ತಾಯ ಪಡಿಸುತ್ತದೆ. ನಮ್ಮ ಶ್ರಮಜೀವಿಗಳು ಸ್ವಾಭಾವಿಕವಾಗಿ ಕೆಲಸ ಮಾಡಲೂ ಆರರು, ಬದುಕಲೂ ಆರರು; ಹಾಗೆ ಮಾಡಿಟ್ಟಿದೇವೆ. ಅವರ ಪರಿಸ್ಥಿತಿಯನ್ನು ನಮ್ಮ ಜನ ಬುದ್ಧಿಪೂರ್ವಕ ಆನಂದ ಪೂರ್ಣ ಶರೀರಶ್ರಮವನ್ನು ಮಾಡಿದ್ದರೆ ಇವತ್ತು ನಮ್ಮ ಸ್ಥಿತಿಯೇ ಬೇರೆಯಾಗಿರುತ್ತಿತ್ತು.'

'ಶ್ರಮವನ್ನೂ ಸಂಸ್ಕಾರವನ್ನೂ ಬೇರೆ ಬೇರೆ ಮಾಡಬಾರದು ಎಂದಲ್ಲವೆ?'

'ಕೂಡದು, ಪ್ರಾಚೀನ ರೋಂನಲ್ಲಿ ಹಾಗೆ ಮಾಡಲು ಪ್ರಯತ್ನಿಸಿದರು. ಅದು ಪೂರಾ ನಿಷ್ಫಲವಾಯಿತು. ಶ್ರಮ ಮಾಡದೆ ಬಂದ ಸಂಸ್ಕಾರ ಕೆಲಸಕ್ಕೆ ಬರುವಂಥದಲ್ಲ. ರೋಮನ್ ಜನ ವಿಲಾಸದ ರೂಢಿ ಮಾಡಿಕೊಂಡು ಹಾಳಾದರು. ದಿನವೆಲ್ಲ ಬರೀ ಓದು ಬರೆದು ಅಥವಾ ಭಾಷಣ ಮಾಡಿ ಮನುಷ್ಯ ಮನಸ್ಸಿನ ವಿಕಾಸ ಮಾಡಿಕೊಳ್ಳಲಾರ. ನಾನು ಓದಿದ್ದೆಲ್ಲ ಜೈಲಿನಲ್ಲಿ ಬಿಡುವಾಗಿದ್ದಾಗ, ಅದರಿಂದ ನನಗೆ ಲಾಭವಾಗಿದೆ. ಏಕೆಂದರೆ, ಸುಮ್ಮನೆ ಮನಸಿಗೆ ಬಂದತೆ ಓದಲಿಲ್ಲ. ಒಂದು ನಿಶ್ಚಿತ ಉದ್ದೇಶ್ಯದಿಂದ ಮಾಡಿದುದು. ದಿನಗಟ್ಟಲೆ ತಿಂಗಳುಗಟ್ಟಲೆ ದಿನವೂ ಎಂಟೆಂಟು ಗಂಟೆ ಕೆಲಸಮಾಡಿದೇನೆ. ಆದರೂ ನನ್ನ

ಮೆದುಳು ಬರಿದಾಗಿಲ್ಲ. ಅನೇಕ ಸಲ ದಿನಕ್ಕೆ ನಲವತ್ತು ಮೈಲಿ ನಡೆದಿದೇನೆ. ಆದರೂ ನನ್ನ ಬುದ್ಧಿಗೆ ಜಡತೆಯೆ ಅನುಭವವಾಗಿಲ್ಲ.'

'ನಿಮ್ಮ ಮನಸ್ಸಿಗೆ ಅಷ್ಟು ಶಿಕ್ಷಣ ಸಿಕ್ಕುತ್ತಿಲ್ಲ!'

'ಇಲ್ಲ ತಮ್ಮ, ನಿನಗೆ ಗೊತ್ತಿಲ್ಲ. ಶಾಲೆಯಲ್ಲೂ ವಿಲಾಯಿತಿಯಲ್ಲೂ ನಾನು ಕೇವಲ ಮಧ್ಯಮ ಬುದ್ಧಿಯವನು. ಚರ್ಚೆಗಳನ್ನು ಸಸ್ಯಾಹಾರಿಗಳ ಸಭೆಗಳಲ್ಲಿ ಮಾತಾಡಲೂ ಕೂಡ ನನಗೆ ಧೈರ್ಯವಿರಲಿಲ್ಲ. ಹುಟ್ಟಿನಿಂದಲೆ ನನ್ನಲ್ಲಿ ಏನೋ ಅಸಾಧಾರಣ ಶಕ್ತಿಯಿತ್ತೆಂದು ತಿಳಿಯಬೇಡ. ಆ ಸಮಯದಲ್ಲಿ ಉದ್ದೇಶ್ಯಪೂರ್ವಕವಾಗಿಯೆ ಭಗವಂತ ನನಗೆ ಮಾತಾಡುವ ಶಕ್ತಿಯನ್ನು ಕೊಡಲಿಲ್ಲ. ನಮ್ಮ ಗುಂಪಿನಲ್ಲಿ ಎಲ್ಲರಿಗಿಂತ ಕಡಮೆ ಓದಿನವನು ನಾನೇ, ತಿಳಿದುಕೊ.'

೫೨

## ವ್ಯಾಯಾಮದ ಪದ್ಧತಿ

ನನ್ನ ಅಭಿಪ್ರಾಯದಲ್ಲಿ ವಿದ್ಯಾರ್ಥಿಗಳಿಗೆ ಶಾರೀರಕ ವ್ಯಾಯಾಮ ಪುರಾತನ ರೀತಿಯದಾಗಬೇಕು—ಪ್ರಾಣಾಯಾಮ, ಆಸನಾದಿಗಳ ಮೂಲಕ, ಮುಲ್ಲರ್ ಮುಂತಾದ ಪಶ್ಚಿಮದವರು ಶರೀರವನ್ನು ಬೆಳೆಸುವ ಬಗ್ಗೆ ಈಚೆಗೆ ಬರೆದ ಪುಸ್ತಕಗಳಿಗೆ—ಅವಕ್ಕೆ ಸ್ವಲ್ಪ ಸಫಲತೆಯೂ ಸಿಕ್ಕಿದೆ—ಪ್ರಾಚೀನ ಪದ್ಧತಿಯ ತಳಹದಿ ಎಂದು ನನ್ನ ವಿಶ್ವಾಸ. ಅದನ್ನು ಈಗಿನ ವೈಜ್ಞಾನಿಕ ಭಾಷೆಯಲ್ಲಿ ಬರೆದಿದಾರೆ. ಸ್ವಲ್ಪ ಸುಧಾರಣೆ ಮಾಡಿದಾರೆ. ನಾವು ಈ ದಿಕ್ಕಿನಲ್ಲಿ ಮಾಡಿರುವ ಕೆಲಸ ಬಹಳ ಸ್ವಲ್ಪ. ಈ ಪದ್ಧತಿಯಿಂದ ವ್ಯಾಯಾಮ ಕಲಿತ ಮೇಲೆ ಈಗಿನ ಕುಸ್ತಿ ಮುಂತಾದುವನ್ನು ಕಲಿಯಬೇಕೆನ್ನುವವರಿಗೆ ಅನುಕೂಲ ಮಾಡಿಕೊಡಬೇಕು. ಆದರೆ ದೊಣ್ಣೆವರಸೆ, ಕತ್ತಿವರಸೆ ಕಲಿಯುವುದು ಅಗತ್ಯವಿಲ್ಲ. ಮಕ್ಕಳು ಮೊದಲಿನಿಂದಲೇ ದೊಣ್ಣೆವರಸೆ—ಲಾಠೀ ಕಾಠೀ—ಕಲಿಯುವ ಗೋಜಿಗೆ ಹೋಗಬಾರದೆಂದು ನನ್ನ ಅಭಿಪ್ರಾಯ, ಮೈಯನ್ನು ಗಟ್ಟಿಗೊಳಿಸುವುದರಲ್ಲಿ, ಬೇರೆಬೇರೆ ಅವಯವಗಳನ್ನು ವಿಕಾಸಗೊಳಿಸುವುದರಲ್ಲಿ ಲಾಠಿಗೆ ಸ್ಥಾನ ಬಹಳ ಕಡಮೆ. ಇದು ವ್ಯಾಯಾಮದ ಅಂಗವಲ್ಲ. ಆತ್ಮಸಂರಕ್ಷಣೆಗೆ ಅಥವಾ ಅಂಥ ಬೇರೆ ಕಾರಣಕ್ಕಾಗಿ ಕೊಡುವ ಶಿಕ್ಷಣದ ಅಂಗವೆನ್ನಬೇಕು.

ವ್ಯಾಯಾಮ, ಆಟಗಳನ್ನು ಅನಿವಾರ್ಯವಾಗಿ ಮಾಡಿದ್ದು ನನಗೆ ಬಹಳ ಸಂತೋಷ. ಯಾವುದು ಒಳ್ಳೆಯದೋ ಅದನ್ನು ಅನಿವಾರ್ಯವಾಗಿ ಮಾಡಬೇಕು. ಗುಜರಾತಿ, ಸಂಸ್ಕೃತ ಇತ್ಯಾದಿ ವಿಷಯ ಒಳ್ಳೆಯದು ಮತ್ತು ಅಗತ್ಯ ಎಂದು

ತಿಳಿದಿದೇವೆ. ಅದನ್ನು ಅನಿವಾರ್ಯವಾಗಿ ಮಾಡಿದೇವೆ. ವ್ಯಾಯಾಮ ಆಟಗಳನ್ನು ಅಷ್ಟು ಅಗತ್ಯವೆಂದು ತಿಳಿದಿಲ್ಲ. ಆದ್ದರಿಂದ ಅವನ್ನು ವಿದ್ಯಾರ್ಥಿಗಳ ಇಷ್ಟಕ್ಕೆ ಬಿಟ್ಟೆವು. ಈಗ ಅವನ್ನು ಗುಜರಾತಿಗೆ ಸಮ ಎಂದು ತಿಳಿದಿದೀರಿ; ಆದ್ದರಿಂದ ಅನಿವಾರ್ಯವಾಗಿ ಮಾಡಿದೀರಿ. ನಮ್ಮ ಇಷ್ಟಕ್ಕೆ ವಿರುದ್ಧವಾಗಿ ಹಾಕಿದ ಅಂಕುಶ ಪರಾಧೀನರನ್ನಾಗಿ ಮಾಡುತ್ತದೆ. ನಾವು ಒಪ್ಪಿಕೊಂಡ ಅಥವಾ ಹಾಕಿಕೊಂಡ ಅಂಕುಶ ನಿಜವಾದ ಸ್ವಾತಂತ್ರ್ಯವನ್ನು ಹೆಚ್ಚಿಸುತ್ತದೆ.೮೩

## ಜೀವನದಲ್ಲಿ ಸಂಗೀತ

[ಅಹಮದಾಬಾದಿನ ರಾಷ್ಟ್ರೀಯ ಸಂಗೀತ ಮಂಡಲದ ದ್ವಿತೀಯ ವಾರ್ಷಿಕೋತ್ಸವ ಸತ್ಯಾಗ್ರಹಾಶ್ರಮದ ಪ್ರಾರ್ಥನೆಯ ಬಯಲಿನಲ್ಲಿ ಗಾಂಧೀಜಿಯ ಸಾನ್ನಿಧ್ಯದಲ್ಲಿ ನಡೆಯಿತು. ಹಾಡು – ವಾದ್ಯ ಆದಮೇಲೆ ಗಾಂಧೀಜಿ ಭಾಷಣ ಮಾಡಿದರು.]

ಸಂಗೀತದಲ್ಲಿ ರುಚಿಯಿಲ್ಲದವನು ಯೋಗಿ, ಇಲ್ಲವೆ ಪಶು ಎಂದು ನಮ್ಮಲ್ಲಿ ಒಂದು ಸುಭಾಷಿತ ಇದೆ. ನಾವು ಯೋಗಿಗಳಂತೂ ಅಲ್ಲ. ಎಷ್ಟರಮಟ್ಟಿಗೆ ಸಂಗೀತ ಗಂಧವಿಲ್ಲವೋ ಅಷ್ಟುಮಟ್ಟಿಗೆ ಪಶು ಎನ್ನಬಹುದು. ಸಂಗೀತದ ಗಂಧ ಇರುವುದು ಎಂದರೆ ಇಡೀ ಜೀವನವನ್ನು ಸಂಗೀತಮಯ ಮಾಡುವುದು, ನಮ್ಮ ಬಾಳು ಮಧುರವಲ್ಲದುದರಿಂದಲೇ ನಮ್ಮ ಸ್ಥಿತಿ ದಯಾಜನಕವಾಗಿದೆ. ಜನತೆಯಲ್ಲಿ ಒಂದೇ ಸ್ವರ ಎಲ್ಲಿ ಹೊರಡದೋ ಅಲ್ಲಿ ಸ್ವರಾಜ್ಯವೆಲ್ಲಿ ಬಂತು ?

ಒಂದೇ ಸ್ವರ ಎಲ್ಲಿ ಹೊರಡದೋ, ಪ್ರತಿಯೊಬ್ಬ ತಮ್ಮ ತಮ್ಮ ರಾಗವನ್ನ ಎಲ್ಲಿ ಆಲಾಪಿಸುತ್ತಾರೋ ಅಥವಾ ಎಲ್ಲಾ ತಂತಿಗಳೂ ಎಲ್ಲಿ ಹರಿದಿವೆಯೋ' ಅಲ್ಲಿ ಅರಾಜಕತೆ ಅಥವಾ ದುಷ್-ಪ್ರಭುತ್ವ ಇರುತ್ತವೆ. ನಮ್ಮಲ್ಲಿ ಸಂಗೀತ ವಿಲ್ಲದುದರಿಂದ ಸ್ವರಾಜ್ಯದ ಸಾಧನ ನಮಗೆ ರುಚಿಸುತ್ತಿಲ್ಲ. ಈ ಅರ್ಥದಲ್ಲಿ ಪ್ಲೇಟೋ ಹೇಳಿದ ಮಾತು ನಿಜ; ಸಂಗೀತದ ಸ್ಥಿತಿಯನ್ನು ನೋಡಿ ಸಮಾಜದ ರಾಜಕೀಯ ಸ್ಥಿತಿಯನ್ನು ಊಹಿಸಬಹುದು. ನಮ್ಮಲ್ಲಿ ಸಂಗೀತ ಬಂದರೆ ಸ್ವರಾಜ್ಯವೂ ಬರುತ್ತದೆ. ಕೋಟಿಗಟ್ಟಲೆ ಜನ ಒಂದೇ ದನಿಯಿಂದ ಭಜನೆ ಮಾಡಲು ತೊಡಗಿದರೆ, ಕೀರ್ತನೆ ಹಾಡತೊಡಗಿದರೆ, ಅಥವಾ ರಾಮನಾಮ ಹಾಡಿದರೆ, ಅದರಲ್ಲಿ ಒಂದೂ ಅಪಶ್ರುತಿ ಇಲ್ಲದಿದ್ದರೆ ಆಗ ನಮ್ಮ ಸಾಮಾಜಿಕ ಜೀವನದಲ್ಲಿ ಸಂಗೀತ ಬಂತು ಎನ್ನಬಹುದು. ಇಂಥ ಸರಳವಾದ ಮಾತನ್ನೂ

ಮಾಡದಿದ್ದರೆ ನಾವು ಸ್ವರಾಜ್ಯವನ್ನು ಹೇಗೆ ಪಡೆದೇವು.

ಎಲ್ಲಿ ನಾತವೋ ಅಲ್ಲಿ ಸಂಗೀತವಿಲ್ಲ. ಸುಗಂಧವೂ ಒಂದು ಬಗೆಯ ಸಂಗೀತವೇ. ಇವನ್ನು ನಾವು ಅರಿಯಬೇಕು, ಯಾರ ಕಂಠದಿಂದಾದರೂ ಮಧುರಸ್ವರ ಹೊರಟರೆ ಅದನ್ನು ಕೇಳಬೇಕೆನಿಸುತ್ತದೆ ಜೀವಕ್ಕೆ. ಅದನ್ನು ಸಂಗೀತ ಎನ್ನುತ್ತೇವೆ. ಆದರೆ ಸಂಗೀತಕ್ಕೆ ವಿಶಾಲ ಅರ್ಥ ಮಾಡಿದರೆ ಜೀವನದ ಯಾವ ಭಾಗದಲ್ಲೂ ಸಂಗೀತವಿಲ್ಲವೆ ನಡೆಯದೆಂದು ನಮಗೇ ತಿಳಿಯುತ್ತದೆ. ಇವತ್ತು ಸಂಗೀತ ಎಂದರೆ ಸ್ವಚ್ಛಂದ, ಸ್ವೇಚ್ಛಾಚಾರ ಎಂದಾಗಿದೆ. ನಾಚಿಕೆಗೆಟ್ಟ ಹೆಂಗಸಿನ ಹಾಡಿಗೆ ಕುಣಿತಕ್ಕೆ ಸಂಗೀತ ಎನ್ನುತ್ತೇವೆ. ನಮ್ಮ ತಾಯಿ–ತಂಗಿಯರಂತೂ ಅಪಸ್ವರದಲ್ಲೇ ಹಾಡುತ್ತಾರೆ. ಅವರು ಸಂಗೀತ ಕಲಿತರೆ ಅದು ನಾಚಿಕೆಗೇಡು! ಹೀಗೆ ಸಂಗೀತಕ್ಕೆ ಸತ್ಸಂಗ ಜೊತೆಯಾಗದುದರಿಂದ ಈ ಮಂಡಲ ಹತ್ತಾರು ಜನ ವಿದ್ಯಾರ್ಥಿಗಳಿಂದಲೇ ತೃಪ್ತವಾಗಬೇಕಾಗಿದೆ.

ಸಂಗೀತ ಬಹಳ ಹಳೆಯದು, ಬಹಳ ಪವಿತ್ರವಸ್ತು. ನಮ್ಮ ಸಾಮವೇದದ ಋಕ್ಕುಗಳು ಸಂಗೀತದ ಗಣಿಗಳು. ಕುರಾನಿನ ಒಂದು ಆಯತವನ್ನಾದರೂ ರಾಗವಿಲ್ಲದೆ ಹೇಳಲು ಸಾಧ್ಯವಿಲ್ಲ. ಕ್ರಿಸ್ತಾನ ಧರ್ಮದ ಡೇವಿಡ್ಡನ ಗೀತೆ (ಸಾಮ್) ಗಳನ್ನು ಕೇಳಿದರೆ ಸರಸ್ವತಿ ಈ ಕಲೆಯ ಚರಮ ಸೀಮೆಯನ್ನು ಮುಟ್ಟಿದ ಹಾಗೆ ಅನಿಸುತ್ತದೆ, ಸಾಮವೇದ ಕೇಳಿದಂತೆ ಅನಿಸುತ್ತದೆ. ಇವತ್ತು ಗುಜರಾತ ಸಂಗೀತಹೀನ, ಕಲಾಹೀನ ಆಗಿದೆ. ಈ ದೋಷವನ್ನು ನೀಗಬೇಕಾದರೆ ಈ ಸಂಗೀತಮಂಡಲಕ್ಕೆ ಉತ್ತೇಜನ ಸಿಗಬೇಕು.

ಸಂಗೀತದಲ್ಲಿ ಹಿಂದೂ ಮುಸಲ್ಮಾನರ ಏಕತೆ ಬೇಕು, ಹಿಂದೂಗಾಯಕರ ವಾದ್ಯಗಾರರ ಜತೆಯಲ್ಲಿ ಕೂತು ಮುಸಲ್ಮಾನ ಗಾಯಕರು ವಾದ್ಯಗಾರರು ಹಾಡುತ್ತಾರೆ, ಬಾರಿಸುತ್ತಾರೆ. ಈ ರಾಷ್ಟ್ರದ ಬೇರೆ ಕೆಲಸಗಳಲ್ಲೂ ಇಂಥ ಸಂಗೀತ ಕೇಳಿಬರುವ ಶುಭದಿನ ಎಂದು ಬಂದೀತೋ? ಆಗ ನಾವೆಲ್ಲರೂ ರಾಮ–ರಹೀಮರ ನಾಮವನ್ನು ಒಟ್ಟಾಗಿ ಹೇಳಿಯೇವು.

ನೀವು ಈಗ ಸಂಗೀತಕ್ಕೆ ನೀಡುತ್ತಿರುವ ಅಲ್ಪ ಸ್ವಲ್ಪ ಸಹಾಯಕ್ಕೆ ಧನ್ಯವಾದ, ನಿಮ್ಮ ಹುಡುಗ ಹುಡುಗಿಯರನ್ನು ಹೆಚ್ಚಾಗಿ ಕಳಿಸಿದರೆ ಅವರು ಭಜನೆ-ಕೀರ್ತನೆ ಕಲಿತಾರು. ಅವರು ಇಷ್ಟು ಮಾಡಿದರೂ ನೀವು ರಾಷ್ಟ್ರೀಯ ಉನ್ನತಿಗೆ ಸ್ವಲ್ಪಮಟ್ಟಿಗಾದರೂ ನೆರವಾದಂತೆ.

ಆದರೆ ಇದಕ್ಕೂ ಮುಂದೆ ಹೋಗಿ. ನಮ್ಮ ಕೋಟ್ಯಂತರ ಜನರನ್ನು

ಸಂಗೀತಮಯ ಮಾಡಬೇಕೆಂದರೆ, ನಾವೆಲ್ಲರೂ ಖಾದಿ ತೊಡಬೇಕು, ನೂಲಬೇಕು, ಇವತ್ತು ಖಾನ್‌ಸಾಹೇಬರ ಸಂಗೀತ ಬಹಳ ಸವಿಯಾಗಿತ್ತು, ಆದರೆ ನಮ್ಮಂಥ ಕೆಲವರಿಗೆ ಮಾತ್ರವೇ ಅದು ಸಿಕ್ಕೀತು. ಎಲ್ಲರಿಗೂ ಆ ಅದೃಷ್ಟವಿಲ್ಲ. ಆದರೆ ಮನೆಮನೆಯಲ್ಲೂ ಕೇಳಿಬರಬಹುದಾದ ರಾಟೆಯ ಸಮೀಪದ ಮುಂದೆ ಇದು ಸಪ್ಪೆ, ಏಕೆಂದರೆ, ರಾಟೆಯ ಸಂಗೀತ ಕಾಮಧೇನು, ಕೋಟ್ಯಂತರ ಜನರ ಹೊಟ್ಟೆಯ ಪಾಡಿನ ಸಾಧನ. ನನ್ನ ಅಭಿಪ್ರಾಯದಲ್ಲಿ ಅದು ನಿಜವಾದ ಸಂಗೀತ. ಈಶ್ವರ ಎಲ್ಲರಿಗೂ ಒಳಿತುಮಾಡಲಿ, ಎಲ್ಲರಿಗೂ ಒಳ್ಳೇ ಬುದ್ಧಿ ಕೊಡಲಿ.೮೪

## ೨

## ಕಾಲೇಜು ವಿದ್ಯಾರ್ಥಿಗಳ ಪ್ರಶ್ನೆಗಳಲ್ಲಿ ಇದು ಕೊನೆಯದು

‘ ಸಂಗೀತ ನಿಮ್ಮ ಬಾಳಿನ ಮೇಲೆ ಏನು ಪ್ರಭಾವ ಬೀರಿದೆ ’

ಸಂಗೀತದಿಂದ ನನಗೆ ಶಾಂತಿ ದೊರೆತಿದೆ. ಏನೋ ಕಾರಣದಿಂದ ನನಗೆ ಕಳವಳವಾದಾಗ ಸಂಗೀತ ಕೇಳಿ ಮನಸಿಗೆ ಶಾಂತಿ ದೊರೆಯಿತು. ನನಗೆ ನೆನಪಿದೆ. ಸಂಗೀತದಿಂದ ಸಿಟ್ಟು ಅಳಿಯುತ್ತದೆಂಬುದೂ ನನಗೆ ಅನುಭವವಾಗಿದೆ. ಗದ್ಯವಲ್ಲಿ ಬಗೆದ ವಿಷಯ ಪ್ರಭಾವ ಬೀರಲಿಲ್ಲ. ಅದೇ ವಿಷಯದ ಭಜನೆ ಕೇಳಿದಾಗ ಪರಿಣಾಮವಾಯಿತು. ಹೀಗೆ ಹೇಳಬಹುದಾದ ಎಷ್ಟೋ ಸಂಗತಿ ನೆನಪಿವೆ. ಅಪಶ್ರುತಿಯಲ್ಲಿ ಭಜನೆ ಹಾಡಿದರೆ, ಅದರ ಶಬ್ದಗಳ ಅರ್ಥ ಗೊತ್ತಿದ್ದರೂ ಅದನ್ನು ಕೇಳಿದ ಹಾಗೇ ಅನಿಸದಿದ್ದುದನ್ನು ನೋಡಿದೇನೆ. ಅದನ್ನು ಸವಿಯಾದ ದನಿಯಿಂದ ಹಾಡಿದಾಗ ಅದರಲ್ಲಿ ತುಂಬಿದ ಅರ್ಥ ನನ್ನ ಮನಸಿನಲ್ಲಿ ಆಳವಾಗಿ ನೆಟ್ಟಿತು. ಗೀತೆಯನ್ನು ಮಧುರಕಂಠದಿಂದ ಒಂದೇ ಸ್ವರದಲ್ಲಿ ಹಾಡಿದರೆ ಅದನ್ನು ಕೇಳಿ ನನಗೆ ದಣಿವಾಗದು. ಹಾಡಿದ ಶ್ಲೋಕಗಳ ಅರ್ಥವೂ ಹೆಚ್ಚು ಹೆಚ್ಚಾಗಿ ಮನಸ್ಸಿನಲ್ಲಿ ಮೂಡುತ್ತದೆ. ಚಿಕ್ಕಂದಿನಲ್ಲಿ ಸವಿಗೊರಲಿನಿಂದ ರಾಮಾಯಣ ಹಾಡಿದುದನ್ನು ಕೇಳಿದ್ದೆ. ಅದರ ಪ್ರಭಾವ ಇನ್ನೂವರೆಗೂ ಇದೆ. ಒಮ್ಮೆ ಒಬ್ಬ ಗೆಳೆಯ ‘ ಹರಿನೋ ಮಾರಗಛೆ ಶೂರಾನೋ ’ ಎಂಬ ಭಜನೆ ಹಾಡಿದಾಗ, ಹಿಂದೆ ಎಷ್ಟೋ ಸಲ ಅದನ್ನು ಕೇಳಿದ್ದುದಕ್ಕಿಂತ ಹೆಚ್ಚು ಪರಿಣಾಮವಾಯಿತು. ೧೯೦೨ ರಲ್ಲಿ ಟ್ರಾನ್ಸ್ವಾಲಿನಲ್ಲಿ ನನಗೆ ಹೊಡೆತ ಬಿದ್ದಿತ್ತು. ಗಾಯವನ್ನು ಹೊಲಿದು ಡಾಕ್ಟರ್ ಹೊರಟು ಹೋಗಿದ್ದರು. ನನಗೆ ನೋವಾಗು

ತ್ತಿತ್ತು. ನಾನೇ ಹಾಡಿಕೊಂಡು ಅಥವಾ ಮನನಮಾಡಿ ಯಾವ ದುಃಖವನ್ನು ಅಳಿಸಲು ಸಾಧ್ಯವಿರಲಿಲ್ಲವೋ ಆಲಿವ್‌ಡೋಕ್ ಹಾಡಿದ ಒಂದು ಇಂಪಾದ ಭಜನೆ ಕೇಳಿ ನೀಗಿಕೊಂಡೆ. ಇದನ್ನು ಆತ್ಮಕಥೆಯಲ್ಲಿ ಬರೆದಿದ್ದೇನೆ.

ನಾನು ಹೀಗೆ ಬರೆದುದರಿಂದ ನನಗೆ ಸಂಗೀತ ಬರುತ್ತದೆಂದು ಅರ್ಥ ಮಾಡಬೇಡಿ. ಸಂಗೀತದ ಜ್ಞಾನ ನನಗೆ ಸೊನ್ನೆ ಎನ್ನಬಹುದು. ನಾನು ಸಂಗೀತದ ಪರೀಕ್ಷೆ ಮಾಡಬಲ್ಲೆ ಎನ್ನಲೂ ಆಗದು. ಸ್ವಲ್ಪ ಮಟ್ಟಿಗೆ ಸಂಗೀತ ನನಗೆ ಹಿಡಿಸುತ್ತದೆ ಅಥವಾ ಒಳ್ಳೇ ಸಂಗೀತ ನನಗೆ ರುಚಿಸುತ್ತದೆ; ಅದು ಈಶ್ವರ ಕೃಪೆ.

ಹೀಗೆ ಸಂಗೀತದ ಪರಿಣಾಮ ಯಾವಾಗಲೂ ನನ್ನ ಮೇಲೆ ಒಳ್ಳೇ ಪರಿಣಾಮವನ್ನೆ ಮಾಡಿದೆ. ಆದ್ದರಿಂದ ಎಲ್ಲರ ಮೇಲೂ ಹೀಗೇ ಪ್ರಭಾವ ಬೀಳ ಬೇಕು ಅಥವಾ ಬಿದ್ದಿದೆ ಎಂದು ನನ್ನ ಅಭಿಪ್ರಾಯವಲ್ಲ. ಅನೇಕರು ಹಾಡಿನಿಂದ ತಮ್ಮ ವಿಷಯ ವಾಸನೆಯನ್ನು ಉತ್ತೇಜನಗೊಳಿಸಿಕೊಂಡಿದಾರೆ ನಾನು ಬಲ್ಲೆ. ಇದರಿಂದ ತಿಳಿಯುವುದು ಇಷ್ಟು; ಅವರವರ ಭಾವನೆಯಿಂದ ಅವರವರಿಗೆ ಫಲ, ತುಲಸೀದಾಸರು ಹೇಳಿದಂತೆ:

ಜಡ ಚೇತನ ಗುಣ-ದೋಷಮಯ ವಿಶ್ವಕೀನ್ಹ ಕರತಾರ್ ।
ಸಂತಹಂಸ ಗುಣ ಗಹಾಹಿಂ ಪಯ ಪರಿಹರಿ ವಾರಿವಿಕಾರ್ ॥

ಪರಮೇಶ್ವರ ಜಡಚೇತನ ಎಲ್ಲವನ್ನೂ ಗುಣದೋಷಮಯವಾಗಿ ಮಾಡಿ ದಾನೆ. ವಿವೇಕಿಯಾದವರು ಹಂಸಕ್ಷೀರ ನ್ಯಾಯದಂತೆ ಗುಣವನ್ನೇ ಪೂಜಿ ಸುತ್ತಾರೆ.೨೫

## ಶಾಲೆಗಳಲ್ಲಿ ಸಂಗೀತ

ಗಂಧರ್ವ ಮಹಾವಿದ್ಯಾಲಯದ ಪಂಡಿತ ನಾರಾಯಣಶಾಸ್ತ್ರಿ ಖರೆ ಹುಡುಗ ಹುಡುಗಿಯರಲ್ಲಿ ಶುದ್ಧ ಸಂಗೀತ ಪ್ರಚಾರ ಮಾಡುವ ಕೆಲಸಕ್ಕೆ ಜೀವನವನ್ನು ಅರ್ಪಿಸಿದಾರೆ. ವಿಶೇಷವಾಗಿ ಅಹಮದಾಬಾದಿನಲ್ಲಿ, ಸಾಮಾನ್ಯವಾಗಿ ಗುಜ ರಾತದಲ್ಲಿ ಈ ಬಗ್ಗೆ ಆಗುತ್ತಿರುವ ವಿಶೇಷ ಪ್ರಗತಿಯ ಬಗ್ಗೆ ಅವರು ವರದಿ ಕಳಿ ಸಿದಾರೆ. ಶಿಕ್ಷಣದಲ್ಲಿ ಸಂಗೀತವನ್ನು ಸೇರಿಸಲು ಶಿಕ್ಷಣದ ಅಧಿಕಾರಿಗಳು ಒಪ್ಪು ತ್ತಿಲ್ಲವೆಂದು ವಿಷಾದಿಸಿದಾರೆ. ಪ್ರಾರಂಭಿಕ ಶಿಕ್ಷಣದಲ್ಲಿ ಸಂಗೀತಕ್ಕೆ ಸ್ಥಾನವಿರ ಬೇಕು ಎಂಬುದು ಪಂಡಿತರ ಅನುಭವಸಿದ್ಧ ಅಭಿಪ್ರಾಯ. ಈ ಸಲಹೆಯನ್ನು

ನಾನು ಹೃತ್ಪೂರ್ವಕವಾಗಿ ಸಮರ್ಥಿಸುತ್ತೇನೆ. ಹುಡುಗನ ಕೈಗೆ ಶಿಕ್ಷಣ ಕೊಡುವುದು ಎಷ್ಟು ಅಗತ್ಯವೋ ಅವನ ಗಂಟಲಿಗೆ ಶಿಕ್ಷಣ ಕೊಡುವುದೂ ಅಷ್ಟೇ ಅಗತ್ಯ. ಮಕ್ಕಳಲ್ಲಿ ತುಂಬಿ ಅಡಗಿರುವ ಶುಭ ಗುಣಗಳನ್ನು ಹೊರಗೆಳೆಯಲು ಅವರಿಗೆ ಶಿಕ್ಷಣದಲ್ಲಿ ನಿಜವಾದ ಅಭಿರುಚಿ ಉಂಟುಮಾಡಲು ಕವಾಯತ್ತು, ಕೈಗಾರಿಕೆ, ಚಿತ್ರ. ಸಂಗೀತ ಎಲ್ಲವನ್ನೂ ಒಟ್ಟಿಗೆ ಕಲಿಸಬೇಕು.

ಹೀಗೆಂದರೆ, ಶಿಕ್ಷಣ ಪದ್ಧತಿಯಲ್ಲಿ ಕ್ರಾಂತಿ ಮಾಡಬೇಕು ಎಂದ ಹಾಗೆ. ರಾಷ್ಟ್ರೀಯ ಭಾವಿ ನಾಗರಿಕರ ಜೀವನ ಕಾರ್ಯಕ್ಕೆ ಗಟ್ಟಿ ತಳಹದಿ ಹಾಕಬೇಕೆಂದರೆ ಈ ನಾಲ್ಕು ಮಾತೂ ಅಗತ್ಯ. ಯಾವ ಪ್ರಾಥಮಿಕ ಶಾಲೆಗಾದರೂ ಹೋಗಿ ನೋಡಿ. ಹುಡುಗರು ಕೊಳಕು, ಶಿಸ್ತು ಹೆಸರಿಗೂ ಇಲ್ಲ. ಬರೀ ಅಪಶ್ರುತಿಯ ಗಂಟಲು. ಆದ್ದರಿಂದ ಪ್ರಾಂತಗಳ ಮಂತ್ರಿಗಳು ಶಿಕ್ಷಣ ಪದ್ಧತಿಯ ಹೊಸರಚನೆ ಮಾಡುವಾಗ ದೇಶದ ಆವಶ್ಯಕತೆಗಳಿಗೆ ತಕ್ಕಂತೆ ಮಾಡಿಯಾರು, ಆಗ ನಾನು ಮೇಲೆ ಹೇಳಿದ ಆವಶ್ಯಕ ವಸ್ತುಗಳನ್ನು ಕೈಬಿಡಬಾರದು ಎಂಬುದರಲ್ಲಿ ಸಂದೇಹ ವಿಲ್ಲ. ಪ್ರಾಥಮಿಕ ಶಿಕ್ಷಣದ ನನ್ನ ಯೋಜನೆಯಲ್ಲಿ ಇವು ಇವೆ. ಕಠಿನವಾದ ವಿದೇಶ ಭಾಷೆಯಲ್ಲಿ ಕಲಿಯುವ ಭಾರವನ್ನು ಮಕ್ಕಳ ತಲೆಯ ಮೇಲಿನಿಂದ ಇಳಿಸಿದಾಗ ಇವು ಸುಲಭವಾದಾವು.

ಈ ಹೊಸ ಪದ್ಧತಿಯಿಂದ ಶಿಕ್ಷಣ ಕೊಡಬಲ್ಲ ಶಿಕ್ಷಕರು ನಮ್ಮಲ್ಲಿ ಇಲ್ಲ. ಇಂಥ ಅಡಚಣೆ ಎಲ್ಲಾ ಹೊಸ ಸಾಹಸಗಳಲ್ಲೂ ಬಂದೇ ಬರುತ್ತದೆ. ಈಗಿರುವ ಶಿಕ್ಷಕರು ಕಲಿಯಲು ಸಿದ್ಧರಾದರೆ ಅವರಿಗೆ ಅವಕಾಶಕೊಡಬೇಕು. ಅವರು ಈ ಅಗತ್ಯ ವಿಷಯವನ್ನು ಕಂಡರೆ ಅವರ ಸಂಬಳವನ್ನು ಕೂಡಲೇ ಹೆಚ್ಚಿಸುವ ಏರ್ಪಾಡು ಮಾಡಬೇಕು. ಪ್ರಾಥಮಿಕ ಶಿಕ್ಷಣದಲ್ಲಿ ಏನೇನು ಹೊಸ ಮಾತನ್ನು ಸೇರಿಸುತ್ತೇವೋ ಅವೆಲ್ಲಕ್ಕೂ ಪ್ರತ್ಯೇಕ ಪ್ರತ್ಯೇಕ ಶಿಕ್ಷಕರನ್ನು ಏರ್ಪಡಿಸುವ ವಿಚಾರವನ್ನು ಮಾಡಬಾರದು. ಅವರಿಂದ ವೆಚ್ಚ ಬಹಳ ಹೆಚ್ಚೀತು. ಇದು ಖಂಡಿತವಾಗಿಯೂ ಅನಾವಶ್ಯಕ. ಪ್ರಾಥಮಿಕ ಶಾಲೆಗಳ ಶಿಕ್ಷಕರು ಅನೇಕರು ಸ್ವಲ್ಪ ಸಮಯದಲ್ಲಿ ಇದನ್ನೆಲ್ಲ ಕಲಿಯಲು ಸಾಧ್ಯವಿಲ್ಲದಿರಬಹುದು. ಆದರೆ ಮೆಟ್ರಿಕ್‌ವರೆಗೆ ಓದಿದ ಹುಡುಗರಿಗೆ ಸಂಗೀತ, ಚಿತ್ರಕಲೆ, ಕವಾಯಿತ್ತು, ಕೈಗಾರಿಕೆಗಳ ಮೂಲ ತತ್ವಗಳನ್ನು ಕಲಿಯಲು ಮೂರು ತಿಂಗಳಿಗಿಂತ ಹೆಚ್ಚು ಬೇಕಾಗಿಲ್ಲ. ಕೆಲಸ ನಡೆಸುವ ಪೂರ್ತಿ ಜ್ಞಾನ ಬಂದರಾಯಿತು. ಆಮೇಲೆ ಕಲಿಸುತ್ತ ಕಲಿಸುತ್ತ ಈ ಜ್ಞಾನವನ್ನು ವೃದ್ಧಿಗೊಳಿಸುತ್ತಾ ಹೋಗುತ್ತಾರೆ!

ಯೂವಾಗಲೂ, ಶಿಕ್ಷಕರಲ್ಲಿ ರಾಷ್ಟ್ರವನ್ನು ಮತ್ತೆ ಮೇಲೆತ್ತಲು ತಮ್ಮ ಯೋಗ್ಯತೆಯನ್ನು ದಿನೇ ದಿನೇ ಹೆಚ್ಚಿಸಿಕೊಳ್ಳುವ ಹುರುಪು ಹುಮ್ಮಸ್ಸು ಇದ್ದರೆ ಈ ಕೆಲಸ ಆಗುತ್ತದೆ, ಖಂಡಿತ.೫೬

[ ಹಿಂದುಸ್ತಾನಿ ತಾಲೀಮಿ ಸಂಘ ಉತ್ತರಬುನಿಯಾದಿ ಶಿಕ್ಷಣದ ವಿವರಗಳನ್ನು ನಿರ್ಧರಿಸಲು ಒಂದು ಸಮಿತಿಯನ್ನು ಮಾಡಿತು. 'ಮಾಡಿಕಲಿ' ಎಂಬುದನ್ನು ಒತ್ತಿದರೂ ಕೆಲವು ವಿಶಿಷ್ಟ ವಿಷಯಗಳನ್ನು ಅವರು ಸೂಚಿಸಿದ್ದರು : ವಾಣಿಜ್ಯ, ವೈದ್ಯ, ಶಿಕ್ಷಕ-ಶಿಕ್ಷಣ, ಕಲೆ ಇತ್ಯಾದಿ. ಇವು ಎಷ್ಟೋ ಉಪಯೋಗಕರವಾದರೂ ಉತ್ಪಾದಕದಲ್ಲಿ, ಬೇಸಾಯ, ಗೃಹನಿರ್ಮಾಣ, ವಸ್ತ್ರಭೂಷಣಗಳಹಾಗೆ, ಸಂಗೀತ, ಟೈಪ್‌ರೈಟಿಂಗ್, ಇಂಥ ಕುಶಲಕಲೆಗಳನ್ನು ಶಿಕ್ಷಣ ಮಾಧ್ಯಮವಾಗಿ ಮಾಡಬಹುದೆ? ಉತ್ತರ ಬುನಿಯಾದಿ ಶಿಕ್ಷಣ ಉಚಿತವಾಗಿರಬೇಕೆ, ಶುಲ್ಕ ಸಹಿತವಾಗಿರಬೇಕೆ? ಈ ಪ್ರಶ್ನೆಗಳಿಗೆ ಗಾಂಧೀಜಿಯ ಉತ್ತರ ಹೀಗಿತ್ತು. ]

"ಮೊದಲು ಸ್ವಾವಲಂಬನವನ್ನು ತೆಗೆದು ಕೊಳ್ಳೋಣ, ಕೆಲವರಿಂದ ಶುಲ್ಕ ಪಡೆಯಬಹುದು, ಕೆಲವರಿಂದ ಬೇಡ ಎನ್ನುತ್ತೀರಿ. ಇವೆರಡೂ ಒಟ್ಟಿಗೆ ಹೇಗೆ ನಡೆದಾವು? ಶುಲ್ಕ ಪಡೆದು ಏನು ಮಾಡುತ್ತೀರಿ? ನಮ್ಮ ಗುರಿ ಸ್ವಾವಲಂಬನ. ಶುಲ್ಕವನ್ನು ವಿಧಿಸಬೇಡಿ. ಹಿಂದೆ ಸಾಧ್ಯವಿದ್ದಷ್ಟು ಮಟ್ಟಿಗೆ ಸ್ವಾವಲಂಬಿಯಾಗಿರುವ ಶಿಕ್ಷಣ ಎನ್ನುತ್ತಿದ್ದೆ. ಆದರೆ ನಮ್ಮ ಅನುಭವ, ಜೈಲಿನಲ್ಲಿ ವಿಚಾರಮಾಡಲು ದೊರೆತ ಅವಕಾಶಗಳಿಂದ ಸ್ವಾವಲಂಬನೆಯೇ ಒರೆಗಲ್ಲು ಎಂದು ನನಗೆ ನಂಬಿಕೆಯಾಗಿದೆ. ಸ್ವಾವಲಂಬನೆಯಿಲ್ಲದಿದ್ದರೆ ನಮ್ಮ ಹುಡುಗ ಹುಡುಗಿಯರು ಅಶಿಕ್ಷಿತರಾಗಿಯೆ ಉಳಿದಾರು. ಇತರರು ನಮ್ಮನ್ನು ಹಳಿದಾರು. ಎಂಬ ಚಿಂತೆ ಬೇಡ. ಸ್ವಾವಲಂಬನೆ ಸ್ವಾತಂತ್ರ್ಯದ ಕುರುಹು. ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಇದು ಅರ್ಥವಾದರೆ ಅದರಿಂದ ಸೂಸುವ ಪರಿಮಳವನ್ನು ಅವರು ಅನುಭವಿಸಿಯಾರು. ಪಟ್ಟಣಗಳಲ್ಲಿರುವ ಅರಮನೆಗಳಂಥ ಕಾಲೇಜುಗಳಲ್ಲಿ ನಮ್ಮ ಆದರ್ಶ. ಹಳ್ಳಿಗಳನ್ನು ಹೀರಿ ಅವನ್ನು ಕಟ್ಟಿದಾರೆ. ಶಿಕ್ಷಣ ಅಗ್ಗವಾಗಿರಬೇಕು, ಸ್ವಾವಲಂಬನೆಯೆ ನಮ್ಮ ತಳಹದಿ, ಶಾಲೆಯನ್ನು ನಡೆಸುವ ವೆಚ್ಚವೆಲ್ಲವೂ ಅವರಿಂದ ಬರಬೇಕು. ವಿದ್ಯಾರ್ಥಿಗಳೂ ಶಿಕ್ಷಕರೂ ಒಂದೇರೀತಿ ದುಡಿದು ಆ ವೆಚ್ಚವನ್ನು ಗಳಿಸಬೇಕು. ಯೋಚಿಸಿದಷ್ಟೂ ಎಷ್ಟು ಚೆನ್ನ ಈ ವಿಷಯ ಎನಿಸುತ್ತಿದೆ ಹೆಚ್ಚು ಹೆಚ್ಚಾಗಿ, ಇದನ್ನು ನಾವು ಮಾಡಿತೋರಿಸಿದರೆ,

ಇತರರು ಒಪ್ಪಿದರೆ ಇನ್ನೂ ಚೆನ್ನ....ಸ್ವಾವಲಂಬನೆ ರಾಮಬಾಣಔಷಧ. ಸದ್ಯಕ್ಕೆ ಕಟ್ಟಡದ ವೆಚ್ಚವನ್ನು ಬಿಟ್ಟು, ನಡೆಸುವ ವೆಚ್ಚ ಬಂದರೆ ಸಾಕು.

ಸಂಗೀತ ಕೈಗಾರಿಕೆಯಲ್ಲ, ಅದನ್ನು ಕಲಿಸಬೇಕೆ, ಬೇಡವೆ ಎಂಬುದು ಪ್ರಶ್ನೆ. ಇದರಲ್ಲಿ ಎರಡು ಮುಖ—ಶಿಕ್ಷಣ ಸಾಧನವಾಗಿ ಸಂಗೀತ, ಉಪಜೀವನ ಸಾಧನವಾಗಿ ಸಂಗೀತ.

ಶಾರೀರಕ ಶಿಕ್ಷಣ ಇರುವ ಹಾಗೆಯೆ, ಪ್ರತಿಯೊಂದು ಶಾಲೆಯಲ್ಲೂ ಸ್ವಲ್ಪವಾದರೂ ಸಂಗೀತ ಇರಬೇಕು. ಮಕ್ಕಳಿಗೆ ಲಯಬದ್ಧ ಚಲನವಲನವನ್ನು ಕಲಿಸಬೇಕು. ಅದರಿಂದ ಸಾಮಾನ್ಯವಾಗಿ ಜನರ ಮಾತು—ನಡಿಗೆಗಳಲ್ಲಿ ಒಂದು ಶಿಸ್ತು—ಸಾಮರಸ್ಯ ತರಬೇತು, ಒಂದು ಮೊಳೆ ಹೊಡೆಯುವುದರಲ್ಲೂ ಸಂಗೀತವಿರಬೇಕು. ವಿಶ್ವ ಸಂಗೀತಮಯ, ಅದನ್ನು ಕೈಬಿಡುವುದು ನನಗೆ ಇಷ್ಟವಿಲ್ಲ. ಅದರಿಂದ ನೇರಾಗಿ ಹಣಬರದಿದ್ದರೂ ಚಿಂತೆಯಿಲ್ಲ.

ಆದರೆ ಹಣಗಳಿಸಲೆಂದು ಸಂಗೀತವನ್ನು ಕಲಿಸುವುದು ಕೆಟ್ಟದು, ಅದನ್ನು ಒಂದು ಕಸಬಾಗಿ ಮಾಡಿದರೆ ನಮ್ಮ ಕೆಲಸವೆಲ್ಲ ಕೆಟ್ಟುಹೋದೀತು....ಉಳಿದುದನ್ನೆಲ್ಲಿ ಬಿಟ್ಟು ಬರೀ ಸಂಗೀತದ ಉಪಾಧ್ಯಾಯರನ್ನು ನಾವು ತರಬೇತು ಮಾಡುವುದಿಲ್ಲ, ಅದು ತಪ್ಪು, ಊಟ ಮಾಡುವುದು ಹೇಗೋ ಹಾಗೆ ಸಂಗೀತವೂ ಜೀವನದ ಒಂದು ಅಂಶ.

## ಬಲಾತ್ಕಾರ ಶಿಕ್ಷಣ

ಶಿಕ್ಷಣವನ್ನು ಕಡ್ಡಾಯ ಮಾಡಿದರೆ ನಾನು ವಿರೋಧಿಸದೆ ಇರಲಾರೆ— ಎಂಬ ನಂಬಿಕೆ ನನಗೆ ಇಲ್ಲ. ಎಂಥದೇ ಆಗಲಿ, ಬಲಾತ್ಕಾರವೆಂದರೆ ನನಗೆ ಹಗೆ. ಬಲಾತ್ಕಾರವಾಗಿ ದೇಶವನ್ನು ನೀತಿವಂತವಾಗಿ ಮಾಡುವುದೆಂದರೆ ಹೇಗೋ ಬಲಾತ್ಕಾರವಾಗಿ ದೇಶಕ್ಕೆ ಶಿಕ್ಷಣ ಕೊಡುವುದು ಎಂದರೂ ಹಾಗೇ. ಆದರೆ ಇರುವ ಹೆಂಡದ ಅಂಗಡಿಗಳನ್ನು ಮುಚ್ಚಿ, ಹೊಸವನ್ನು ತೆರೆಯಲು ನಿರಾಕರಿಸಿ ಹೆಂಡ ಕುಡಿಯುವುದನ್ನು ಹೇಗೆ ಅಳಿಯಿಸಬಯಸುತ್ತೇನೋ, ಹಾಗೆ ಶಿಕ್ಷಣಕ್ಕೆ ಇರುವ ಅಡಚಣೆಗಳನ್ನೂ ದೂರಮಾಡಿ ಉಚಿತ ಶಾಲೆಗಳನ್ನು ತೆರೆದು, ಜನರ ಆವಶ್ಯಕತೆಗಳಿಗೆ ತಕ್ಕಂತೆ ಅವನ್ನು ರೂಪಿಸಿ ನಿರಕ್ಷರತೆಯನ್ನು ತೊಲಗಿಸುತ್ತೇನೆ. ಈಗಂತೂ ನಾವು ಉಚಿತ ಶಿಕ್ಷಣವನ್ನು ದೊಡ್ಡ ಪ್ರಮಾಣದಲ್ಲಿ ಪ್ರಯೋಗಿಸಿ ನೋಡಿಯೆ ಇಲ್ಲ. ತಂದೆ ತಾಯಿಗಳನ್ನು ಒಲಿಸಲು ಏನೂ

ಮಾಡಿಲ್ಲ. ಅಕ್ಷರ ಜ್ಞಾನದ ಬೆಲೆಯನ್ನು ಸಾಕಷ್ಟು ಪ್ರಚಾರ ಮಾಡಿಯೂ ಇಲ್ಲ. ತರಬೇತು ಮಾಡಲು ತಕ್ಕ ಶಿಕ್ಷಕರೂ ಇಲ್ಲ. ಆದ್ದರಿಂದ ಬಲಾತ್ಕಾರದ ಬಗ್ಗೆ ಯೋಚಿಸಲಿಕ್ಕೂ ಇನ್ನೂ ಕಾಲ ಬಂದಿಲ್ಲವೆಂದು ನನ್ನ ಅಭಿಪ್ರಾಯ. ಅಷ್ಟೇ ಅಲ್ಲ, ಬಲಾತ್ಕಾರ ಶಿಕ್ಷಣದ ಪ್ರಯೋಗ ಎಲ್ಲಾ ಕಡೆಯಲ್ಲೂ ಸಫಲವಾಗಿದೆಯೋ ಇಲ್ಲವೋ ಹೇಳಲಾರೆ, ಬಹುಜನಕ್ಕೆ ವಿದ್ಯಾಭ್ಯಾಸಬೇಕು ಎನಿಸಿದರೆ ಬಲಾತ್ಕಾರ ಅಗತ್ಯವೇ ಇಲ್ಲ, ಅವರಿಗೆ ಹಾಗೆನಿಸದಿದ್ದರೆ ಬಲಾತ್ಕಾರ ಹಾನಿಕರ. ಬಹುಜನರ ವಿರೋಧವಿದ್ದರೂ ಶಾಸನಗಳನ್ನು ಮಾಡುವ ಸರಕಾರ ನಿರಂಕುಶ ಸರಕಾರ. ಮಕ್ಕಳ ಶಿಕ್ಷಣಕ್ಕೆ ಪೂರ್ಣ ಅನುಕೂಲತೆಗಳನ್ನು ಒದಗಿಸಿದೆಯೆ ಸರಕಾರ? ನೂರು ವರ್ಷಕ್ಕಿಂತ ಹೆಚ್ಚಾಗಿ ನಾವು ಬಲಾತ್ಕಾರಕ್ಕೆ ಸಿಕ್ಕೇ ಇದೇವೆ. ನಮ್ಮ ಅನುಮತಿ ಇಲ್ಲದೆಯೆ ಸರಕಾರ ನಮ್ಮ ಬಾಳಿನ ಎಷ್ಟೋ ಅಂಶಗಳಲ್ಲಿ ತನ್ನ ಪ್ರಭುತ್ವವನ್ನು ನಡೆಸುತ್ತಿದೆ. ಈ ಗಳಿಗೆಯಲ್ಲಿ ಎಷ್ಟೇ ಬಿನ್ನಹಮಾಡಿದರೂ ಬುದ್ಧಿ ಹೇಳಿದರೂ ಕಿವಿಗೊಡದಿರಬಹುದು. ಆದರೆ ರಾಷ್ಟ್ರವನ್ನು ಸ್ವೇಚ್ಛಾ ಪದ್ಧತಿಗೆ ಈಗಿನಿಂದಲೇ ಒಗ್ಗಿಸುವುದು ಒಳ್ಳೆಯದು. ಬಿನ್ನಹಗಳಿಗೆ ಏನೂ ಫಲವಾಗಿಲ್ಲ. ಸ್ವಯಂ ಪ್ರಯತ್ನದಿಂದ ಮಾಡಿದ ಸುಧಾರಣೆಗಳು ಯಾವುದೂ ಸಫಲವಾಗುವುದಿಲ್ಲವೆಂಬ ಅಭಿಪ್ರಾಯ ರೂಢಿಯಾಗಿಬಿಟ್ಟರೆ, ಸಮಾಜದ ಪ್ರಗತಿಗೆ ಕಂಟಕವಾಗುತ್ತದೆ. ಹಾಗೆ ಬೆಳೆದವರು ಸ್ವರಾಜ್ಯಕ್ಕೆ ಅನರ್ಹರಾಗುತ್ತಾರೆ.

ಆದ್ದರಿಂದ ಇವತ್ತೂ ಸ್ವರಾಜ್ಯ ಬಂದರೆ, ಪ್ರಾಥಮಿಕ ಶಿಕ್ಷಣ ಸ್ವತಂತ್ರ ಪ್ರಯೋಗವನ್ನು ಸರ್ವವಿಧದಲ್ಲಿಯೂ, ಮಾಡಿನೋಡುವವರೆಗೆ, ಅದು ವಿಫಲವಾಗುವವರೆಗೆ ಬಲಾತ್ಕಾರ ಶಿಕ್ಷಣವನ್ನು ನಾನು ವಿರೋಧಿಸಬೇಕೆಂಬುದು ಸ್ಪಷ್ಟ. ಹಿಂದುಸ್ಥಾನದಲ್ಲಿ ಐವತ್ತು ವರ್ಷಗಳ ಕೆಳಗಿನಕಿಂತ ಈಗ ಹೆಚ್ಚಾಗಿ ಇದೆ ನಿರಕ್ಷರತೆ, ತಂದೆ ತಾಯಿಗಳಿಗೆ ಮಕ್ಕಳನ್ನು ಓದಿಸುವ ಇಷ್ಟವಿಲ್ಲವೆಂದಲ್ಲ, ತಕ್ಕ ಅನುಕೂಲತೆಯಿಲ್ಲ, ಇದ್ದ ಅನುಕೂಲತೆ ಈ ವಿದೇಶೀ, ಅಸ್ವಾಭಾವಿಕ ಶಿಕ್ಷಣ ಪದ್ಧತಿಯ ದೆಸೆಯಿಂದ ಮಾಯವಾಗಿ ಹೋಗಿದೆ.

ತಮ್ಮ ಮನೆ ಬಾಗಿಲಿಗೇ ಉಚಿತವಾಗಿ ಶಿಕ್ಷಣವನ್ನು ತಂದರೆ, ಬೇಡ ಎಂದು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಅಸಡ್ಡೆ ತೋರುತ್ತಾರೆ ತಾಯಿತಂದೆಗಳಲ್ಲಿ ಅನೇಕರು ಎಂದು ತಿಳಿಯುವುದು ಸರಿಯಲ್ಲ.೮೭

## ವಯಸ್ಕರ ಶಿಕ್ಷಣ

ನನ್ನ ಅಭಿಪ್ರಾಯದಲ್ಲಿ ನಾವು ತಲೆತಗ್ಗಿಸಬೇಕಾದ್ದು, ವಿಷಾದಿಸಬೇಕಾದ್ದು ಅನಕ್ಷರತೆಗಲ್ಲ, ಅಜ್ಞಾನಕ್ಕಾಗಿ. ಆದ್ದರಿಂದ ವಯಸ್ಕರ ಶಿಕ್ಷಣದಲ್ಲಿ ಅಜ್ಞಾನ ನಿರಸನಕ್ಕಾಗಿ ಎಚ್ಚರಿಕೆಯಿಂದ ಆರಿಸಿದ ಶಿಕ್ಷಕರ ಮೂಲಕ, ಜಾಗರೂಕತೆಯಿಂದ ಸಿದ್ಧಪಡಿಸಿದ ಪಾಠಕ್ರಮ ಮುಖ್ಯವಾಗಿರಬೇಕು. ಅದರಂತೆ ವಯಸ್ಕರಾದ ಗ್ರಾಮಸ್ಥರ ಮನಸ್ಸಿಗೆ ಶಿಕ್ಷಣ ಕೊಡಬೇಕು. ಅವರಿಗೆ ಅಕ್ಷರಜ್ಞಾನ ಮಾಡಿಕೊಡುವುದಿಲ್ಲ ಎಂದಲ್ಲ. ಅಕ್ಷರವೂ ಒಂದು ಶಿಕ್ಷಣ ಸಾಧನ. ನಾನು ಅದಕ್ಕೆ ಬಹಳ ಬೆಲೆ ಕೊಡುತ್ತೇನೆ. ಅದರ ಗುಣವನ್ನು ತೆಗಳಲಾರೆ, ಅದನ್ನು ತಿರಸ್ಕರಿಸಲಾರೆ. ಪ್ರೊ. ಲಾಬಾಕ್ ವರ್ಣಮಾಲೆಯ ಅಭ್ಯಾಸವನ್ನು ಸುಲಭ ಮಾಡಿದಾರೆ, ಅದೇ ಮಾರ್ಗದಲ್ಲಿ ಪ್ರೊ. ಭಾಗವತರೂ ಬೇಕಾದಷ್ಟು ಕೆಲಸ ಮಾಡಿದಾರೆ.೮೮

ಪ್ರ: ವಯಸ್ಕರ ಶಿಕ್ಷಣದ ಯೋಜನೆಯಲ್ಲಿ ಅಕ್ಷರ ಪ್ರಚಾರ ಮುಖ್ಯವೋ, ಉಪಯುಕ್ತ ಜ್ಞಾನ ಪ್ರಸಾರ ಮುಖ್ಯವೋ?

ಉ: ಪ್ರಬುದ್ಧರಾಗಿ ಯಾವುದೋ ಒಂದು ವೃತ್ತಿಯನ್ನು ನಡೆಸುತ್ತಿರುವ ವಯಸ್ಕರಿಗೆ ಓದು-ಬರೆಹ ಮೊಟ್ಟ ಮೊದಲು ಅಗತ್ಯ. ಜನತೆಯ ನಿರಕ್ಷರತೆ ಹಿಂದುಸ್ಥಾನದ ಮಹಾ ಪಾಪ, ನಾಚಿಕೆಗೇಡಿನ ಅಪರಾಧ. ಅದನ್ನು ತೊಲಗಿಸಲೇಬೇಕು, ಆದರೆ ಅಕ್ಷರ ಪ್ರಚಾರದ ಚಳುವಳಿ ಬರೀ ಅಕ್ಷರ ಜ್ಞಾನದಲ್ಲೇ ಪರ್ಯವಸಾನವಾಗಬಾರದು. ಉಪಯುಕ್ತ ಜ್ಞಾನದ ಪ್ರಸಾರವೂ ಅದರ ಜೊತೆಯಲ್ಲಿ ನಡೆಯಬೇಕು. ಆದರೆ ಎರಡು ಕುದುರೆ ಸವಾರಿ ಒಟ್ಟಿಗೆ ಮಾಡದಂತೆ ಜಾಗರೂಕರಾಗಿರಬೇಕು.೮೯

ಹೊಸದಾಗಿ ಅಕ್ಷರ ಕಲಿತ ವಯಸ್ಕರು ಅದನ್ನು ಮರೆತು ಅನಕ್ಷರಸ್ಥರಾಗುತ್ತಾರೆ. ನಾವು ಕೊಡುವ ಈ ಅಲ್ಪಕಾಲದ ಶಿಕ್ಷಣದಲ್ಲಿ ಹೀಗೇ ಆಗುತ್ತದೆ. ಕೆಲಸಗಾರರು ಅದಕ್ಕಾಗಿ ಚಿಂತಿಸಬೇಕಾಗಿಲ್ಲ. ಹಳ್ಳಿಗರ ನಿತ್ಯ ಜೀವನದ ಅಗತ್ಯಗಳಿಗೆ ಶಿಕ್ಷಣವನ್ನು ಹೊಂದಿಸಿದರೆ ಆಗ ಈ ದೋಷ, ತಪ್ಪುತ್ತದೆ. ಬರೀ ಓದು ಬರೆಹ ಲೆಕ್ಕ, ಆದರೆ, ಈ ಪುಸ್ತಕ ಶಿಕ್ಷಣ. ಹಳ್ಳಿಯ ಜೀವನದ ಅಂಗವಾಗಬಾರದು. ಈಗಲೂ ಇಲ್ಲ, ಮುಂದೆಯೂ ಇಲ್ಲ, ಅವರಿಗೆ ನಿತ್ಯೋಪಯೋಗಕ್ಕೆ ಅನುಕೂಲವಾದ ಜ್ಞಾನವನ್ನು ನೋಡಬೇಕು. ಅದನ್ನೂ ಅವರ ಮೇಲೆ ಹೇರಬಾರದು, ಅವರಿಗೆ ಅದರಲ್ಲಿ ಆಸಕ್ತಿ ಇರಬೇಕು. ಈಗ ಇರು

ವುದು ಅವರಿಗೆ ಬೇಕಾಗಿಯೂ ಇಲ್ಲ, ರುಚಿಯಾಗಿಯೂ ಇಲ್ಲ, ಹಳ್ಳಿಯ ಗಣಿತ ಹಳ್ಳಿಯ ಭೂಗೋಳ, ಹಳ್ಳಿಯ ಇತಿಹಾಸ, ದಿನಬಳಕೆಗೆ ಬೇಕಾಗುವ ಭಾಷಾ ಜ್ಞಾನ—ಕಾಗದ ಪತ್ರ ಬರೆಯುವ ಓದುವ ಜ್ಞಾನ– ಗಳನ್ನು ಕೊಡಿ ಅವರಿಗೆ, ಆ ಜ್ಞಾನವನ್ನು ಅವರು ಸಂಪತ್ತಿನಂತೆ ಕಾಪಾಡಿಕೊಂಡು ಮುಂದಿನ ಸ್ಥಿತಿಗೆ ಏರುತ್ತಾರೆ, ತಮ್ಮ ದಿನಚರಿಯಲ್ಲಿ ಉಪಯೋಗವಾಗದ ಪುಸ್ತಕಗಳಿಂದ ಅವರಿಗೇನು ಲಾಭ ?೯೦

[ 1945ರಲ್ಲಿ ಹಿಂದುಸ್ಥಾನೀ ತಾಲೀಮೀ ಸಂಘದ ವಯಸ್ಕರ ಶಿಕ್ಷಣ ಸಮಿತಿ ಗಾಂಧೀಜಿಯ ಭೇಟಿ ಮಾಡಿತು ಪೂನಾದಲ್ಲಿ, ಆಗ ಗಾಂಧೀಜಿ ಅವರಿಗೆ ಹೇಳಿದುದು. ]

ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಡುವ ಮುನ್ನ ವಯಸ್ಕರ ಶಿಕ್ಷಣವನ್ನು ಕುರಿತು ನನ್ನ ವಿಚಾರವನ್ನು ತಿಳಿಸುತ್ತೇನೆ. ನಿರಂತರವೂ ನಾನು ಅದರ ಬಗ್ಗೆ ಯೋಚಿಸುತ್ತಿದೇನೆ—ಯೋಚಿಸಲೇಬೇಕು. ಮಧ್ಯ ಪ್ರಾಂತದಲ್ಲಿ ಈಗ ಕಾಲರಾ ಪಿಡುಬು ಬಾಧಿಸುತ್ತಿದೆ, ಅವನ್ನು ತಡೆಗಟ್ಟಲು ಸೇವಾಗ್ರಾಮಕ್ಕೆ ಡಾ|| ಸುಶೀಲಾ ನಾಯರರನ್ನು ಕಳಿಸಿದೆ. ಸೇವಾಗ್ರಾಮದ ಎಲ್ಲಾ ಸಂಸ್ಥೆಗಳ ವಿದ್ಯಾರ್ಥಿಗಳೂ ಕೆಲಸಗಾರರೂ ಈ ಪಿಡುಗನ್ನೂ ತಡೆಗಟ್ಟುವ ಕೆಲಸದಲ್ಲಿ ಪಾಲುಗೊಳ್ಳಬೇಕು ಎಂದೂ ಸೂಚಿಸಿದೆ.

ಈ ದೃಷ್ಟಿಯಿಂದ ಈ ಕೆಲಸವನ್ನು ನೋಡಿದರೆ ಈ ಕೆಲಸ ವಯಸ್ಕರ ಶಿಕ್ಷಣಕ್ಕೆ ಪ್ರತ್ಯಕ್ಷವಾಗಿ ಸಂಬಂಧಿಸಿದ್ದು ಎನಿಸುತ್ತದೆ. ಇದೇ ವಯಸ್ಕರ ಶಿಕ್ಷಣ. ಇವರ ಜೊತೆಯಲ್ಲೇ Education for life—ಜೀವನ ಶಿಕ್ಷಣ ಎಂಬ ಮಾತನ್ನು ರಚಿಸಿದೆ. ಜೀವನ ಶಿಕ್ಷಣ ಎಂದರೆ ಜೀವನ ಪರ್ಯಂತ ಶಿಕ್ಷಣ ವಲ್ಲ, ಜೀವನಕ್ಕಾಗಿ ಶಿಕ್ಷಣ—ಬರೀ ಅಕ್ಷರ ಜ್ಞಾನಕ್ಕಾಗಿ ಅಲ್ಲ, ಈ ದೃಷ್ಟಿ ಯಿಂದ ವಯಸ್ಕರ ಶಿಕ್ಷಣವನ್ನು ನೋಡಿದರೆ ಅದರಲ್ಲಿ ಸಮಸ್ತವೂ ಅಡಕವಾಗಿದೆ. ನನಗೆ ಇವತ್ತು ಆ ಸ್ವಾತಂತ್ರ್ಯವಿದ್ದಿದ್ದರೆ ಇದೊಂದೇ ಮಾತಿನ ಮೇಲೆ ದೃಢ ವಾಗಿ ನಿಂತೇನು–ಕಾಲರಾ ಪಿಡುಗನ್ನು ತೊಲಗಿಸುವುದು ಹೇಗೆ? ಅದೊಂದು ಸಾಕು. ನನ್ನ ಕೈಗಾರಿಕೆ, ನನ್ನ ಸಾಹಿತ್ಯಜ್ಞಾನ ಎಲ್ಲದನ್ನೂ ಮರೆತು ಕಾಲರಾ ತಡೆಗಟ್ಟುವುದರ ಸಮಸ್ತ ತಿಳಿವನ್ನೂ ಕಲಿಸಿಯೇನು, ನನಗೆ ಈಗ ತಾರೀಖು ಮರೆತು ಹೋಗಿದೆ, ಒಂದು ಸಲ ಇಡೀ ಲಂಡನ್ ಪಟ್ಟಣವನ್ನೆ ನಾಶಮಾಡಿದ ಪ್ಲೇಗು ಬಂದಿತ್ತು, ಆಮೇಲೆ ಲಂಡನ್ನಿಗೆ ಬೆಂಕಿ ಬಿತ್ತು, ಅದನ್ನು ಬೆಂಕಿ ಎನ್ನ

ಬಾರದು, ಭಗವಂತನ ದಯೆ ಎನ್ನಬೇಕು, ಆ ಬೆಂಕಿ ಬೀಳದಿದ್ದರೆ ಈಗ ಲಂಡನ್ನಿದ ಹೆಸರು, ಗುರುತು ಯಾವುದೂ ಇರುತ್ತಿರಲಿಲ್ಲ. ಹಾಗೆ ಆ ಪಿಡುಗನ್ನು ಲಂಡನ್ನಿನಿಂದ ತೊಲಗಿಸಿದಂತಾಯಿತು ; ಗ್ಲಾಸ್ಗೋದಿಂದಲೂ ತೊಲಗಿ ಹೋಯಿತು. ಜೋಹಾನಿಸ್ ಬರ್ಗಿನಿಂದ ಅದನ್ನು ತೊಲಗಿಸುವಾಗ ನಾನೇ ಅದರಲ್ಲಿ ಭಾಗವಹಿಸಿದೆ. ಆ ಸೋಂಕನ್ನು ಎಷ್ಟು ಜಾಣತನದಿಂದ, ಎಷ್ಟು ಧಾರಾಳವಾದ ವೆಚ್ಚದಿಂದ ಎಷ್ಟು ಉತ್ಸಾಹದಿಂದ ಎಷ್ಟು ಅಚ್ಚುಕಟ್ಟಿನಿಂದ ನಾಶಮಾಡಿದೆವೆಂದರೆ, ಆ ಪಿಡುಗು ಮತ್ತೆ ಬಂದೇ ಇಲ್ಲ. ಅದೇ ನಮ್ಮ ಹಳ್ಳಿಗಳಿಗೆ ಈ ಪಿಡುಗು ಬಡಿದರೆ ಸುಮ್ಮನೆ ದೇವಿಗೆ ಸಿಟ್ಟು ಬಂದಿದೆಯೆಂದು ಹೇಳಿ ಬಿಡುತ್ತೇವೆ. ವಯಸ್ಕರ ಶಿಕ್ಷಣದ ಕೆಲಸ ಇದೇ, ಇಂಥದೇ.

ಪ್ರಶ್ನೆ :—ಹಳ್ಳಿಯಲ್ಲಿ ವಯಸ್ಕರ ಶಿಕ್ಷಣಕ್ಕೇ ಬೇರೆ ಒಬ್ಬ ಕೆಲಸಗಾರ ಬೇಕೋ ಅಥವಾ ಸಮಗ್ರ ಗ್ರಾಮಸೇವಕನೇ ಇದನ್ನೂ ಮಾಡಬೇಕೋ ? ವಯಸ್ಕರ ಶಿಕ್ಷಣದ ಕೆಲಸಗಾರ ಪೂರ್ಣ ಸಮಯದವನಾಗಬೇಕೋ ಅಥವಾ ಸ್ವಲ್ಪ ಹೊತ್ತು ಕೊಡುವವನು ಸಾಕೋ. ?

ಉತ್ತರ :—ಈ ಪ್ರಶ್ನೆಗೆ ಎರಡು ಬಗೆಯ ಉತ್ತರ ಸಾಧ್ಯ , ವಯಸ್ಕರ ಶಿಕ್ಷಣದ ವಿಷಯವನ್ನು ಅರಿಯದೆ ಸಮಗ್ರ ಗ್ರಾಮಸೇವೆ ಮಾಡಲು 'ಹಳ್ಳಿಗೆ ಹೋಗುವ ಕೆಲಸಗಾರ ಗ್ರಾಮಸೇವಕನೇ ಅಲ್ಲ. ವಯಸ್ಕರ ಶಿಕ್ಷಣದ ನಿಜವಾದ ಅರ್ಥದ ವೈಶಾಲ್ಯವನ್ನು—ಎಂದರೆ ಅದರಲ್ಲಿ ಜೀವನದ ಸಮಸ್ತ ಅಂಗಗಳೂ ಸೇರಿವೆ, ಯಾವುದನ್ನೂ ಅದರಲ್ಲಿ ಬಿಡುವಂತಿಲ್ಲ—ಎಲ್ಲ ಸಂಸ್ಥೆಗಳೂ ಒಪ್ಪಿಕೊಂಡರೆ ಇದಕ್ಕಾಗಿ ಪ್ರತ್ಯೇಕ ಮನುಷ್ಯ ಒಬ್ಬನಿಗೆ ಅವಕಾಶವಿರದು. ಅಥವಾ ಒಬ್ಬ ಪ್ರತ್ಯೇಕ ಮನುಷ್ಯ ಅಲ್ಲಿಗೆ ಹೋದರೆ ಉಳಿದವರಿಗೆ ಯಾರಿಗೂ ಏನೂ ಕೆಲಸ ಇರದು. ನಿಮ್ಮ ಮುಂದೆ ಆದರ್ಶವನ್ನು ಮಂಡಿಸ ಬಯಸುತ್ತೇನೆ. ಆದರ್ಶವನ್ನು ಸಾಧಿಸಲು ಪ್ರಯತ್ನಿಸೋಣ, ವಾಸ್ತವಾಂಶ ಇಷ್ಟು. ವಯಸ್ಕರ ಶಿಕ್ಷಣಕ್ಕೆ ನಿಜವಾಗಿಯೂ ಯೋಗ್ಯನಾದವನು ಒಬ್ಬ ಮನುಷ್ಯ ಇದ್ದರೆ, ಅಲ್ಲಿ ಬೇರೆ ಯಾವ ಕೆಲಸಗಾರರಿಗೂ ಸ್ಥಳ ಇರದು. ಅಂಥ ಮನುಷ್ಯ ಸಿಗುವವರೆಗೆ ನಮ್ಮಲ್ಲಿ ಇದ್ದವರನ್ನೇ ಕಳಿಸೋಣ. ನಿಜವಾದ ವಯಸ್ಕರ ಶಿಕ್ಷಣ ಒಮ್ಮೆ ನಮಗೆ ಅರ್ಥವಾದರೆ, ನಿಜವಾದ ಶಿಕ್ಷಕ ಒಬ್ಬ ನಮಗೆ ಸಿಕ್ಕರೆ, ಆಗ ಅವನೇ ಗ್ರಾಮಸೇವಕನಾಗುತ್ತಾನೆ. ತನ್ನ ಕೆಲಸಕ್ಕೆ ಬೇಕಾದ ಸಾಮಗ್ರಿಯನ್ನೂ ಕೆಲಸಗಾರರನ್ನೂ ಅವನೇ ಹುಟ್ಟಿಸಿಕೊಳ್ಳುತ್ತಾನೆ, ಅವನು ದುರ್ಬಲನಲ್ಲ.

ನನಗೆ ಸಹಾಯಕ್ಕಾಗಿ ಸ್ವಯಂಸೇವಕರನ್ನು ಕೊಡಿ ಎಂದು ಒಬ್ಬ ಮನುಷ್ಯ ಕೇಳಿದರೆ ಅವನು ವಯಸ್ಕರ ಶಿಕ್ಷಣಕ್ಕೆ ಸರಿಯಾದ ಶಿಕ್ಷಕನಲ್ಲ ಎನ್ನುತ್ತೇನೆ. ವಯಸ್ಕರ ಶಿಕ್ಷಣದ ಕೆಲಸಗಾರ ಗಾರುಡಿಗನಾಗಿರಬೇಕು. ತನ್ನ ಇಂದ್ರಜಾಲ ದಿಂದ ಅದನ್ನೂ ಇದನ್ನೂ ಎಲ್ಲವನ್ನೂ ಸೃಷ್ಟಿಸಬೇಕು. ಅಂಥವನು ನಿಮ್ಮಿಂದ ಕಿಮುಗೊಂದು ಬಿಡಿಗಾಸೂ ಬೇಡ ಎಂದಾನು. ತನಗೆ ಎಷ್ಟು ಕಾಲ ಬೇಕು ಎಂಬು ದನ್ನು ತಾನೇ ನಿರ್ಧರಿಸುತ್ತಾನೆ. ಅಂಥ ಮನುಷ್ಯ ಏನೇ ಮಾಡಲಿ ಸದಾ ಕಾಲವೂ ವಯಸ್ಕರ ಶಿಕ್ಷಣವನ್ನೇ ನಡೆಸುತ್ತಿದಾನೆ. ಬೇರೆ ಏನನ್ನೂ ಅವನು ಮಾಡಲಾರ.

ಪ್ರ: ವಯಸ್ಕರ ಶಿಕ್ಷಣದ ಕೆಲಸಗಾರನಿಗೆ ತರಬೇತು ಕೊಡಲು ಎಷ್ಟು ಕಾಲ ಬೇಕು? ಅವನಿಗೆ ಎಂಥ ಶಿಕ್ಷಣ ಕೊಡಬೇಕು?

ಉ: ಅವನಿಗೆ ಸ್ವಲ್ಪ ಕೈಗಾರಿಕೆ, ಸ್ವಲ್ಪ ವ್ಯವಸಾಯ ಕೊಂಚ ಸಾಮಾನ್ಯ ವಿಜ್ಞಾನ ಇವನ್ನು ಕಲಿಸಬೇಕು ಎಂದು ನಾನು ಹೇಳಿದರೆ ಅಷ್ಟಕ್ಕೆ ನೀವು ತೃಪ್ತಿಗೊಳ್ಳಬಾರದು. ಇಂಥ ತರಬೇತು ನಮ್ಮನ್ನು ನಿಜವಾಗಿ ಎಷ್ಟು ದೂರ ಒಯ್ದೀತು ಎಂದು ನಿಮ್ಮನ್ನೇ ನಾನು ಕೇಳಬೇಕು. ಮೊಟ್ಟ ಮೊದಲು, ಅವನು ಯಾವ ತರಬೇತಿಗಾಗಿ ಬಂದಿದಾನೋ ಅದನ್ನು ಪಡೆಯಲು ಅವನು ಅರ್ಹನೇ ಎಂಬುದು ಮೊದಲು ಪರೀಕ್ಷೆಯಾಗಬೇಕು. ಇದರಲ್ಲಿ ವಯಸ್ಸಿನ ಪ್ರಶ್ನೆಯೇ ಇಲ್ಲ. ಪಿ. ಹೆಚ್. ಡಿ. ಪಾಸುಮಾಡಿದ ಮನುಷ್ಯ ಒಬ್ಬ ನನ್ನ ಬಳಿಗೆ ಬಂದ ಎನ್ನಿ. ಅವನಿಗೆ ಪ್ರಶ್ನೆಹಾಕಿ ನಿಜವಾಗಿಯೂ ಕಲಿಯುವ ಬಯಕೆಯಿಂದ ಬಂದಿದಾನೋ ಅಥವಾ ಸುಮ್ಮನೆ ವಿನೋದಕ್ಕಾಗಿ ಬಂದಿ ದಾನೋ ಮೊಟ್ಟಮೊದಲು ತಿಳಿದುಕೊಳ್ಳುತ್ತೇನೆ. ಅವನು ನಿಜವಾಗಿಯೂ ಪ್ರಾಮಾಣಿಕ, ನನಗೆ ಏನು ಬೇಕೋ ಅವನಿಗೆ ಅರ್ಥವಾಗಿದೆ, ತಾನು ಹಿಂದೆ ಕಲಿತದ್ದನ್ನೆಲ್ಲಾ ಪಕ್ಕಕ್ಕೆ ತಳ್ಳಿ ಹಾಗೂ ಮರೆತು ಈ ಕೆಲಸಕ್ಕೆ ಸಿದ್ಧವಾಗಿದಾನೆ ಎನಿಸಿದರೆ ಆಗ ಅವನ ಬುದ್ಧಿ ಸರಿಯಾಗಿ ಬೆಳೆದಿದೆ ಎಂದುಕೊಳ್ಳುತ್ತೇನೆ. ಖಂಡಿತವಾಗಿಯೂ ಅವನ ಬುದ್ಧಿಯನ್ನು ನಾನು ಉಪಯೋಗಿಸಿಕೊಳ್ಳುತ್ತೇನೆ. ಆದರೆ ಪೂರಾ ಹೊಸದಾರಿಯಲ್ಲಿ. ಅವನ ಕೈಗೆ ಒಂದು ರಾಟೆ ಕೊಡುತ್ತೇನೆ. ಇದರಿಂದ ನೀನು ಏನು ಮಾಡಬಹುದೋ ಎಲ್ಲಾ ಮಾಡು ಎನ್ನುತ್ತೇನೆ. ಹೀಗೆ ಅವನನ್ನು ಹಳ್ಳಿಗನನ್ನಾಗಿ ಮಾಡುತ್ತೇನೆ.

ಇನ್ನೊಬ್ಬ ಮನುಷ್ಯ ಬರುತ್ತಾನೆ, ನಿರಕ್ಷರನಾದ ಒಬ್ಬ ಹಳ್ಳಿಗ.

ಆರೋಗ್ಯವಂತ, ದೃಢಾಂಗ; ಅವನಿಗೆ ನೂಲಲು ಬರುತ್ತದೆ. ಅವನನ್ನು ನಾನು ಪರೀಕ್ಷಿಸುವ ರೀತಿಯೇ ಬೇರೆ. ನನ್ನ ಬಳಿಗೆ ಯಾರೇ ಬರಲಿ, ಹೇಗಾದರೂ ಬರಲಿ, ಅವನಿಗೆ ಸ್ವಾಗತವಿದ್ದೇ ಇದೆ. ತನಗಿಂತ ಆ ಇನ್ನೊಬ್ಬ ಮನುಷ್ಯ ಉತ್ತಮ, ತಾನು ಕಡಮೆ ಎಂದು ಹಳ್ಳಿಗನಿಗೆ ಅನಿಸುವಂತೆ ಮಾಡಬಾರದು. ಹಳ್ಳಿಗನೇ ಇಲ್ಲದಿದ್ದರೆ ಪಟ್ಟಣ ಎಂದೋ ಹಾಳಾಗಿಹೋಗುತ್ತಿತ್ತು ಎಂಬುದನ್ನು ಆ ಪಿ.ಹೆಚ್.ಡಿ. ಯೋಚಿಸಬೇಕು. ತನ್ನದು ಏನೂ ಲೆಕ್ಕವಿಲ್ಲ. ಇನ್ನೊಬ್ಬ ಮನುಷ್ಯನೇ ಸಮಸ್ತವೂ ಎಂಬ ತಪ್ಪು ಅಭಿಪ್ರಾಯ ಹಳ್ಳಿಯವನ ತಲೆಯಲ್ಲಿ ಹೊಕ್ಕಿದೆ. ಆದ್ದರಿಂದ ನನ್ನ ಮೊದಲನೆ ಪಾಠ ಅವರಿಬ್ಬರೂ ಒಂದೇ ಮಟ್ಟದವರು ಎಂದು ತೋರಿಸಿಕೊಡುವುದು. ಒಬ್ಬನಿಗೆ ಒಂದು ಸಾಮರ್ಥ್ಯವಿದೆ ಇನ್ನೊಬ್ಬನಿಗೆ ಇನ್ನೊಂದು ಇಬ್ಬರನ್ನೂ ಒಟ್ಟಿಗೆ ಸೇರಿಸಬೇಕು.

ಪ್ರತ್ಯಕ್ಷ ಕಾರ್ಯದ ನಿಮ್ಮ ಪ್ರಶ್ನೆಗೆ ನಾನು ಉತ್ತರ ಕೊಟ್ಟಿಲ್ಲ. ಅದು ನನ್ನ ಕೆಲಸವಲ್ಲ. ಜೀವಂತ ಚೇತನವನ್ನೂ, ಕೆಲಸದ ಸ್ಪಷ್ಟ ದರ್ಶನವನ್ನೂ ನೀಡುವುದು ನನ್ನ ಕೆಲಸ.

ಪ್ರ :—ಕೆಲಸಗಾರನ ಶಿಕ್ಷಣಕ್ಕೆ ಎಷ್ಟು ಕಾಲ ಬೇಕು?

ಉ :—ಇದಕ್ಕೆ ಕಾಲವೂ ಇಲ್ಲ ಅವಧಿಯೂ ಇಲ್ಲ. ಅವನಿಗೆ ಎಷ್ಟರ ಮಟ್ಟಿಗೆ ನಾವು ಶಿಕ್ಷಣ ಕೊಡಬಹುದೋ ನಿಮಗೂ ಗೊತ್ತಿಲ್ಲ, ನನಗೂ ಗೊತ್ತಿಲ್ಲ. ಅವನು ಸ್ವಾವಲಂಬಿ ಆಗುವವರೆಗೆ ಅವನಿಗೆ ನಾವು ದಾರಿ ತೋರಿಸಬೇಕು. ಅಲ್ಲಿಯವರೆಗೆ ಅವನ ಶಿಕ್ಷಣ ಮುಗಿಯಿತು ಎಂದು ತಿಳಿಯುವಂತಿಲ್ಲ. ಅವನು ನಮ್ಮ ಜತೆಯಲ್ಲಿರಬೇಕು. ಅವನ ವಿಶ್ವಾಸವನ್ನು ನಾವು ಗಳಿಸದಿದ್ದರೆ ಅದು ನಮ್ಮ ತಪ್ಪು. ಇದು ನನ್ನ ಸ್ವಂತ ವಿಶಿಷ್ಟಕಾರ್ಯ. ನನ್ನ ಅನುಭವದಿಂದ ನಿಮಗೆ ಹೇಳುತ್ತಿದೇನೆ. ನಿರಂತರವೂ ನಾನು ತರಬೇತು ಮಾಡುತ್ತಲೇ ಇದೇನೆ. ಕೆಲವರು ಯಾವಜ್ಜೀವವೂ ಇದ್ದುಬಿಡುತ್ತಾರೆ. ಕೆಲವರು ಸ್ವಲ್ಪಕಾಲ ಆದ ಮೇಲೆ ಹೊರಟುಹೋಗುತ್ತಾರೆ. ನನ್ನ ಸ್ವಾನುಭವ, ವಿಚಾರಗಳ ಮೂಲಕ ಇದಕ್ಕೆ ಯಾವ ಅವಧಿಯನ್ನೂ ಗೊತ್ತುಮಾಡಬಾರದು ಎಂಬ ತೀರ್ಮಾನಕ್ಕೆ ಬಂದಿದೇನೆ. ಯಾರಾದರೂ ಬಂದರೆ, ಒಳ್ಳೆಯದು. ಬರಲಿಲ್ಲವೋ ಚಿಂತೆಯಿಲ್ಲ. ಯಾರನ್ನು ನಾವು ತೆಗೆದುಕೊಳ್ಳುತ್ತೇವೋ ಅವನಿಗೆ ಯಾವ ಅವಧಿಗಿವಧಿ ಇಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಯೋಣ. ತನ್ನ ಕೆಲಸವನ್ನು ಸತ್ಯವಾಗಿ, ಚೆನ್ನಾಗಿ ಮಾಡುತ್ತ ತನ್ನ ಸಮಯವನ್ನು ಯೋಗ್ಯ

ವಾಗಿಯೂ ಪೂರ್ಣವಾಗಿಯೂ ಉಪಯೋಗಿಸುವ ಪ್ರಾಮಾಣಿಕ ಮನುಷ್ಯನ ಅಜ್ಞಾನ ದಿನದಿನವೂ ಕಡಮೆಯಾಗುತ್ತ ಬರುತ್ತದೆ. ಏನೇ ಉತ್ಪತ್ತಿಯಾಗಲಿ, ಇಬ್ಬರೂ ಅದಕ್ಕೆ ವಿಶ್ವಸ್ತರಾಗಿರಿ. ಇದೇ ನಿಜವಾದ ಸಹಕಾರ. ಅವನು ಸಿದ್ಧನಾದಾಗ ಬೇಕಾದರೆ ಅವನು ಹೋಗಲಿ. ಕಾಲು ಶತಮಾನವಾದರೂ ಸರಿಯೆ, ಸ್ವಾವಲಂಬಿಯಾಗುವವರೆಗೆ ಅವನು ಇದ್ದೇ ಇರಬೇಕು ಎನ್ನುತ್ತೇನೆ—ನನ್ನ ಸಂಸ್ಥೆಯನ್ನು ಕಟ್ಟಿದರೆ ಹಾಗೆ ಕಟ್ಟುತ್ತೇನೆ. ಕಟ್ಟಕಡೆಯಲ್ಲಿ ನಾವು ಪ್ರಪಂಚಕ್ಕೆ ಉತ್ತರ ಹೇಳಬೇಕಲ್ಲ. ಸದಾ ಕಾಲವೂ ನಾವು ದಿವಾಳಿಯೇ. ನಮ್ಮ ಆದರ್ಶವನ್ನು ಮುಟ್ಟಲಾರದೆ ಹೋಗುತ್ತೇವೆ. ಆದರೆ ಒಮ್ಮೆ ನಿಜವಾಗಿಯೂ ಗಿಡವನ್ನು ನೆಟ್ಟರೆ ಫಲ ಬಂದೇ ಬರುತ್ತದೆ. ಇದು ನಮ್ಮ ಆದರ್ಶವಾಗಿರಲಿ. ಬಂದವರು ಪ್ರತಿಯೊಬ್ಬರೂ ಸೆರೆಮನೆಯಲ್ಲಿ ಅನಿರ್ದಿಷ್ಟ ಅವಧಿಯವರೆಗೆ ತಾನು ಸ್ಥಾನಬದ್ಧ ಎಂದು ತಿಳಿದುಕೊಳ್ಳಲಿ.

ನಮ್ಮೊಡನೆ ಅವನು ಪ್ರಮಾಣಿಕನಾಗಿರಬೇಕು ಎಂದು ನಾವು ನಿರೀಕ್ಷಿಸುವಂತೆಯೇ ನಾವೂ ಅವನೊಡನೆ ಪ್ರಾಮಾಣಿಕರಾಗಿರಬೇಕು. ನಾವು ಏನು ಮಾಡಿದೆವೋ ಮಾಡಿದೇವೆ. ಇತರರು ಏನಾದರೂ ಬಯಸಲಿ, ಒಂದು ಕಾಲಾವಧಿಯನ್ನು ಮಾತ್ರ ಗೊತ್ತು ಮಾಡಬೇಡಿ. ಈ ನಿರ್ದಿಷ್ಟ ಕಾಲದ ದಬ್ಬಾಳಿಕೆಗೆ ನಾವು ಒಳಗಾಗುವುದು ಬೇಡ. ನಮ್ಮ ಕರ್ತವ್ಯ ಮನುಷ್ಯನನ್ನು ಸರ್ವ ವಿಧದಲ್ಲಿಯೂ ಯೋಗ್ಯನನ್ನಾಗಿ ಮಾಡುವುದು.

ಪ್ರ :—ಸ್ವಾವಲಂಬನೆಯ ನಿಜವಾದ ಅರ್ಥ ಏನು? ತನ್ನ :ಸಂಸಾರ ನಡೆಸಲು ದಿನವೂ ಎಂಟು-ಹತ್ತು ಗಂಟೆ ದುಡಿಯಬೇಕಾದ ವಯಸ್ಕನ ವಿಷಯದಲ್ಲಿ ಸ್ವಾವಲಂಬನೆ ಎಂದರೇನು ?

ಉ :—ಅವನು ಎಂಟು ಗಂಟೆ ದುಡಿಯುತ್ತಿರಬಹುದು. ಆದರೆ ತನ್ನ ಸಂಸಾರದ ಚಿಂತೆ ಮಾಡುತ್ತಿದಾನೆ ಎಂಬುದು ಮಾತ್ರ ತಪ್ಪು, ಅದನ್ನೆಲ್ಲ ತಿದ್ದಬೇಕು. ತಿದ್ದುತ್ತೇನೆ, ಅವರೂ ನಮ್ಮ ಅಣ್ಣತಮ್ಮಂದಿರಲ್ಲವೇ ? ಜ್ಞಾನದ ದೃಷ್ಟಿಯಿಂದ ನೋಡಿದರೆ ಅವನು ಸ್ವಸಂಪೂರ್ಣನಲ್ಲ. ತಿರುಕ, ದುಡಿತದಲ್ಲಿ ಇರುವ ಕಲೆ, ತಿಳಿವು, ತೃಪ್ತಿ ಯಾವುದೂ ಅವನಿಗೆ ಗೊತ್ತಿಲ್ಲ. ಅವನ ದುಡಿತ ಬರೀ ಗುಲಾಮಗಿರಿ–ದುಡಿತ. ಕಲೆಯಾದಾಗ ಸ್ವಾತಂತ್ರ್ಯದ ಚಿಹ್ನೆಯಾಗುತ್ತದೆ. ತಿಳಿವಿಗೆ, ತೃಪ್ತಿಗೆ ಸಾಧನವಾದಾಗ ದುಡಿತ ಸ್ವಾತಂತ್ರ್ಯದ ಕುರುಹು ಆಗುತ್ತದೆ.

ಪ್ರ :—ವ್ಯವಸಾಯವೇ ಪ್ರಧಾನ ವೃತ್ತಿಯಾದವರಿಗೂ ನೇಯುವುದು,

ನೂಲುವುದು ಶಿಕ್ಷಣ ಮಾಧ್ಯಮವಾಗಬೇಕೇ ? ಹೊಲದಲ್ಲಿ ಕೆಲಸ ಇರುವ ಕಾಲ ದಲ್ಲಿ ಅವರಿಗೆ ಶಿಕ್ಷಣಕ್ಕೆ ಸಮಯ ಸಿಗುತ್ತದೆಯೇ ?

ಉ :—ಹೊಲದಲ್ಲಿ ಎಂಟು ಗಂಟೆ ಕೆಲಸ ಮಾಡಿದ ಮನುಷ್ಯನಿಗೆ ದಣಿ ವಾಗಿರುತ್ತದೆ. ಅವನಿಗೆ ನೂಲಲು, ನೇಯಲು ಸಮಯವೆಲ್ಲಿ? ಇದು ನಿಮ್ಮ ಅರ್ಥ. ಎಂಟು ಗಂಟೆ ಶರೀರಶ್ರಮ ಮಾಡಿದ ಮನುಷ್ಯ ಬುದ್ಧಿಯ ವ್ಯಾಸಂಗಕ್ಕೆ ಸಿದ್ಧವಾಗಿ ಬರುತ್ತಾನೆ ಎಂಬುದು ನಿಮಗೆ ಅರ್ಥವಾಗಬೇಕು. ಇದು ನನ್ನ ಅನುಭವದ ಮಾತು. ಮೊದಲು ಟಾಲ್‌ಸ್ಟಾಯ್ ಫಾರ್ಮ್‌ನಲ್ಲಿ ನಾನು ಕೆಲಸ ಮಾಡುತ್ತಿದ್ದಾಗ ನನಗೆ ನಿದ್ದೆ ಬರುತ್ತಿತ್ತು. ಕಾಲಕ್ರಮೇಣ ಉತ್ಸಾಹಭರಿತ ನಾಗಿ ಕೆಲಸಕ್ಕೆ ಸಿದ್ಧನಾಗಿರುತ್ತಿದ್ದೆ. ವ್ಯವಸಾಯವೇ ಮನುಷ್ಯನ ಪ್ರಧಾನ ವೃತ್ತಿ ಎನ್ನುವ ಬದಲು ಅವನ ಪ್ರಧಾನ ಗುಲಾಮಗಿರಿ ಎನ್ನಬೇಕು. ತನ್ನ ಎತ್ತುಗಳ ಜೊತೆಯಲ್ಲಿ ತಾನೂ ಎತ್ತು ಆಗುತ್ತಾನೆ. ಒಂದು ಒಣ ರೊಟ್ಟಿಯ ಚೂರನ್ನು ಕುರುಕುತ್ತ ಎತ್ತುಗಳ ಜೊತೆಯಲ್ಲಿ ತಾನೂ ಹೊಲಕ್ಕೆ ಹೋಗುತ್ತಾನೆ. ಮಧು ಸೂಧನ ದಾಸರ ಕಥೆ ನಿಮಗೆ ಗೊತ್ತಿದೆಯೆ? ನಮ್ಮ ಹಳ್ಳಿಗಳ ಜನ ದನಗಳ ಜೊತೆಯಲ್ಲಿ ತಾವೂ ದನದಂತೆ ಬದುಕುತ್ತ, ಒಂದೇ ಮನೆಯಲ್ಲಿ ತಾವೂ, ದನ ಗಳೂ ಒಟ್ಟಿಗೆ ವಾಸ ಮಾಡುತ್ತ, ಆತ್ಮಗೌರವವನ್ನು ಕಳೆದುಕೊಂಡು ಇರುವ ಪಾಡನ್ನು ನೋಡಿ ಬರೀ ಬೇಸಾಯ ಒಂದರಿಂದಲೇ ಈ ರಾಷ್ಟ್ರ ಶ್ರೇಷ್ಠವಾಗ ಲಾರದು ಎಂಬುದನ್ನು ಅರ್ಥ ಮಾಡಿಕೊಂಡರು. ಕೇವಲ ಬೇಸಾಯವೆ ಪ್ರಧಾನ ವೃತ್ತಿಯಾಗಿ ಒಂದು ರಾಷ್ಟ್ರ ಅಭಿವೃದ್ಧಿಯಾಗಬಹುದಾಗಿದ್ದರೆ ಹಿಂದು ಸ್ಥಾನ ಈ ವೇಳೆಗೆ ಬಹಳ ಶ್ರೇಷ್ಠವಾಗಬೇಕಾಗಿತ್ತು. ಹಾಗಿಲ್ಲವಲ್ಲ,

ಪ್ರತಿಯೊಂದು ಕೆಲಸದಲ್ಲಿಯೂ ಭಗವಂತನನ್ನೇ ನೋಡುತ್ತಾನೆ ಸತ್ಯ ಜ್ಞಾನಿ. ವಯಸ್ಕರ ಶಿಕ್ಷಣದ ಕೆಲಸಗಾರನೂ ಹಾಗೆಯೇ ಮಾಡಬೇಕು. ಅವನ ಕಣ್ಣಿಗೆ ಬಿದ್ದುದೆಲ್ಲವೂ ವಯಸ್ಕರ ಶಿಕ್ಷಣದ ವಿಷಯ. ರೈತನ ಜೊತೆಗೆ ಅವನು ಹೊಲಕ್ಕೆ ಹೋಗುತ್ತಾನೆ. 'ಸುಮ್ಮನೆ ಸೋಮಾರಿಯಾಗಿ ಕೂತರೆ ಪ್ರಯೋಜನ ವಿಲ್ಲ. ದೇವರು ನಿನಗೈದು ಬೆರಳು ಕೊಟ್ಟಿದ್ದಾನೆ. ನೆಟ್ಟಗೆ ನಿಲ್ಲು. ನಿನ್ನ ಜತೆಗೆ ನಾನೂ ನಿಂತು ಹೊಸ ವಿಷಯವನ್ನು ಕಲಿಸುತ್ತೇನೆ' ಎನ್ನುತ್ತಾನೆ. ಎತ್ತುಗಳ ಆರೈಕೆ ಮೊದಲನೆ ಪಾಠ. ಕೈಗಳ ಶಕ್ತಿಯನ್ನು ಬೆಳೆಸಬೇಕು. ಬರೀ ಬುದ್ಧಿಯ ಶಕ್ತಿಯನ್ನೇ ಬೆಳೆಸಿದರೆ ವಿನಾಶಕರ. ಈಗ ವಯಸ್ಕರ ಶಿಕ್ಷಣ ಎನ್ನುವುದು ಶಿಕ್ಷಣವೇ ಅಲ್ಲ. ನನ್ನ ಮಟ್ಟಿಗೆ, ಮೊಟ್ಟಮೊದಲು ಒಂದು

ಕೈಗಾರಿಕೆಯನ್ನು ಕಲಿಸುತ್ತೇನೆ. ಅದನ್ನು ಕಲಿತ ಮೇಲೆ ಅಕ್ಷರ ಕಲಿಸುತ್ತೇನೆ.

ನಾನು ವಯಸ್ಕರ ಶಿಕ್ಷಣವನ್ನು ಹೇಗೆ ಪ್ರಾರಂಭಿಸಿದೆನೋ ಹೇಳುತ್ತೇನೆ. ಒಂದು ದಿನ ನಾನೂ, ಆರ್ಯನಾಯಕಂ ಇಬ್ಬರೂ ಮಾತಾಡುತ್ತಿದ್ದೆವು. ಆಗ ಒಬ್ಬ ಮುದುಕ ಎತ್ತು ಹೊಡೆದುಕೊಂಡು ನಮ್ಮ ಪಕ್ಕದಲ್ಲಿ ಹೋದ. 'ನೀನು ಏಳರಿಂದ ಹದಿನಾಲ್ಕು ವರ್ಷದೊಳಗಿನ ಮಕ್ಕಳಿಗೆ ಶಿಕ್ಷಣ ಕೊಡುತ್ತಾ ಇದ್ದೀಯೆ. ಈ ಮುದುಕನಿಗೂ ಶಿಕ್ಷಣ ಕೊಡಬೇಕು' ಎಂದೆ. ಆ ಮುದುಕನಿಗೆ ಆ ಹೊತ್ತಿಗೆ ಕೆಮ್ಮು ಬಂತು. ಅಲ್ಲೇ ನೆಲದ ಮೇಲೆ ಉಗುಳಿದ. ಆಗ, ಅಲ್ಲಿ ಪ್ರಾರಂಭವಾಯಿತು ನನ್ನ ವಯಸ್ಕರ ಶಿಕ್ಷಣ. ಆ ಮುದುಕನನ್ನು ಕರೆದು 'ಇಲ್ಲಿ ಉಗುಳುತ್ತ ಇದೀಯೆ, ಇದರ ಪರಿಣಾಮ ಏನು ಗೊತ್ತೆ?' ಎಂದು ಕೇಳಿದೆ. ಹೀಗೆ ಮಾಡಬೇಡ ಎಂದು ಅಪ್ಪಣೆ ಮಾಡಿದರೆ, ಅವನನ್ನು ದಂಡಿಸಿದರೆ ಅದು ವಯಸ್ಕರ ಶಿಕ್ಷಣವಲ್ಲ. ಏನು ಪರಿಣಾಮ ಆಗುತ್ತದೆಯೋ ಅವನಿಗೆ ತಿಳಿಸಿ ಹೇಳಬೇಕು. ಇದೇನು ದೊಡ್ಡ ಕೆಲಸವಲ್ಲ. ಆದರೂ ಅದು ವಯಸ್ಕರ ಶಿಕ್ಷಣ.

ಇವತ್ತು ನಾವು ಮಾಡುತ್ತಿರುವುದು, ನಮ್ಮ ರಚನಾತ್ಮಕ ಸಂಸ್ಥೆಗಳಲ್ಲಿ ನಾವು ಕಲಿಸುತ್ತಿರುವುದು ಆ ಕೈಗಾರಿಕೆಯ ತಾಂತ್ರಿಕ ಪರಿಪೂರ್ಣತೆ. ನಯೀ ತಾಲೀಂ ನಮ್ಮ ಕೆಲಸಕ್ಕೆ ಜೀವವನ್ನು ಕೊಡುತ್ತದೆ. ವಯಸ್ಕರ ಶಿಕ್ಷಣ ಎಂದರೆ ಜೀವನ ಕಲೆಯ ಶಿಕ್ಷಣ, ಬದುಕುವ ಕಲೆಯ ಶಿಕ್ಷಣ. ಜೀವನ ಕಲೆಯನ್ನು ಕರಗತ ಮಾಡಿಕೊಂಡವನು ಸಂಪೂರ್ಣ ಮನುಷ್ಯನಾಗುತ್ತಾನೆ. ಈ ದರ್ಶನ ನಿಮ್ಮ ಗುರಿಯಾಗಿರಲಿ. ಈ ದಿವ್ಯದರ್ಶನವನ್ನು ಕುರಿತು ನಾನು ಧ್ಯಾನಿಸುತ್ತೇನೆ. ಚಿಂತನ ಮಾಡುತ್ತೇನೆ. ನಯೀ ತಾಲೀಮಿನ ಈ ದರ್ಶನ, ಈ ಆದರ್ಶ ನಮ್ಮ ಮುಂದೆ ಇದೆ.

ನಿಮ್ಮ ಕೆಲಸದಲ್ಲಿ ಹೊಸ ಪ್ರಾಣ ಸಂಚಾರವಾಗಬೇಕೆಂದರೆ ನಯೀ ತಾಲೀಮಿನ ಈ ಆದರ್ಶ ಅದಕ್ಕೆ ಸ್ಫೂರ್ತಿಕೊಡಲಿ. ಮನುಷ್ಯರಲ್ಲಿ ಯಾರಿಗೂ ಈ ದರ್ಶನ ಸಿದ್ಧಿಯಾಗಿಲ್ಲ. ನನಗೆ ಆ ಸಿದ್ಧಿ ಆದೀತು ಎಂದು ಹೇಗೆ ಹೇಳಲಿ? ನಿಮ್ಮೊಳಗೆ ಅದನ್ನು ಹೇಗೆ ಬಿತ್ತಲಿ?

## ಹೆಂಗಸರ ಶಿಕ್ಷಣ

ಗಂಡಸು ಹೆಂಗಸು ಸಮಾನರು; ಆದರೆ ಒಂದೇ ಅಲ್ಲ. ಒಬ್ಬರಿಗೊಬ್ಬರು

ಜೊತೆಯಾಗಿ, ಪೂರಕವಾಗಿ ಇಬ್ಬರೂ ಒಂದು ಸಾಟಿಯಿಲ್ಲದ ಜೋಡಿ. ಒಬ್ಬರಿಗೊಬ್ಬರು ಸಹಾಯಕರು; ಒಬ್ಬರನ್ನು ಬಿಟ್ಟು ಇನ್ನೊಬ್ಬರ ಅಸ್ತಿತ್ವವನ್ನು ಕೂಡ ಊಹಿಸುವಂತಿಲ್ಲ. ಆದ್ದರಿಂದ ಇಬ್ಬರಲ್ಲಿ ಯಾವ ಸ್ಥಾನಕ್ಕೆ ಭಂಗ ಬಂದರೂ ಇಬ್ಬರಿಗೂ ಸಮಾನವಾಗಿ ನಷ್ಟ ಎಂಬುದೂ ಅದರಿಂದ ಹುಟ್ಟಿಬರುವ ಅನಿವಾರ್ಯ ಸೂತ್ರ. ಹೆಂಗಸರಿಗಾಗಿ ಶಿಕ್ಷಣದ ಯೋಜನೆ ಮಾಡುವಾಗ ಈ ಮೂಲ ಸತ್ಯವನ್ನು ಸದಾ ಎದುರಿಗೆ ಇಟ್ಟುಕೊಳ್ಳಬೇಕು. ದಂಪತಿಗಳಲ್ಲಿ ಹೊರಗಿನ ಕೆಲಸಗಳಲ್ಲಿ ಗಂಡಸು ಶ್ರೇಷ್ಠ. ಆದ್ದರಿಂದ ಆ ವಿಷಯದ ಜ್ಞಾನ ಅವನಿಗೆ ಹೆಚ್ಚು ಇರಬೇಕಾದ್ದು ಅಗತ್ಯ, ಉಚಿತ. ಅದೇ ರೀತಿ ಮನೆಯ ವ್ಯವಹಾರ ಅಥವಾ ಗೃಹಕೃತ್ಯ ಸಂಪೂರ್ಣವಾಗಿ ಹೆಂಗಸಿನ ಕ್ಷೇತ್ರ, ಆದ್ದರಿಂದ ಗೃಹಕೃತ್ಯದಲ್ಲಿ, ಮಕ್ಕಳ ಪಾಲನೆ – ಪೋಷಣೆ – ಶಿಕ್ಷಣಗಳಲ್ಲಿ, ಹೆಂಗಸಿಗೆ ಹೆಚ್ಚು ಜ್ಞಾನವಿರಬೇಕಾದ್ದು ಅಗತ್ಯ. ಹೀಗೆಂದರೆ ಜ್ಞಾನವನ್ನು ಶಾಖೆಗಳಾಗಿ ಭಾಗಮಾಡಬೇಕೆಂದಲ್ಲ, ಕೆಲವು ಭಾಗದ ಜ್ಞಾನವನ್ನು ಕೆಲವರಿಗೆ ಕೊಡಬಾರದೆಂದಲ್ಲ. ಆದರೆ ಈ ಮೂಲತತ್ತ್ವಗಳ ವೈವಿಧ್ಯವನ್ನು ಅರಿತು ಅದಕ್ಕೆ ತಕ್ಕಂತೆ ಶಿಕ್ಷಣವನ್ನು ರೂಪಿಸದಿದ್ದರೆ ಸ್ತ್ರೀಪುರುಷರ ಪೂರ್ಣಜೀವನ ವಿಕಾಸಗೊಳ್ಳದು.

ಹೆಂಗಸರು ಉಪಜೀವನಕ್ಕಾಗಿ ದುಡಿಯುವುದರಲ್ಲಿ ವ್ಯಾಪಾರ ಮಾಡುವುದರಲ್ಲಿ ನನಗೆ ನಂಬಿಕೆಯಿಲ್ಲ. ಇಂಗ್ಲೀಷು ಶಿಕ್ಷಣ ಬೇಕೆನ್ನುವ ಹುಡುಗಿಯರು ಹುಡುಗರ ಶಾಲೆಗಳಿಗೆ ಸೇರಿ ಸುಲಭವಾಗಿ ತಮ್ಮ ಉದ್ದೇಶ್ಯವನ್ನು ಸಾಧಿಸಬಹುದು. ಆದರೆ ಹೆಂಗಸರ ಶಾಲೆಗಳಲ್ಲಿ ಇಂಗ್ಲೀಷನ್ನು ತೂರಿಸುವುದು ನಮ್ಮ ಅಸಹಾಯತೆಗೆ ಆಯುಸ್ಸು ಎರೆದಂತೆ. ಇಂಗ್ಲೀಷ್ ಸಾಹಿತ್ಯದ ಅಮೋಘ ಸಂಪತ್ತು ಹೆಂಗಸರಿಗೂ ಗಂಡಸರಿಗೂ ಸಮವಾಗಿಯೆ ಸಿಗಬೇಕು ಎಂದು ಹೇಳುವುದನ್ನು ಆಗಾಗ ಕೇಳಿದೇನೆ. ಈ ಧೋರಣೆಯಲ್ಲಿ ಏನೋ ತಪ್ಪು ತಿಳಿವಳಿಕೆಯಿದೆಯೆಂದು ಅತ್ಯಂತ ವಿನಯದಿಂದ ತಿಳಿಸುತ್ತೇನೆ. ಈ ಸಂಪತ್ತನ್ನು ಗಂಡಸರಿಗೆ ನೀಡಿ ಹೆಂಗಸರಿಗೆ ಇಲ್ಲದಂತೆ ಮಾಡುವುದಲ್ಲ ಉದ್ದೇಶ್ಯ. ಸಾಹಿತ್ಯಾಭಿರುಚಿ ಇದ್ದರೆ ಇಡೀ ಜಗತ್ತಿನ ಸಾಹಿತ್ಯವನ್ನೇ ಓದಿ. ಈ ಲೋಕದಲ್ಲಿ ನಿಮಗೆ ಅಡ್ಡಿ ಮಾಡಬಲ್ಲವರು ಯಾರೂ ಇಲ್ಲ. ಆದರೆ ಇಡೀ ಸಮಾಜದ ಆವಶ್ಯಕತೆಗಳ ದೃಷ್ಟಿಯಿಂದ ಶಿಕ್ಷಣದ ಯೋಜನೆ ಮಾಡಿದಾಗ ಸಾಹಿತ್ಯಾಭಿರುಚಿಯುಳ್ಳ ಕೆಲವರ ಆವಶ್ಯಕತೆಗಳನ್ನು ಪೂರಯಿಸಲು ಸಾಧ್ಯವಿಲ್ಲ.[೨]

ಹೆಂಗಸರಲ್ಲಿ ನಿರಕ್ಷರತೆ ಹೆಚ್ಚು ಎಂದರೆ ಗಂಡಸರಲ್ಲಿದ್ದಂತೆ ಬರೀ

ಸೋಮಾರಿತನ, ಜಡತೆಗಳು ಅದಕ್ಕೆ ಕಾರಣವಲ್ಲ. ಅನಾದಿ ಕಾಲದಿಂದಲೂ ಅನ್ಯಾಯವಾಗಿ ಹೆಂಗಸಿಗೆ ವಿಧಿಸಿದ ಹೀನಸ್ಥಾನವೇ ಅದಕ್ಕೆ ಹೆಚ್ಚು ಬಲವಾದ ಕಾರಣ. ತನ್ನ ಸಹಕಾರಿ, 'ಉತ್ತಮಾಂಗನೆ' ಎಂದು ನಡಸಿಕೊಳ್ಳುವುದನ್ನು ಬಿಟ್ಟು, ಗಂಡಸು ಅವಳನ್ನು ಮನೆಗೆಲಸದ ತೊತ್ತಾಗಿ, ತನ್ನ ಭೋಗದ ಬೊಂಬೆಯಾಗಿ ಮಾಡಿದಾನೆ. ಅದರ ಫಲ ನಮ್ಮ ಸಮಾಜಕ್ಕೆ ಹಿಡಿದ ಅರ್ಧ–ಪಾರ್ಶ್ವವಾಯು. ಹೆಂಗಸು ವಂಶದ ತಾಯಿ. ಸರಿ, ಆಕೆಗೆ ನಾವು ಮಾಡಿರುವ ಘೋರ ಅಪರಾಧವನ್ನು ತಿದ್ದಿಕೊಳ್ಳಬೇಕಾದ್ದು ಆಕೆಗಾಗಿಯೂ ನಮಗಾಗಿಯೂ ಅಗತ್ಯ.[೯೩]

ಬಹಳ ತುಟ್ಟಿಯಾದ ಈ ಶಿಕ್ಷಣ ಪಡೆದು, ಮದುವೆ ಮಾಡಿಕೊಂಡು ಕಣ್ಣಿಗೇ ಕಾಣದಂತೆ ದಿಗಂತದಿಂದಲೇ ಮರೆಯಾಗಿ ಹೋದರೆ, ತಪ್ಪಿಸಿಕೊಂಡರೆ ದೇಶಕ್ಕೆ ನೀವು ಮೋಸಮಾಡಿದಂತೆ. ನೀವು ಮದುವೆಯಾಗಬಾರದೆಂದಲ್ಲ. ಮದುವೆಯಾಗಿಬಿಡಿ, ಗುಲಾಮರಾಗಬೇಡಿ. ದೇಶ ಏನನ್ನು ಬಯಸುತ್ತದೆಯೋ ಅದನ್ನು ಮಾಡಿ. ದಯೆ – ಧೈರ್ಯಗಳ ಮೂರ್ತಿಗಳಾಗಬೇಕು ನೀವು. ನಿಮ್ಮ ಪಾವಿತ್ರ್ಯದ ನಿತ್ಯಕವಚವನ್ನು ತೊಟ್ಟು ಅದರ ರಕ್ಷಣೆಯನ್ನು ನಂಬಿ, ನಿರ್ಭಯವಾಗಿ ನಿರ್ವಿಕಾರವಾಗಿ ಲೋಕದಲ್ಲಿ ಓಡಾಡಿ.[೯೪]

ಶಾಲೆ ಕಾಲೇಜು ಬಿಟ್ಟಕೂಡಲೆ ಅನೇಕಾನೇಕ ಹುಡುಗಿಯರು–ಇವರೇ ಹೆಚ್ಚು–ಸಾರ್ವಜನಿಕ ಜೀವನದಿಂದ ಮರೆಯಾಗಿ ಹೋಗುತ್ತಾರೆ. ನಿಮ್ಮ ಶಾಲೆಯ ಪತ್ರಿಕೆಯಲ್ಲಿ ಸುದ್ದಿ–ಪ್ರಕಟನೆಗಳನ್ನು ನೋಡಿದೆ. ಇಂಥಿಂಥವಳು ಮದುವೆಯಾದಳು. ನಾಲ್ಕು, ಐದು ಸುದ್ದಿ, ೨೭ ಅಥವಾ ೨೫ ವರ್ಷದ ಹುಡುಗಿಯರು ಮದುವೆಯಾಗುವುದು ತಪ್ಪೇನಲ್ಲ. ಆದರೆ ಸೇವೆಗಾಗಿ ಜೀವನ ಸಮರ್ಪಣೆ ಮಾಡಿದ ಹುಡುಗಿಯ ಸುದ್ದಿ ಒಂದಾದರೂ ಇಲ್ಲವಲ್ಲ. ನಮ್ಮ ಶಿಕ್ಷಣ ಪಂಡಿತರು ಮಾಡುತ್ತಿರುವ ಮಹಾಪ್ರಯತ್ನ, ಇದಕ್ಕೆ ಸಿಗುವ ಅತ್ಯುದಾರ ದಾನಗಳಿಗೆ ನೀವು ಬರೀ ಬೊಂಬೆಗಳಾಗಿ ಶಿಕ್ಷಣ ಮುಗಿದೊಡನೆಯೆ ಜೀವನ ರಂಗದಿಂದ ಮಾಯವಾಗುವುದು ತಕ್ಕ ಪ್ರತಿಫಲವಲ್ಲ.

ಹುಟ್ಟಿದ ಹುಡುಗಿ ಪ್ರತಿಯೊಬ್ಬಳೂ, ಭಾರತದ ಹುಡುಗಿ ಪ್ರತಿಯೊಬ್ಬಳೂ ಮದುವೆಗಾಗಿಯೇ ಹುಟ್ಟಿಲ್ಲ. ಒಬ್ಬ ಮನುಷ್ಯನ ಸೇವೆಯನ್ನು ಮಾತ್ರವೇ ಮಾಡುವ ಬದಲು ಎಷ್ಟೋ ಜನ ಹುಡುಗಿಯರು ಸೇವೆಗಾಗಿ ಬಾಳನ್ನು ಮುಡಿಪು ಮಾಡಿದಾರೆ. ತೋರಿಸಬಲ್ಲೆ. ಹಿಂದೂ ಹುಡುಗಿಯರು ಪಾರ್ವತಿ – ಸೀತೆಯರ ಪುನರಾವೃತ್ತಿ, ಉತ್ತಮ ಪುನರಾವೃತ್ತಿ ಆಗಬೇಕಾದ ಕಾಲ ಬಂದಿದೆ.

ಪಾರ್ವತಿ ಏನು ಮಾಡಿದಳು ಗೊತ್ತೆ? ಗಂಡನಿಗಾಗಿ ಹಣವನ್ನು ವೆಚ್ಚ ಮಾಡಲಿಲ್ಲ, ತನ್ನನ್ನೂ ಮಾರಿಕೊಳ್ಳಲಿಲ್ಲ, ಇವತ್ತು ಹಿಂದೂಗಳಲ್ಲಿ ಸತ್ತ ಸತಿಯರಲ್ಲಿ ಆಕೆಯೂ ಒಬ್ಬಳು, ವಿದ್ಯಾಪ್ರಶಸ್ತಿ ಪಡೆದಲ್ಲ ಆಕೆ ಸತಿ ಎನಿಸಿದುದು, ಎಂದೂ ಕೇಳದಿದ್ದಂಥ ತಪಸ್ಸನ್ನು ಮಾಡಿ.

ನಿಮ್ಮ ಸಂಸ್ಥೆಯಲ್ಲಿ ಧಾರ್ಮಿಕ ಶಿಕ್ಷಣ ಇದೆ. ಅಂದವಾದ ಒಂದು ಗುಡಿಯೂ ಇದೆ. ದಿನವೂ ಮೊದಲು ಪೂಜೆಮಾಡಿ ಆಮೇಲೆ ನೀವು ಕೆಲಸಕ್ಕೆ ತೊಡಗುತ್ತೀರೆಂದು ನಿಮ್ಮ ವೇಳಾಪಟ್ಟಿ ತೋರಿಸುತ್ತಿದೆ. ಇದೆಲ್ಲವೂ ಒಳ್ಳೆಯದು, ಉನ್ನತಿಗೆ ದಾರಿ. ಆದರೆ ಈ ಪೂಜೆ ದಿನದಿನವೂ ಕಾರ್ಯಗತವಾಗಿ ಪ್ರಕಟವಾಗದಿದ್ದರೆ ಬರೀ ಒಂದು ಆಚಾರವಾದೀತು. ಈ ಪೂಜೆಯನ್ನು ಅನುಸರಿಸಿ ರಾಟೆಯನ್ನು ತಿರುಗಿಸಿ, ದಿನವೂ ಅರ್ಧಗಂಟೆ ದೇಶದ ಜನಸ್ತೋಮವನ್ನು ನೆನೆದು ದೇವರ ಹೆಸರಿನಲ್ಲಿ 'ಅವರಿಗಾಗಿ ನೂಲುತ್ತೇನೆ' ಎನ್ನಿ. ಮನಃಪೂರ್ವಕವಾಗಿ ವಿನಯಪೂರ್ಣವಾಗಿ ನಿಜವಾದ ಭಕ್ತಿಯ ಈ ಕೃತಿಯಿಂದ ಭಾಗ್ಯವಂತರಾದರೆ ಬಡಾಯಿಗಾಗಿ ಅಲ್ಲದೆ ಮೈಮುಚ್ಚಿಕೊಳ್ಳಲು ಬಟ್ಟೆ ಉಟ್ಟೀರಿ. ಆಗ ಜನಸ್ತೋಮಕ್ಕೂ ನಿಮಗೂ ಸಂಬಂಧ ತರುವ ಖಾದಿಯನ್ನು ಯಾವ ಸಂಕೋಚವೂ ಇಲ್ಲದೆ ಉಟ್ಟೀರಿ.[೯೩]

ಪ್ರಶ್ನೆ: ಹೆಂಗಸರನ್ನು ಹೊರಕ್ಕೆಳೆದು ಅವರು ಅಡಿಗೆ ಮನೆಯನ್ನೆ ಮರೆಯುವಂತೆಮಾಡಿ, ರಕ್ಷಣೆಗಾಗಿ ಕೋವಿ—ಬಂದೂಕು ಹಿಡಿಯಲು ಹುರಿದುಂಬಿಸುವುದು ಹೆಂಗಸರು ಗಂಡಸರು ಇಬ್ಬರನ್ನೂ ಕೆಳಕ್ಕೆ ಸೆಳೆಯುವ ದಾರಿ. ಅದು ಕ್ರೂರ, ವಿನಾಶಕರ ಎಂದು ನೀವು ಹೇಳುತ್ತೀರಿ. ಆದರೆ ಹೊಲಗಳಲ್ಲಿ ಗಿರಣಿ—ಕಾರಖಾನೆಗಳಲ್ಲಿ ಲಕ್ಷಗಟ್ಟಲೆ ಕೆಲಸಮಾಡುತ್ತಾರಲ್ಲ, ಅದರ ಬಗ್ಗೆ ಏನು ಹೇಳುತ್ತೀರಿ? ಮನೆಗೆಲಸವನ್ನು ಬಿಟ್ಟು ಅವರು ಹೊಟ್ಟೆಗಾಗಿಯೆ ಕೆಲಸ ಮಾಡಬೇಕಾಗಿದೆ, ಆದ್ದರಿಂದ ಈಗಿನ ಪ್ರಾರಿಶ್ರಾಮಿಕ ವಿಧಾನವನ್ನು ತೊಡೆದು ಹಾಕುತ್ತೀರಾ? ಶಿಲಾಯುಗಕ್ಕೆ ಜಗತ್ತನ್ನು ಮರಳಿಸುತ್ತೀರಾ? ಅದು ಮಾತ್ರ ಕ್ರೂರ, ವಿನಾಶಕರ ಅಲ್ಲವೆ? ಹೆಂಗಸರಿಂದ ಕೆಲಸಮಾಡಿಸುವುದರಲ್ಲಿ ಸ್ವಲ್ಪವೂ ಪಾಪವನ್ನು ಕಾಣದ ಹೊಸ ಸಮಾಜದ ಸ್ವರೂಪ ನಮ್ಮ ಕಣ್ಣಿಗೆ ಹೇಗೆ ಕಾಣುತ್ತದೆ?

ಗಾಂಧೀ: ಲಕ್ಷಗಟ್ಟಲೆ ಹೆಂಗಸರು ಮನೆಗೆಲಸವನ್ನು ಬಿಟ್ಟು ದಿನದಿನದ ನಿರ್ವಹಣಕ್ಕಾಗಿ ಪಾಡು ಪಡಬೇಕಾಗಿಬಂದರೆ ಅದು ಪ್ರಬಲವಾದ ದೋಷವೇ,

ಆದರೂ ಕೋವಿ—ಬಂದೂಕ ಹಿಡಿಯುವುದರಷ್ಟು ದೊಡ್ಡ ದೋಷವಿಲ್ಲ. ದಿನದ ವೆಚ್ಚಕ್ಕಾಗಿ ದುಡಿಯುವುದರಲ್ಲಿ ಅಸಭ್ಯತೆಯಿಲ್ಲ, ಕ್ರೂರತನವಿಲ್ಲ, ಹೆಂಗಸರು ತಮ್ಮ ಮನೆಗೆಲಸಗಳನ್ನು ಮಾಡಿಕೊಂಡು, ಬಿಡುವಿದ್ದಾಗ ಹೊಲದ ಕೆಲಸ ಮಾಡಿದರೆ ಅದರಲ್ಲಿ ಅಸಭ್ಯತೆ, ಕ್ರೂರತನ ನನಗೆ ಕಾಣುತ್ತಿಲ್ಲ, ನಾನು ಊಹಿಸಿದ ಹೊಸ ಸಾಮಾಜಿಕ ವ್ಯವಸ್ಥೆಯಲ್ಲಿ ಎಲ್ಲರೂ ಯಥಾಶಕ್ತಿ ದುಡಿದು, ತಮ್ಮ ದುಡಿತಕ್ಕೆ ತಕ್ಕ ಪ್ರತಿಫಲ ಪಡೆದಾರು. ಆ ಹೊಸ ಸಮಾಜದಲ್ಲಿ ಹೆಂಗಸರು ಬಿಡುವಿದ್ದಾಗಲೇ ಹೊರಗಡೆ ದುಡಿದಾರು. ಗೃಹ ನಿರ್ವಹಣವೇ ಅವರಿಗೆ ಪ್ರಧಾನ ಕರ್ತವ್ಯವಾಗಿದ್ದೀತು. ಆ ಸಮಾಜದಲ್ಲಿ ಕೋವಿ—ಬಂದೂಕ ಶಾಶ್ವತ ವಸ್ತುವಲ್ಲವೆಂದು ಭಾವಿಸಿದ್ದೇನೆ. ಆದ್ದರಿಂದ ಹೆಂಗಸರೇ ಅಲ್ಲದೆ ಗಂಡಸರಿಗೂ ಕೂಡ ಕೋವಿ—ಬಂದೂಕ ನಿಷಿದ್ಧವಾದೀತು, ಒಂದು ವೇಳೆ ಉಪಯೋಗಿಸಿದರೂ ಅನಿವಾರ್ಯ ದೋಷವಾಗಿಯೇ ವಿನಾ ಕೈಯಲ್ಲಿ ಕೋವಿ ಹಿಡಿಯುವ ದೋಷಕ್ಕೆ ಗುರಿಯಾಗದಂತೆ ಹೆಂಗಸರನ್ನು ದೃಢವಾಗಿ ಪಡೆದೇನು.

## ಧಾರ್ಮಿಕ ಶಿಕ್ಷಣ

ಧಾರ್ಮಿಕ ಶಿಕ್ಷಣದ ಪ್ರಶ್ನೆ ಬಹಳ ಕಠಿನ. ಆದರೂ ಅದನ್ನು ಕೈಬಿಡುವಂತಿಲ್ಲ. ಭಾರತ ದೇಶ ಎಂದಿಗೂ ನಿರೀಶ್ವರವಾಗದು. ಕೇವಲ ನಾಸ್ತಿಕತೆ ಈ ಭೂಮಿಯಲ್ಲಿ ಬೆಳೆಯಲಾರದು. ಈ ಕೆಲಸ ಬಹಳ ಕಷ್ಟಕರ, ನಿಜ. ಧಾರ್ಮಿಕ ಶಿಕ್ಷಣದ ವಿಷಯವನ್ನು ಯೋಚಿಸಿದರೆ ನನ್ನ ತಲೆ ತಿರುಗುತ್ತದೆ. ನನಗೆ ಧರ್ಮ ಎಂದರೆ ಸತ್ಯ, ಅಹಿಂಸೆ ಅಥವಾ ಸತ್ಯವೊಂದೇ ಎನ್ನಬಹುದು. ಏಕೆಂದರೆ, ಸತ್ಯದಲ್ಲಿ ಅಹಿಂಸೆಯೂ ಅಡಗಿದೆ! ಅಹಿಂಸೆಯಿಲ್ಲದೆ ಸತ್ಯಶೋಧನೆಗೆ ಬೇರೆ ದಾರಿಯೆ ಇಲ್ಲ. ಆದ್ದರಿಂದ ಈ ಸದ್ಗುಣಗಳ ಅಭ್ಯಾಸವನ್ನು ಬಲಪಡಿಸುವುದೆಲ್ಲವೂ ಧಾರ್ಮಿಕ ಶಿಕ್ಷಣದ ಸಾಧನ. ಇದಕ್ಕೆ ಉತ್ತಮೋಪಾಯ, ಶಿಕ್ಷಕರು ತಮ್ಮ ಜೀವನದಲ್ಲಿ ಈ ಸದ್ಗುಣಗಳನ್ನು ಅನುಷ್ಠಾನ ಮಾಡುವುದೇ ಎಂದು ನನ್ನ ಅಭಿಪ್ರಾಯ. ಆಗ ತರಗತಿಯಲ್ಲಾಗಲಿ ಆಟದ ಬಯಲಿನಲ್ಲಾಗಲಿ ಅವರ ಸಹವಾಸವೇ ವಿದ್ಯಾರ್ಥಿಗಳಿಗೆ ಈ ಮೂಲಭೂತ ಸದ್ಗುಣಗಳನ್ನು ಕಲಿಸುತ್ತದೆ.

ಧರ್ಮದ ಸರ್ವಸಮ್ಮತ ಮೂಲ ತತ್ವಗಳ ಬೋಧನೆಯ ಬಗ್ಗೆ ಇಷ್ಟು. ಧಾರ್ಮಿಕ ಶಿಕ್ಷಣದ ಪಾಠದ ಪಟ್ಟಿಯಲ್ಲಿ ತನ್ನ ಧರ್ಮವಲ್ಲದೆ ಇತರ ಧರ್ಮಗಳ

ತತ್ತ್ವಗಳ ಅಧ್ಯಯನವೂ ಸೇರಿರಬೇಕು. ಇದಕ್ಕಾಗಿ ವಿದ್ಯಾರ್ಥಿಗಳಿಗೆ ಲೋಕದ ಎಲ್ಲಾ ಶ್ರೇಷ್ಠ ಧರ್ಮಗಳ ಸಿದ್ಧಾಂತಗಳನ್ನೂ ಗೌರವದಿಂದ ಉದಾರಭಾವದ ಸಹನೆಯಿಂದ ತಿಳಿದುಕೊಳ್ಳುವ, ಅದರ ಗುಣಗ್ರಹಣ ಮಾಡುವ ರೂಢಿಯನ್ನು ಅಭ್ಯಾಸ ಮಾಡಿಸಬೇಕು. ಇದನ್ನು ಸರಿಯಾಗಿ ನಿರ್ವಹಿಸಿದರೆ ಅವರಿಗೆ ಒಂದು ಆಧ್ಯಾತ್ಮ ವಿಶ್ವಾಸವನ್ನೂ ಸ್ವಧರ್ಮದ ಬಗ್ಗೆ ಹೆಚ್ಚು ಆದರವನ್ನೂ ಕೊಡುತ್ತದೆ. ಆದರೆ ಲೋಕದ ಎಲ್ಲಾ ಹಿರಿಯ ಧರ್ಮಗಳ ಅಧ್ಯಯನ ಮಾಡಿದಾಗ ಒಂದು ನಿಯಮವನ್ನು ನೆನಪಿಡಬೇಕು. ಆಯಾ ಧರ್ಮಗಳ ಸುಪ್ರಸಿದ್ಧ ಭಕ್ತರ ಗ್ರಂಥಗಳ ಮೂಲಕವೇ ಅದನ್ನು ಅಭ್ಯಾಸ ಮಾಡಬೇಕು. ಉದಾಹರಣೆಗೆ: ಭಾಗವತವನ್ನು ಓದಬೇಕೆಂದರೆ ಅದಕ್ಕೆ ವಿರೋಧಿಯಾದ ವಿಮರ್ಶಕನೊಬ್ಬ ಮಾಡಿದ ಭಾಷಾಂತರವನ್ನು ಓದಲಾಗದು, ಭಾಗವತದ ಪ್ರೇಮಿಯೊಬ್ಬ ಬರೆದುದನ್ನು ಓದಬೇಕು. ಅದೇ ರೀತಿ ಬೈಬಲನ್ನು ಓದುವವರು ಶ್ರದ್ಧಾವಂತ ಕ್ರಿಶ್ಚಿಯನ್ನರು ಬರೆದು ವ್ಯಾಖ್ಯೆಗಳನ್ನು ಓದಬೇಕು. ತನ್ನ ಧರ್ಮವೇ ಅಲ್ಲದೆ ಇತರ ಧರ್ಮಗಳನ್ನೂ ಅಧ್ಯಯನ ಮಾಡಿದರೆ ಸರ್ವಧರ್ಮಗಳ ಮೂಲಭೂತ ಏಕತೆಯನ್ನು, 'ಮತಪಂಥಗಳ ವಾದವಿವಾದಗಳನ್ನು ಮೀರಿದ' ಸಾರ್ವತ್ರಿಕ ಪರಮ ಸತ್ಯದ ಸಕೃತ್ ದರ್ಶನವನ್ನು ಸಾಧಿಸಬಹುದು.

ಇತರ ಧರ್ಮಗಳನ್ನು ಆದರದಿಂದ ಅಧ್ಯಯನ ಮಾಡಿದರೆ ಸ್ವಧರ್ಮ ಶ್ರದ್ಧೆಗೇ ಚ್ಯುತಿ ಬರಬಹುದೆಂದು ಯಾರೂ ಒಂದು ಗಳಿಗೆಯಾದರೂ ಅಂಜದಿರಲಿ. ಎಲ್ಲ ಧರ್ಮಗಳಲ್ಲೂ ಸತ್ಯಾಂಶವಿದೆ, ಎಲ್ಲಕ್ಕೂ ಗೌರವ–ಆದರಗಳನ್ನು ತೋರಿಸಿ ಎನ್ನುತ್ತದೆ ಹಿಂದೂ ಧರ್ಮ. ಇದರ ಅರ್ಥ, ಮೊಟ್ಟ ಮೊದಲು ಸ್ವಧರ್ಮ ಶ್ರದ್ಧೆ ಇರಬೇಕು. ಇತರ ಧರ್ಮಗಳ ಅಧ್ಯಯನ, ಸಾರಗ್ರಹಣದಿಂದ ಸ್ವಧರ್ಮ ಶ್ರದ್ಧೆ ದುರ್ಬಲವಾಗಬೇಕಾದ್ದಿಲ್ಲ. ಆ ಶ್ರದ್ಧೆಯನ್ನು ಇತರ ಧರ್ಮಗಳಿಗೂ ವಿಸ್ತರಿಸಿದಂತೆ.

ಈ ವಿಷಯದಲ್ಲಿ ಧರ್ಮವೂ ಸಂಸ್ಕೃತಿಯೂ ಒಂದೇ. ಸ್ವಸಂಸ್ಕೃತಿಯ ರಕ್ಷಣೆಯೆಂದರೆ ಇತರರ ಸಂಸ್ಕೃತಿಯ ತಿರಸ್ಕಾರವಲ್ಲ; ಇತರ ಸಂಸ್ಕೃತಿಗಳಲ್ಲಿ ಉತ್ತಮವಾದುದರ ಗ್ರಹಣ. ಧರ್ಮದ ವಿಷಯವೂ ಹಾಗೆಯೇ.೯೭

## ವಿದ್ಯಾರ್ಥಿ ಮುಷ್ಕರ

ಕೆಲಸಗಾರರು ಮುಷ್ಕರಮಾಡುವುದೇ ಕೆಟ್ಟದು, ನ್ಯಾಯವಾಗಿಯೆ

ಮಾಡಲಿ ಅನ್ಯಾಯವಾಗಿಯೆ ಮಾಡಲಿ, ವಿದ್ಯಾರ್ಥಿಗಳ ಮುಷ್ಕರವಂತೂ ಇನ್ನೂ ಕೆಟ್ಟದು, ಅದರ ಕಟ್ಟಕಡೆಯ ಪರಿಣಾಮ, ಮುಷ್ಕರಕ್ಕೆ ಸಂಬಂಧಿಸಿದ ಜನರ ಸ್ಥಿತಿ, ಎರಡು ಕಾರಣದಿಂದಲೂ ಇದು ಹೆಚ್ಚು ಕೆಟ್ಟದು. ಕೆಲಸಗಾರರ ಹಾಗಲ್ಲ ವಿದ್ಯಾರ್ಥಿಗಳು. ಇವರು ಶಿಕ್ಷಿತರು, ಇವರಿಗೆ ಮುಷ್ಕರದಿಂದ ಆಗಬೇಕಾದ ದುಡ್ಡು ಕಾಸಿನ ಲಾಭವೇನೂ ಇಲ್ಲ. ಕೆಲಸಗಾರರ ಧಣಿಗಳ ಹಾಗಲ್ಲ ಶಾಲೆ ಕಾಲೇಜುಗಳ ಪ್ರಧಾನಾಧಿಕಾರಿಗಳು, ವಿದ್ಯಾರ್ಥಿಗಳೊಡನೆ ಘರ್ಷಣೆಮಾಡಿ ಅವರಿಗೆ ಲಾಭವಾಗಬೇಕಾದ್ದೇನೂ ಇಲ್ಲ. ಅಲ್ಲದೆ, ವಿದ್ಯಾರ್ಥಿಗಳೆಂದರೆ ಶಿಸ್ತಿನ ಮೂರ್ತಿಗಳಾಗಿರಬೇಕು. ಆದ್ದರಿಂದ ವಿದ್ಯಾರ್ಥಿಮುಷ್ಕರದ ಪರಿಣಾಮ ಬಹುದೂರ ವ್ಯಾಪಿಯಾಗುತ್ತದೆ. ಅತ್ಯಂತ ಅಸಾಧಾರಣ ಪರಿಸ್ಥಿತಿಯಲ್ಲಿ ಮಾತ್ರವೇ ವಿದ್ಯಾರ್ಥಿ ಮುಷ್ಕರದ ಮಾತು.[೯೦]

ವಿದ್ಯಾರ್ಥಿಗಳ ವಾಕ್ ಸ್ವಾತಂತ್ರ್ಯ, ಸಂಚಾರ ಸ್ವಾತಂತ್ರ್ಯಗಳಿಗೆ ಅಡ್ಡಿ ತರಬಾರದು ಎನ್ನುತ್ತೇನೆ. ಆದರೆ ವಿದ್ಯಾರ್ಥಿಗಳ ರಾಜಕೀಯ ಮುಷ್ಕರ, ಪ್ರದರ್ಶನಗಳನ್ನು ಸಮರ್ಥಿಸಲಾರೆ. ವಿದ್ಯಾರ್ಥಿಗಳಿಗೆ ವಿಚಾರ ಸ್ವಾತಂತ್ರ್ಯ, ಅಭಿಪ್ರಾಯ ಸ್ವಾತಂತ್ರ್ಯ ಸಂಪೂರ್ಣವಾಗಿರಬೇಕು. ಯಾವ ರಾಜಕೀಯ ಪಕ್ಷದ ಕಡೆಯಾದರೂ ಇರಲಿ, ಆದರೆ ವಿದ್ಯಾರ್ಥಿಗಳಾಗಿರುವಾಗ ಅವರಿಗೆ ಕ್ರಿಯಾ ಸ್ವಾತಂತ್ರ್ಯ ಕೂಡದು ಎನ್ನುತ್ತೇನೆ, ಇತ್ತ ವಿದ್ಯಾಭ್ಯಾಸಮಾಡುತ್ತ ಅತ್ತ ರಾಜಕೀಯ ಕೆಲಸಗಾರನಾಗಲಾರ ವಿದ್ಯಾರ್ಥಿ. ರಾಷ್ಟ್ರವ್ಯಾಪಿ ಆಂದೋಳನಗಳು ನಡೆದಾಗ ಇದಕ್ಕೆ ಒಂದು ನಿಯಮ ಹಾಕುವುದು ಕಷ್ಟ, ಆಗ ನಡೆಯುವುದು ಮುಷ್ಕರವಲ್ಲ. ಅದು ಶಿಕ್ಷಣದ ವಿಸರ್ಜನೆ.[೯೯]

## ವಿದ್ಯಾರ್ಥಿಗಳೂ ರಾಜಕೀಯವೂ

ವಿದ್ಯಾಭ್ಯಾಸ ಮುಗಿಸಿದವರಿಗೆ ಚಳುವಳಿ. ಓದುವಾಗ ವಿದ್ಯಾರ್ಥಿಗಳಿಗೆ ಒಂದೇ ಕೆಲಸ, ಜ್ಞಾನಾರ್ಜನೆ. ಶಿಕ್ಷಣ ಪ್ರಯೋಜನಕರವೆ ಎನ್ನುವ ಒರೆಗಲ್ಲು—ಅದರಿಂದ ಅನ್ನ ಬಟ್ಟೆಗಳ ಉತ್ಪತ್ತಿಗೆ ಏನಾದರೂ ಸಹಾಯವಾಗುತ್ತದೆಯೆ ?

ಸ್ವಾತಂತ್ರ್ಯ ಸಂಗ್ರಾಮದ ಮೇರೆಯಲ್ಲಿ ವಿದ್ಯಾರ್ಥಿಗಳ ಶಿಕ್ಷಣದ ಬಗ್ಗೆ ನಾನು ಹೇಳಿದುದನ್ನು ಮರೆತಿದ್ದಾರೆ. ಶಾಲೆ ಕಾಲೇಜುಗಳಲ್ಲಿ ಇದ್ದುಕೊಂಡು ರಾಜಕೀಯ ಕೆಲಸಮಾಡಿ ಎಂದು ವಿದ್ಯಾರ್ಥಿಗಳಿಗೆ ನಾನು ಹೇಳಲಿಲ್ಲ.

ಅಹಿಂಸಾಯುತ ಅಸಹಕಾರವನ್ನೂ ಹೂಡಿದ್ದೆ. ಶಿಕ್ಷಣ ಸಂಸ್ಥೆಗಳನ್ನು ಬಿಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಬನ್ನಿ ಎಂದೆ.೧೦೦

ವಿದ್ಯಾರ್ಥಿಗಳಿಗೆ ಪಕ್ಷರಾಜಕೀಯ ಸಾಧ್ಯವಿಲ್ಲ. ಎಲ್ಲಾ ಪಕ್ಷಗಳವರನ್ನೂ ಕೇಳಲಿ, ಎಲ್ಲ ಬಗೆ ಪುಸ್ತಕಗಳನ್ನೂ ಓದುವದಿಲ್ಲವೆ? ಆದರೆ ಅವರ ಕೆಲಸ ಸತ್ಯವನ್ನು ಗ್ರಹಿಸಿ ಉಳಿದುದನ್ನು ಬಿಸಾಡುವುದು. ಅವರು ಅವಲಂಬಿಸಬೇಕಾದ ಯೋಗ್ಯವೃತ್ತಿ ಇದೇ.

ವಿದ್ಯಾರ್ಥಿ ಪ್ರಪಂಚಕ್ಕೆ ಅಧಿಕಾರದ ರಾಜಕೀಯ ಗೊತ್ತೇ ಇರಲಾಗದು. ಆ ಕೆಲಸಕ್ಕೆ ಕೈಹಾಕಿದರೆ ಅವರು ವಿದ್ಯಾರ್ಥಿಗಳಲ್ಲ. ಆದ್ದರಿಂದ ದೇಶಕ್ಕೆ ಕಷ್ಟಬಂದಾಗ ಅವರಿಂದ ಸೇವೆಯಾಗದು.೧೦೧

ವಿದ್ಯಾರ್ಥಿಗಳು ಯಾವ ಪಕ್ಷದ ಕಡೆಯೂ ಸೇರಬಾರದು. ಆದರೆ ಅವರವರ ರಾಜಕೀಯ ಅಭಿಪ್ರಾಯವನ್ನು ಹೇಳಲು ಅವರಿಗೆ ಸ್ವಾತಂತ್ರ್ಯವಿರಬೇಕು. ಶಿಕ್ಷಣ ಸಂಸ್ಥೆಗಳ ಕೆಲಸ ಅವಕ್ಕೆ ಬಂದು ಸೇರಿದ ಹುಡುಗ—ಹುಡುಗಿಯರಿಗೆ ಶಿಕ್ಷಣ ಕೊಟ್ಟು, ಅವರ ಗುಣವಿಕಾಸಮಾಡಿಸುವುದು; ಶಾಲೆಯ ಹೊರಗಡೆ ಅವರ ರಾಜಕೀಯ ಚಟುವಟಿಕೆ, ನೀತಿಬಾಹಿರವಲ್ಲದ ಚಟುವಟಿಕೆ ಏನಿದ್ದರೂ ಅಡ್ಡಿಮಾಡುವುದಲ್ಲ.೧೦೨

ಇವತ್ತು ನಾನು ಸತ್ಯಾಗ್ರಹ ನಡೆಸಿದರೆ ವಿದ್ಯಾರ್ಥಿಗಳನ್ನು ಶಾಲೆ—ಕಾಲೇಜು ಬಿಟ್ಟು ಬನ್ನಿ ಎಂದು ಕರೆಯುವುದಿಲ್ಲ, ಚಳುವಳಿಗೆ ಸೇರಬೇಕೆನ್ನುವವರು ಶಾಲೆ—ಕಾಲೇಜುಗಳಿಗೆ ಒಂದೇ ಸಲ ಭರತವಾಕ್ಯಹೇಳಿ, ಚಳುವಳಿ ಮುಗಿದಮೇಲೂ ದೇಶದ ಸೇವೆಗೆ ನಿಲ್ಲುವ ಸಂಕಲ್ಪ ಮಾಡಿ ಬರಬೇಕು.೧೦೩

ವಿದ್ಯಾರ್ಥಿಗಳಿಗೆ ಪಕ್ಷ—ರಾಜಕೀಯ ಕೂಡದೆಂದು ಸಾರಿ ಸಾರಿ ಹೇಳುತ್ತೇನೆ. ವಿದ್ಯಾರ್ಥಿಗಳಲ್ಲಿ ಸಮಾಜವಾದಿ, ಸಾಮ್ಯವಾದಿ ಅಥವಾ ಕಾಂಗ್ರೆಸ್ ಗುಂಪುಗಳು ಇರಬಾರದು. ಎಲ್ಲರೂ ಪ್ರಥಮತಃ ವಿದ್ಯಾರ್ಥಿಗಳು, ಅಂತತಃ ವಿದ್ಯಾರ್ಥಿಗಳು, ಕೆಲಸ ನೌಕರಿ ಗಳಿಸಲಿಕ್ಕಲ್ಲ, ಲೋಕಸೇವೆಗಾಗಿ ಸಾಧ್ಯವಿದ್ದಷ್ಟು ಜ್ಞಾನಾರ್ಜನೆ ಮಾಡುತ್ತಿದೇವೆ ಎಂದು ಅವರು ನಿಶ್ಚಯಿಸಬೇಕು.೧೦೪

## ಶಿಕ್ಷಣ—ನಮ್ಮ ಬಡತನ

ನಮ್ಮ ಶಿಕ್ಷಣದ ವೆಚ್ಚ ಬಹಳ ಭಾರವಾಗಿದೆ. ದೇಶದ ಕೋಟ್ಯಂತರ ಜನಕ್ಕೆ ಎರಡು ಹೊತ್ತು ಊಟ ಸಿಗುವುದೇ ಕಷ್ಟವಾಗಿರುವಾಗ, ಅವರು ಉಪ

ವಾಸದಿಂದ ಸಾಯುತ್ತಿರುವಾಗ, ನಮ್ಮ ಬಂಧುಬಳಗಕ್ಕೆ ಬಹಳ ತುಟ್ಟಿಯಾದರೂ ಶಿಕ್ಷಣ ಕೊಡುವ ವಿಚಾರವೆ ರಾಕ್ಷಸತನ. ಮನಸ್ಸಿಗೆ ವೈಶಾಲ್ಯ ಬರುವುದು ಕಷ್ಟ ಪಟ್ಟು ಪಡೆದ ಅನುಭವದಿಂದ. ಕಾಲೇಜಿನಲ್ಲಿ ಶಾಲೆಯಲ್ಲೇ ಎಂದೇನಿಲ್ಲ. ನಾವು ಕೆಲವರು ನಮ್ಮವರಿಗೆ ಅಂಥ ಶಿಕ್ಷಣ ಬೇಡ ಎಂದು ಬಿಟ್ಟುಕೊಟ್ಟರೆ ಆಗ ಪ್ರೌಢ ಶಿಕ್ಷಣ ಪಡೆಯಲೂ ನೀಡಲೂ ನಮಗೆ ಸಾಧನ ದೊರೆತೀತು. ಪ್ರತಿಯೊಬ್ಬ ಹುಡುಗನೂ ತನ್ನ ಶಿಕ್ಷಣದ ವೆಚ್ಚವನ್ನು ತಾನೇ ಕೊಡುವ ದಾರಿ ಯಾವುದೂ ಇಲ್ಲವೆ? ಇರಲಿಕ್ಕಿಲ್ಲ. ಆದರೆ ಪ್ರೌಢ ಶಿಕ್ಷಣ ಪಡೆಯುವ ಬಯಕೆ ಯೋಗ್ಯ, ಈ ಅತಿವ್ಯಯದ ಶಿಕ್ಷಣವನ್ನು ಕೈಬಿಟ್ಟರೆ ಬೇರೆ ದಾರಿ-ನಮ್ಮ ಪರಿಸ್ಥಿತಿಗೆ ಸರಿ ಯಾದುದು—ದೊರೆತೀತು. ಇಂಥ ಪ್ರಸಂಗಗಳಲ್ಲಿ ಸುವರ್ಣನಿಯಮ ಎಂದರೆ, ಸಾಮಾನ್ಯ ಜನತೆಗೆ ಯಾವುದು ಅಸಾಧ್ಯವೋ ಅದು ನಮಗೂ ಬೇಡ. ಬೇಡ ಎನ್ನುವ ಶಕ್ತಿ ಆಕಾಶದಿಂದ ಉದುರುವುದಿಲ್ಲ ನಮ್ಮ ಮೇಲೆ. ಮೊದಲು ಆ ಮನೋಧರ್ಮವನ್ನು ಬೆಳೆಸಬೇಕು. ಆಮೇಲೆ ಆ ಮನೋಧರ್ಮವನ್ನು ಅನು ಸರಿಸಿ ನಮ್ಮ ಜೀವನದಲ್ಲಿ ಪರಿವರ್ತನೆ ಮಾಡಬೇಕು.[೧೦೫]

ಇವತ್ತಿನ ವಿದ್ಯಾರ್ಥಿಗಳ ಕರ್ತವ್ಯವೇನೋ ನಮಗೆ ತಿಳಿಯುವುದಾದರೂ ಹೇಗೆ? ಆದರ್ಶದಿಂದ ಕೆಳಗೆ ಜಾರಿ ಬಿದ್ದಿದ್ದೇವೆ. ಮಕ್ಕಳಿಗೆ ತಂದೆತಾಯಿಗಳೇ ತಪ್ಪು ದಾರಿ ತೋರಿಸುತ್ತಾರೆ. ಹಣ-ಹುದ್ದೆ ಗಳಿಸಲಿಕ್ಕೇ ಮಕ್ಕಳನ್ನು ಓದಿಸ ಬೇಕು ಎಂದು ಅವರ ಭಾವನೆ. ಹೀಗೆ ವಿದ್ಯೆ-ಜ್ಞಾನಗಳ ಹಾದರ ನಡೆಯು ತ್ತಿದೆ.[೧೦೬]

ಪ್ರೌಢ ಶಿಕ್ಷಣ ಬೇಡ ಎಂದಲ್ಲ ನಾನು ಹೇಳುವುದು. ತೆರಿಗೆ ಕೊಡುವ ಬಡಬಗ್ಗರ ವೆಚ್ಚದಲ್ಲಿ ನಾಲ್ಕೆಂಟು ಲಕ್ಷ ಜನ ಹುಡುಗರು ಹುಡುಗಿಯರು ಮಾತ್ರ ವಿದ್ಯೆ ಕಲಿಯುವುದಕ್ಕೆ ನಾನು ವಿರುದ್ಧ. ಈ ಬಗೆಯ ಶಿಕ್ಷಣಕ್ಕೂ ನಾನು ವಿರೋಧಿಯೇ. ಇದರಲ್ಲಿ ಉಗುಳು ಹೆಚ್ಚು, ಮಂತ್ರ ಕಡಮೆ. ಪ್ರೌಢ ಶಿಕ್ಷಣ ಪದ್ಧತಿಯನ್ನು, ಇದೇ ಶಿಕ್ಷಣ ಪದ್ಧತಿಯನ್ನೇ ಪರಿವರ್ತಿಸಬೇಕು.[೧೦೭]

ಕಾಲೇಜು ಶಿಕ್ಷಣದಲ್ಲಿ ನಾನು ಕ್ರಾಂತಿ ಮಾಡಿಯೇನು, ರಾಷ್ಟ್ರದ ಇಂಜನಿಯರುಗಳಿಗೆ ಪ್ರಶಸ್ತಿಗಳಿದ್ದವು. ಯಾವ ಉದ್ಯೋಗಗಳಿಗೆ ಆ ಇಂಜ ನಿಯರರು ಬೇಕೋ ಆಯಾ ಉದ್ಯೋಗಗಳು ಅವರ ತರಬೇತಿನ ವೆಚ್ಚವನ್ನು ವಹಿಸಿಕೊಂಡಾವು. ಅದಕ್ಕೆ ಈ ಶಿಕ್ಷಣವನ್ನು ಪೋಣಿಸಬೇಕು, ಎಂದರೆ, ರಾಜ್ಯದ ಮೇಲ್ವಿಚಾರಣೆಯಲ್ಲಿ ತಾತಾಕಂಪೆನಿಯವರು ಇಂಜನಿಯರುಗಳ

ತರಬೇತಿಗಾಗಿ ಒಂದು ಕಾಲೇಜನ್ನು ನಡಸಿಯಾರು, ಗಿರಣಿಗಳ ಸಂಘಗಳು ತಮಗೆ ಬೇಕಾದ ಪದವೀಧರರ ತರಬೇತಿಗೆ ಬೇಕಾದ ಕಾಲೇಜುಗಳನ್ನು ನಡೆಸಿಯಾವು.

ಹಾಗೆಯೇ ಉಳಿದ ಉದ್ಯೋಗಗಳು. ವ್ಯಾಪಾರ ತನ್ನ ಕಾಲೇಜನ್ನು ನಡೆಸೀತು. ಉಳಿದದ್ದು ಕಲೆ—ಸಾಹಿತ್ಯ, ವೈದ್ಯ, ವ್ಯವಸಾಯ. ಎಷ್ಟೋ ಕಾಲೇಜುಗಳು ಈಗಲೂ ಸ್ವಾವಲಂಬಿಯಾಗಿವೆ. ಆದ್ದರಿಂದ ರಾಜ್ಯವೇ ಕಾಲೇಜು ನಡಸದೆ ಬಿಟ್ಟೀತು. ಗೊತ್ತಾದ ಆಸ್ಪತ್ರೆಗಳಿಗೆ ವೈದ್ಯ ಕಾಲೇಜುಗಳನ್ನು ಜೋಡಿಸಬಹುದು. ಹಣವಂತರಿಗೆ ಆಸ್ಪತ್ರೆಗಳು ಪ್ರಿಯ. ಅವರು ಉದಾರ ದಾನ ನೀಡಿ ವೈದ್ಯದ ಕಾಲೇಜುಗಳನ್ನು ಸಾಕಬಹುದು. ವ್ಯವಸಾಯದ ಕಾಲೇಜುಗಳಂತೂ ಹೆಸರಿಗೆ ತಕ್ಕಹಾಗೆ ಸ್ವಾವಲಂಬಿಯಾಗಿರಬೇಕು. ವ್ಯವಸಾಯದ ಪದವೀಧರರು ಕೆಲವರ ಬಗ್ಗೆ ನನ್ನ ಅನುಭವ ಸಂಕಟಕರ. ಅವರ ಜ್ಞಾನ ಬರೀ ಮೇಲ್ಬಣ್ಣ. ಅವರಿಗೆ ಪ್ರತ್ಯಕ್ಷ ಅನುಭವವಿಲ್ಲ. ಸ್ವಾವಲಂಬಿಯಾಗಿ ದೇಶದ ಆವಶ್ಯಕತೆಗಳಿಗೆ ಅಗತ್ಯವಾದ ವ್ಯವಸಾಯ ಕ್ಷೇತ್ರಗಳಲ್ಲಿ ಅವರು ಕಲಿತಿದ್ದರೆ, ಪದವಿ ದೊರೆತಮೇಲೆ ಮತ್ತೆ ಸಂಬಳತೆಗೆದುಕೊಂಡು ಅನುಭವ ಪಡೆಯ ಬೇಕಾಗುತ್ತಿರಲಿಲ್ಲ.೧೦೮

ರಾಜ್ಯದ ವಿಶ್ವವಿದ್ಯಾನಿಲಯಗಳು ಕೇವಲ ಪರೀಕ್ಷಾ ಸಂಸ್ಥೆಗಳಾಗಬೇಕು. ಪರೀಕ್ಷೆಗಳಿಂದ ಬರುವ ಶುಲ್ಕದಿಂದ ಅವು ಸ್ವಾವಲಂಬಿಗಳಾಗಬೇಕು.

ಇಡೀ ಶಿಕ್ಷಣ ಕ್ಷೇತ್ರದ ಯಾಜಮಾನ್ಯವನ್ನು ವಹಿಸಿಕೊಂಡು ವಿಶ್ವವಿದ್ಯಾನಿಲಯಗಳು ಬೇರೆ ಬೇರೆ ಶಾಖೆಗಳ ಪಾಠ ಕ್ರಮಗಳನ್ನು ನಿರ್ಣಯಿಸಬೇಕು. ಆಯಾ ವಿಶ್ವವಿದ್ಯಾನಿಲಯದ ಅಪ್ಪಣೆಯಿಲ್ಲದೆ ಯಾವ ಖಾಸಗಿ ಶಾಲೆಯೂ ನಡೆಯಲಾಗದು. ಒಂದು ಕೇಂದ್ರ ಶಿಕ್ಷಣ ಶಾಖೆಯ ವಿನಾ ಉಳಿದ ಯಾವ ವೆಚ್ಚವೂ ರಾಜ್ಯಕ್ಕೆ ತಗಲಬಾರದು.೧೦೯

ರಾಜ್ಯದ ಅಗತ್ಯಗಳಿಗಾಗಿ ಕೆಲವು ಶಿಕ್ಷಣ ಸತ್ರಗಳನ್ನು ನಡೆಸಲು ಇದು ಅಡ್ಡಿಯಲ್ಲ.

೧) ಲೋಕದಲ್ಲಿ ಸಿಗುವ ಅತ್ಯುತ್ತಮ ಶಿಕ್ಷಣ ಯಾವುದಕ್ಕೂ ನಾನು ವಿರೋಧಿಯಲ್ಲ.

೨) ಆ ಶಿಕ್ಷಣ ರಾಜ್ಯಕ್ಕೆ ನಿಶ್ಚಿತವಾದ ಉಪಯೋಗವಿದ್ದರೆ ರಾಜ್ಯ ಅದರ ವೆಚ್ಚವನ್ನು ಕೊಡಬೇಕು.

೩) ಎಲ್ಲಾ ಉನ್ನತ ಶಿಕ್ಷಣಕ್ಕೂ ಸರಕಾರದ ಹಣದಿಂದ ಕೊಡುವುದಕ್ಕೆ ನಾನು ವಿರೋಧಿ.

೪) ನಮ್ಮ ಕಾಲೇಜುಗಳಲ್ಲಿ ಕೊಡುವ ಕಲಾಶಿಕ್ಷಣದ ಹೆಸರಿನದು ಬಹು ಮಟ್ಟಿಗೆ ವ್ಯರ್ಥ, ಅದರಿಂದ ಶಿಕ್ಷಿತ ವರ್ಗದಲ್ಲಿ ನಿರುದ್ಯೋಗ ಹೆಚ್ಚಿದೆ ಎಂದು ನನ್ನ ದೃಢ ವಿಶ್ವಾಸ. ನಮ್ಮ ಕಾಲೇಜುಗಳು ಬೀಸುವ ಕಲ್ಲಿನಲ್ಲಿ ಹಿಟ್ಟಾಗುವ ಹುಡುಗ ಹುಡುಗಿಯರ ಮಾನಸಿಕ, ಶಾರೀರಕ ಆರೋಗ್ಯ ನಾಶವಾಗಿದೆ.

೫) ಭಾರತದ ಉನ್ನತ ಶಿಕ್ಷಣದ ಪರದೇಶದ ಭಾಷೆಯ ಮಾಧ್ಯಮ ದಿಂದ ರಾಷ್ಟ್ರಕ್ಕೆ ಹೇಳಲಾರದಷ್ಟು ಬೌದ್ಧಿಕ–ನೈತಿಕ ಹ್ರಾಸವಾಗಿದೆ. ಆಗಿರುವ ನಷ್ಟವನ್ನು ಅರಿಯಲು ಇದು ನಮ್ಮ ಕಣ್ಣೆದುರಿಗೇ ಇದೆ, ಇನ್ನೂ ವಿಕಟವಾಗಿಯೆ ಇದೆ. ಇಂಥ ಶಿಕ್ಷಣ ಪಡೆದ ನಾವೇ ಅತ್ತ ಆದರ ಬಲಿಯೂ ಆಗಬೇಕು, ಇತ್ತ ಅದರ ತೀರ್ಪುಗಾರರೂ ಆಗಬೇಕು–ಅಸಾಧ್ಯ ಕೆಲಸವೇ.

ನಾನು ಉನ್ನತ ಶಿಕ್ಷಣದ ವೈರಿಯಲ್ಲ. ಆದರೆ ಈಗಿರುವ ಉನ್ನತ ಶಿಕ್ಷಣಕ್ಕೆ ವೈರಿಯೆ. ನನ್ನ ಯೋಜನೆಯಲ್ಲಿ ಇನ್ನೂ ಉತ್ತಮ ಪುಸ್ತಕ ಭಂಡಾರ ಹೆಚ್ಚಿ ಯಾವು, ಹೆಚ್ಚು ಉತ್ತಮ ಪ್ರಯೋಗಶಾಲೆ–ಸಂಶೋಧನಶಾಲೆ ಆದಾವು. ರಾಸಾಯನಿಕ ಇಂಜನಿಯರರ, ನಿಜವಾಗಿ ದೇಶ ಸೇವಕರಾದ ಉಳಿದ ತಜ್ಞರ ಒಂದು ದಂಡೇ ಇದ್ದಿತು. ಈ ತಜ್ಞರೆಲ್ಲರೂ ಜನರ ಭಾಷೆಯನ್ನೇ ಆಡಿಯಾರು, ಪರಕೀಯ ಭಾಷೆಯನ್ನಲ್ಲ. ಅವರು ಗಳಿಸುವ ಜ್ಞಾನ ಜನತೆ ಸ್ವತ್ತು ಆದೀತು. ಬರೀ ಅನುಕರಣ ತಪ್ಪಿ ಸ್ವತಂತ್ರ ಕೆಲಸ ಇದ್ದೀತು. ಶಿಕ್ಷಣದ ವೆಚ್ಚವೂ ಸಮ ವಾಗಿ ನ್ಯಾಯವಾಗಿ ಹಂಚಿಹೋದೀತು.೧೧೦

ಶಾಲೆ ಕಾಲೇಜುಗಳಿಗೆ ಹೋದರೇನೆ ಜ್ಞಾನ ಲಭಿಸುತ್ತದೆ, ಇಲ್ಲದಿದ್ದರೆ ಇಲ್ಲ ಎಂಬುದು ಅಂಧವಿಶ್ವಾಸ. ಈ ಶಾಲೆ ಕಾಲೇಜುಗಳು ಹುಟ್ಟುವ ಮೊದಲು ಲೋಕದಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿದ್ದರು. ಸ್ವಂತ ವ್ಯಾಸಂಗದಷ್ಟು ಉನ್ನತಿ ಕಾರಕವೂ ಶಾಶ್ವತವೂ ಆದುದು ಬೇರೆ ಇಲ್ಲ. ಶಾಲೆ ಕಾಲೇಜುಗಳಿಂದ ಜ್ಞಾನದ ಮೇಲಿನ ಧೂಳನ್ನು ತುಂಬುವ ಕಸದ ಬುಟ್ಟಿಗಳಾಗುತ್ತೇವೆ ನಾವು. ಇದರಲ್ಲಿ ಕಾಳು ಇಲ್ಲ, ಬರೀ ಹೊಟ್ಟು. ಶಾಲೆ ಕಾಲೇಜುಗಳನ್ನು ನಾನು ನಿಂದಿಸುತ್ತಿಲ್ಲ. ಅವುಗಳಿಂದಲೂ ಉಪಯೋಗವಿದೆ. ಆದರೆ ನಾವು ಅತಿ ಮಾಡುತ್ತಿದೇವೆ. ಜ್ಞಾನಾರ್ಜನೆಯ ಅನೇಕ ಸಾಧನಗಳಲ್ಲಿ ಅದು ಒಂದು.೧೧೧

## ಶಿಕ್ಷಣದಲ್ಲಿ ಅಹಿಂಸೆ

ಶಿಕ್ಷಣದಲ್ಲಿ ಅಹಿಂಸೆಯೆಂದರೆ ವಿದ್ಯಾರ್ಥಿಗಳ ಪರಸ್ಪರ ವರ್ತನೆಯ ಮೇಲೆ ಅದರ ಪ್ರಭಾವವಿದ್ದೇ ಇರಬೇಕು. ಇಡೀ ವಾತಾವರಣವೆ ಅಹಿಂಸೆಯ ಪರಿಶುದ್ಧ ಪರಿಮಳದಿಂದ ಘಮ ಘಮಿಸುತ್ತಿದ್ದರೆ ಒಟ್ಟಿಗೆ ಅಭ್ಯಾಸ ಮಾಡುವ ಹುಡುಗರೂ ಹುಡುಗಿಯರೂ ಅಣ್ಣತಂಗಿಯರಂತೆ ನಡೆದುಕೊಂಡಾರು—ಸ್ವಚ್ಛಂದವಾಗಿ ಯಾದರೂ ಸಂಯಮದಿಂದ ಶಿಕ್ಷಕರಲ್ಲಿ ಪಿತೃಭಕ್ತಿ, ಪರಸ್ಪರ ಆದರ-ವಿಶ್ವಾಸ ಗಳನ್ನು ವಿದ್ಯಾರ್ಥಿಗಳು ತೋರಿಯಾರು. ಈ ಪರಿಶುದ್ಧ ವಾತಾವರಣವೇ ಅಹಿಂಸೆಯಲ್ಲಿ ಒಂದು ನಿರಂತರ ಪಾಠವಾಗಿದ್ದೀತು. ಇಂಥ ವಾತಾವರಣದಲ್ಲಿ ಬೆಳೆದ ಹುಡುಗರು ತಮ್ಮ ಔದಾರ್ಯ, ದೃಷ್ಟಿ ವೈಶಾಲ್ಯ, ಸೇವಾಕೌಶಲಗಳಿಗೆ ಹೆಸರಾದಾರು. ಸಾಮಾಜಿಕ ಪೀಡೆಗಳ ಬಗ್ಗೆ ಅವರಿಗೆ ಯಾವ ಕಷ್ಟವೂ ಇಲ್ಲ. ಅವರ ಪ್ರೇಮದ ಗಾಢತೆಯೆ ಅದನ್ನು ಸುಟ್ಟು ಬಿಡುತ್ತದೆ. ಉದಾಹರಣೆಗೆ: ಬಾಲ್ಯವಿವಾಹ ಅವರಿಗೆ ಅಸಹ್ಯವಾಗುತ್ತದೆ. ಕನ್ಯೆಯರ ತಂದೆ ತಾಯಿಗಳಿಂದ ವರದಕ್ಷಿಣೆ ಕೇಳಿ ಅವರನ್ನು ಪೀಡಿಸುವ ಯೋಚನೆಯೆ ಅವರಿಗೆ ಬಾರದು. ಮದುವೆಯಾದ ಮೇಲೆ ತಮ್ಮ ಹೆಂಡಿರನ್ನು ಕೇವಲ ವಿಷಯೋಪಭೋಗ ಸಾಧನ ವೆಂದಾಗಲಿ ಒಂದು ಸೊತ್ತು ಎಂದಾಗಲಿ ತಿಳಿಯಲು ಅವರಿಗೆ ಧೈರ್ಯವೆ? ಅಹಿಂಸೆಯ ವಾತಾವರಣದಲ್ಲಿ ಬೆಳೆದ ತರುಣ ಪರಧರ್ಮದ ತಮ್ಮನೊಡನೆ ಕಾದುವ ಯೋಚನೆಯನ್ನಾದರೂ ಮಾಡಬಲ್ಲನೆ? ಇದನ್ನೆಲ್ಲ ಮಾಡುವವನು ಖಂಡಿತವಾಗಿಯೂ ಅಹಿಂಸಾವಾದಿ ಎನ್ನಲಾರ.

ಅಹಿಂಸೆ ಎಣೆಯಿಲ್ಲದ ಸಾಮರ್ಥ್ಯವುಳ್ಳ ಸಾಧನ. ಜೀವನದ ಪರಾಕಾಷ್ಠೆ. ಧೀರರ ಲಕ್ಷಣ ಅದು, ಅವರ ಸರ್ವಸ್ವ. ಹೇಡಿಗಳ ಕೈಗೆ ಎಟುಕುವುದಲ್ಲ ಅದು. ಅದು ಬರೀ ನಿರ್ಜೀವ ಕಾಷ್ಠದಂಥ ಸಿದ್ಧಾಂತವಲ್ಲ, ಸಜೀವ ಜೀವನ ದಾಯಕ ಶಕ್ತಿ. ಆತ್ಮದ ವಿಶಿಷ್ಟಗುಣ: ಆದ್ದರಿಂದಲೇ ಅದನ್ನು ಪರಮಧರ್ಮ ಎಂದಿದ್ದಾರೆ. ಶಿಕ್ಷಕರ ಕೈಯಲ್ಲಿ ಅದು ಪರಿಶುದ್ಧ ಪ್ರೇಮ, ಬಾಳಿನ ಒಂದೊಂದು ಕೃತಿಯಲ್ಲೂ ವ್ಯಕ್ತವಾಗುವ ನಿತ್ಯನೂತನ ಜೀವನ ಸ್ಫೂರ್ತಿಯಾಗಬೇಕು. ಅದರ ಎದುರಿನಲ್ಲಿ ದ್ವೇಷ ನಿಲ್ಲಲಾರದು, ಅಹಿಂಸೆಯ ಸೂರ್ಯನ ಮುಂದೆ ದ್ವೇಷ ಕ್ರೋಧ ಮತ್ಸರ ಮುಂತಾದ ಎಲ್ಲ ಕತ್ತಲೆಯೂ ಕರಗುತ್ತದೆ. ಸೂರ್ಯನನ್ನು ಮರೆಮಾಡಲು ಹೇಗೆ ಸಾಧ್ಯವಿಲ್ಲವೋ ಹಾಗೇ ಅಹಿಂಸೆಯನ್ನೂ ಅಡಗಿಸಲು ಸಾಧ್ಯವಿಲ್ಲ ಶಿಕ್ಷಣ ದಲ್ಲಿ, ಅಲ್ಲಿ ಅದು ನಿಚ್ಚಳವಾಗಿ ದೂರವಾಗಿ ಬೆಳಗುತ್ತದೆ.೧೧೨

# ಚಾರಿತ್ರ್ಯ ಶಿಕ್ಷಣ

ನಾನು ವಿದ್ಯಾರ್ಥಿಗಳ ಸಂಪರ್ಕವನ್ನು ಯಾವಾಗಲೂ ಬೆಳೆಸಿದೇನೆ. ನನ್ನನ್ನು ಅವರು ಬಲ್ಲರು, ನಾನು ಅವರನ್ನು ಬಲ್ಲೆ. ಬೇಕಾದಷ್ಟು ಸೇವೆಯನ್ನು ಒದಗಿಸಿದಾರೆ. ವಿದ್ಯಾರ್ಥಿಗಳಾಗಿದ್ದವರು ಅನೇಕರು ನನ್ನ ಜೊತೆಯಲ್ಲಿ ಕೆಲಸ ಗಾರರಾಗಿದಾರೆ. ಅವರೇ ಭವಿಷ್ಯದ ಆಶಾಕಿರಣವೆಂದು ನಾ ಬಲ್ಲೆ. ಅಸಹಕಾರದ ವಿಜೃಂಭಣೆಯ ಕಾಲದಲ್ಲಿ ಶಾಲೆ ಕಾಲೇಜುಗಳನ್ನು ತೊರೆಯಲು ಅವರಿಗೆ ಕರೆ ಕೊಟ್ಟಿತ್ತು. ಅದಕ್ಕೆ ಮನ್ನಣೆಗೊಟ್ಟ ವಿದ್ಯಾರ್ಥಿಗಳೂ ಪ್ರಾಧ್ಯಾಪಕರೂ ದೃಢ ವಾಗಿ ನಿಂತು ದೇಶಕ್ಕೂ ತಮಗೂ ಹೆಚ್ಚು ಪ್ರಯೋಜನ ಮಾಡಿದಾರೆ.೧೧೩

ಕಾಲೇಜು ಹುಡುಗರಿಗೆ ಒಂದು ಗಳಿಗೆಯ ಹಿಂದೆ ಹೇಳಿದೆ: ಸತ್ಯ ಪರಿ ಶುದ್ಧತೆಗಳ ಗಟ್ಟಿಯಾದ ತಳಹದಿಯ ಮೇಲೆ ಕಟ್ಟದಿದ್ದರೆ ಅಂಥ ಶಿಕ್ಷಣವೆಲ್ಲ ಪೂರಾ ವ್ಯರ್ಥ. ನಿಮ್ಮ ಜೀವನದಲ್ಲಿ ಪರಿಶುದ್ಧತೆ ಇಲ್ಲದಿದ್ದರೆ, ವೈಯಕ್ತಿಕ ಶುದ್ಧತೆಯ ಬಗ್ಗೆ ಜಾಗರೂಕರಾಗಿರದಿದ್ದರೆ, ಕಾಯೇನ ವಾಚಾ ಮನಸಾ ಪರಿಶುದ್ಧ ರಾಗಿರದಿದ್ದರೆ, ಎಷ್ಟೇ ಪೂರ್ಣಪಂಡಿತರಾದರೂ ನೀವು ನಾಶವಾಗುತ್ತೀರಿ.

ನಿಮ್ಮ ಗಮನವನ್ನು ಸೆಳೆಯಬೇಕು ಒಂದು ವಿಷಯದ ಕಡೆ ಎಂದು ಹೇಳಿದಾರೆ ನನಗೆ. ಪರಿಶುದ್ಧತೆಗೆ ಮೊಟ್ಟಮೊದಲು ಶುದ್ಧ ಹೃದಯ ಬೇಕು. ಆದರೆ ಹೃದಯದಲ್ಲಿರುವುದು ಹೊರಗೆ ಬಂದೇ ಬರುತ್ತದೆ. ನಡತೆಯಲ್ಲಿ ಕಾಣಿಸಿ ಕೊಳ್ಳುತ್ತದೆ. ತನ್ನ ಬಾಯನ್ನು ಪರಿಶುದ್ಧವಾಗಿಟ್ಟುಕೊಳ್ಳಬೇಕೆನ್ನುವ ಹುಡುಗ ಕೆಟ್ಟ ಮಾತನ್ನು ಎಂದಿಗೂ ಆಡುವುದಿಲ್ಲ. ಇದು ಸ್ಪಷ್ಟ. ಆದರೆ ತನ್ನ ಬುದ್ಧಿಗೆ ಮಂಕು ಹಿಡಿಸಿ ಮನಸ್ಸಿಗೆ ಮಂಕುಚೆಲ್ಲಿ ತನ್ನ ಗೆಳೆತನಗಳನ್ನು ಕಳೆದುಕೊಳ್ಳು ವಂಥದು ಯಾವುದನ್ನೂ ಅವನು ಬಾಯಿಗೆ ಹಾಕಿಕೊಳ್ಳುವುದಿಲ್ಲ.

ನಿಮ್ಮಲ್ಲಿ ಯಾರಾದರೂ ಬೀಡಿ–ಚುಟ್ಟಾ ಸೇದುತ್ತಿದ್ದರೆ, ಕೂಡಲೆ ಆ ಕೆಟ್ಟ ಚಾಳಿಯನ್ನು ಬಿಟ್ಟುಬಿಡಿ. ಬೀಡಿ ಸೇದುವುದರಿಂದ ಉಸಿರೆಲ್ಲ ದುರ್ವಾಸನೆ ಆಗುತ್ತದೆ. ಅಸಹ್ಯವಾದ ಚಾಳಿ. ರೈಲಿನಲ್ಲಿ ಕೂತಿದ್ದರೆ, ಬೀಡಿ ಸೇದುವವನಿಗೆ ಪೆಟ್ಟಿಗೆಯಲ್ಲಿ ಹೆಂಗಸರಿದಾರೋ ಗಂಡಸರಿದಾರೋ, ಬೀಡಿ ಸೇದ

ದವರು ಎಂಬುದರ ಲಕ್ಷ್ಯವೇ ಇರದು. ತನ್ನ ಬಾಯಿಂದ ಬರುವ ದುರ್ವಾಸನೆ ಅವರಿಗೆ ಅಸಹ್ಯವೆಂಬುದನ್ನು ಯೋಚಿಸುವುದೇ ಇಲ್ಲ.

ದೂರಕ್ಕೆ ಸಿಗರೇಟು ಚಿಕ್ಕದಾಗಿ ಕಾಣಬಹುದು. ಅದರ ಹೊಗೆ ಬಾಯೊಳಗೆ ಹೋಗಿ ಹೊರಕ್ಕೆ ಬರುವಾಗ ಅದು ವಿಷ. ಬೀಡಿ ಸೇದುವವರಿಗೆ ತಾವು ಎಲ್ಲಿ ಉಗುಳುತ್ತೇವೆ ಎಂಬುದರ ಲಕ್ಷ್ಯವೇ ಇಲ್ಲ.

ಬೀಡಿ ಸೇದುವುದರಿಂದ ಬುದ್ಧಿ ಮಂಕಾಗುತ್ತದೆ. ಕೆಟ್ಟ ಚಾಳಿ. ವೈದ್ಯರನ್ನು ಕೇಳಿ. ಒಳ್ಳೆಯ ವೈದ್ಯರಾದರೆ ಬೀಡಿ ಸೇದುವುದರಿಂದ ಎಷ್ಟೋ ಸಂದರ್ಭಗಳಲ್ಲಿ ಒಳಗಡೆ ಹುಣ್ಣು ಆಗುತ್ತದೆ, ಒಳಗಡೆ ಆಗುವ ಹುಣ್ಣಿಗೆ ಇದು ಕಾರಣ ಎಂದು ಹೇಳುತ್ತಾರೆ.

ಬೀಡಿ ಸೇದುವುದಕ್ಕೆ ಏನು ಅಗತ್ಯ ? ಅಗತ್ಯವಿಲ್ಲದಾಗ ಏಕೆ ಸೇದಬೇಕು? ಅದೇನು ಆಹಾರವಲ್ಲ. ಅದರಲ್ಲಿ ಸಂತೋಷವೂ ಇಲ್ಲ. ಮೊಟ್ಟಮೊದಲು ಸೇದಿದ್ದಾಗ ಅವರಿವರ ಮಾತು ಕೇಳಿ ಸಂತೋಷವಾದ ಹಾಗೆ ಅನಿಸುತ್ತದೆ ಅಷ್ಟೇ.

ನೀವು ಒಳ್ಳೆಯ ಹುಡುಗರಾದರೆ, ತಂದೆ ತಾಯಿಗಳಿಗೆ ಶಿಕ್ಷಕರಿಗೆ ವಿಧೇಯರಾಗಿದ್ದರೆ, ಬೀಡಿ ಸೇದುವುದನ್ನು ಬಿಡಿ. ಅದರಿಂದ ಉಳಿಯುವ ಕಾಸನ್ನು ಭಾರತದ ದೀನದರಿದ್ರರಿಗಾಗಿ ನನಗೆ ಕಳಿಸಿ.

ಚಾರಿತ್ರ್ಯಹೀನತೆ ಎಲ್ಲೇ ಕಂಡುಬರಲಿ, ಅದಕ್ಕೆ ಶಿಕ್ಷಣ ಪದ್ಧತಿಯೆ ಕಾರಣ. ಗುರಿಯನ್ನು ಹೇಗೆ ಸಾಧಿಸಬೇಕೋ ವಿದ್ಯಾರ್ಥಿಗಳಿಗೆ ಸರಿಯಾಗಿ ತಿಳಿಸಿ ಕೊಡದಿದ್ದರೆ, ಅವರ ಅಪಕ್ವಬುದ್ಧಿ, ಸಹಾಯರಹಿತ ವಿಚಾರಕ್ಕೆ ಏನು ತೋಚಿದರೆ ಅದನ್ನು ಹಿಡಿಯುತ್ತಾರೆ. ಈಗ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಬಾಂಧವ್ಯವೆ ಇಲ್ಲ. ವಿದ್ಯಾರ್ಥಿಗಳಿಗೆ ಭಕ್ತಿ–ಅಭಿಮಾನಗಳೇ ಇಲ್ಲ. ಅವರಿಗೆ ಪೂರಾ ಆತುರ. ಆತುರದಿಂದ ಆತ್ಮ – ಸಂಯಮ ನಾಶ. ಅದರಿಂದ ಅವರ ಶಕ್ತಿ ಋಜುವಲ್ಲದ ದಾರಿಯಲ್ಲಿ ಹೊರಹೊಮ್ಮುತ್ತದೆ.೧೧೪

ನನ್ನ ಇಡೀ ಸಾರ್ವಜನಿಕ ಜೀವನದಲ್ಲಿ ನನಗೆ ಅನಿಸಿದೆ, ಈಗಲೂ ಅನಿಸುತ್ತಿದೆ : ನಮಗೆ ಬೇಕಾದುದು, ಯಾವ ರಾಷ್ಟ್ರಕ್ಕೇ ಆಗಲಿ ಬೇಕಾದುದು, ಜಗತ್ತಿನ ಎಲ್ಲ ರಾಷ್ಟ್ರಗಳಿಗಿಂತ ಹೆಚ್ಚಾಗಿ ನಮಗೆ ಬೇಕಾದುದು, ಬೇರೇನೂ ಅಲ್ಲ– ಚಾರಿತ್ರ್ಯನಿರ್ಮಾಣ. ಅದಕ್ಕಿಂತ ಕಡಮೆ ಸ್ವಲ್ಪವೂ ಆಗದು. ಚಾರಿತ್ರ್ಯಬಲವಿಲ್ಲದಿದ್ದರೆ ನಾವು ಏನೇ ಬಯಸಿದರೂ ನಮಗೆ ಏನೂ ಸಿಗದು, ಯಾವುದಕ್ಕೂ ನಮಗೆ ಏನೂ ಸಿಗದು, ಯಾವುದಕ್ಕೂ ನಮಗೆ ಯೋಗ್ಯತೆ

ಇರದು ಎನ್ನುತ್ತಿದ್ದರು ಗೋಖಲೆ ಮಹಾಶಯರು. ಆದ್ದರಿಂದಲೇ ಅವರು ಭಾರತ ಸೇವಕ ಸಮಾಜವನ್ನು ಸ್ಥಾಪಿಸಿದುದು. ಅದನ್ನು ಕುರಿತು ಅವರು ಪ್ರಕಟಿಸಿದ ಹೊತ್ತಿಗೆಯಲ್ಲಿ ದೇಶಸೇವೆ ಈಶಸೇವೆಯಾಗಬೇಕು ಎಂದು ಉದ್ದೇಶ್ಯ ಪೂರ್ವಕವಾಗಿ ಬರೆದಿದಾರೆ.

ನಾನಂತೂ ಒಂದು ಜೀವನ ಸೂತ್ರವನ್ನು ಒಪ್ಪಿಕೊಂಡಿದೇನೆ: ಮನುಷ್ಯರು ಮಾಡಿದ ಕೆಲಸಕ್ಕೆ, ಅವರು ಎಷ್ಟೇ ಶ್ರೇಷ್ಠರಾಗಿರಲಿ, ಧರ್ಮದ ಆಧಾರ ವಿಲ್ಲದಿದ್ದರೆ ಅದಕ್ಕೆ ಏಳಿಗೆಯಿಲ್ಲ. ಹಿಂದೆಯೆ ಪ್ರಶ್ನೆ ಕೇಳಬಹುದು–ಧರ್ಮ ಎಂದರೇನು? ಜಗತ್ತಿನ ಎಲ್ಲ ಧರ್ಮಗ್ರಂಥಗಳ ಅಧ್ಯಯನದಿಂದಲೂ ಧರ್ಮ ತಿಳಿಯುವುದಿಲ್ಲ. ಬುದ್ಧಿಯಿಂದ ಗ್ರಹಿಸುವಂಥದಲ್ಲ ಅದು, ಹೃದಯದಿಂದ ಗ್ರಹಿಸ ಬೇಕಾದುದು, ನಮಗೇನು ಅಪರಿಚಿತವಲ್ಲ ಅದು, ನಮ್ಮೊಳಗಿಂದಲೇ ಅದನ್ನು ವಿಕಾಸಗೊಳಿಸಬೇಕು. ಒಳಗೇ ಇದೆ. ಕೆಲವರಿಗೆ ಅದು ಗೊತ್ತು. ಕೆಲವರಿಗೆ ಗೊತ್ತಿಲ್ಲ. ಅಂತೂ ಇದೆ. ಹೊರಗಿನ ಸಹಾಯದಿಂದಲೋ ಒಳಗಿನ ವಿಕಾಸ ದಿಂದಲೋ, ಹೇಗೋ ನಮ್ಮ ಧರ್ಮಬುದ್ಧಿಯನ್ನು ಎಚ್ಚರಗೊಳಿಸಬೇಕು. ಸರಿಯಾದ ರೀತಿಯಲ್ಲಿ ಶಾಶ್ವತವಾದುದನ್ನು ಏನಾದರೂ ಮಾಡಬೇಕು ಎಂದರೆ ಅದನ್ನು ಎಚ್ಚರಿಸಲೇಬೇಕು.

ನಮ್ಮ ಧರ್ಮಗ್ರಂಥಗಳಲ್ಲಿ ಕೆಲವು ಜೀವನ-ಸೂತ್ರಗಳಿವೆ. ಅವು ಸ್ವಯಂ ಸಿದ್ಧ ಸತ್ಯ. ಈ ನಿಯಮಗಳಂತೆ ನಡೆಯದಿದ್ದರೆ ಧರ್ಮಜ್ಞಾನ ನಮಗೆ ಕಿಂಚಿತ್ತೂ ಆಗದೆಂದು ಶಾಸ್ತ್ರಗಳು ಹೇಳುತ್ತವೆ. ಅದನ್ನು ಶ್ರದ್ಧಾಪೂರ್ವಕ ಇಷ್ಟು ದೀರ್ಘಕಾಲವೂ ನಂಬಿ ಆ ಶಾಸ್ತ್ರ ವಚನಗಳನ್ನು ಆಚರಣೆಯಲ್ಲಿ ತರಲು ನಾನು ಪ್ರಯತ್ನಿಸಿದೇನೆ.೧೧೫

ಯೋಗ್ಯವಾದ ಶಿಕ್ಷಣವನ್ನು ನಿರ್ಮಿಸಲು ವೈಯಕ್ತಿಕ ಜೀವನದ ಪವಿತ್ರತೆ ಅನಿವಾರ್ಯ ವಸ್ತು. ಸಾವಿರಾರು ವಿದ್ಯಾರ್ಥಿಗಳನ್ನು ನೋಡಿದೇನೆ. ನಿರಂತರವೂ ವಿದ್ಯಾರ್ಥಿಗಳೊಡನೆ ನನ್ನ ಪತ್ರವ್ಯವಹಾರ ನಡೆಯುತ್ತಿದೆ. ತಮ್ಮ ಒಳ-ಒಳಗಿನ ಮಾತನ್ನೆಲ್ಲ ಬರೆಯುತ್ತಾರೆ. ಅದೆಲ್ಲದರಿಂದ ನಮಗೆ ಬೇಕಾದುದು ಬಹಳ ಮಟ್ಟಿಗೆ ಇಲ್ಲ ಎಂಬುದು ಸ್ಪಷ್ಟವಾಗಿದೆ. ನಮ್ಮ ಭಾಷೆ ಯಲ್ಲಿ ಒಂದು ಚಲೋ ಶಬ್ದ ಇದೆ. ವಿದ್ಯಾರ್ಥಿ ಎಂಬುದಕ್ಕೆ ಬದಲು ಬ್ರಹ್ಮ ಚಾರಿ ಎಂದು, ಅದರ ಅರ್ಥ ನಿಮಗೆ ಗೊತ್ತಿರಬೇಕು. ಬ್ರಹ್ಮನ ಶೋಧನೆ ಮಾಡುವವರು, ಆದಷ್ಟು ಅಲ್ಪ ಕಾಲದಲ್ಲಿ ದೇವರ ಸನ್ನಿಧಿಯನ್ನು ಸೇರಲು

ತಕ್ಕಂತೆ ನಡೆದುಕೊಳ್ಳುವವನು, ಜಗತ್ತಿನ ಎಲ್ಲ ಶ್ರೇಷ್ಠ ಧರ್ಮಗಳೂ ಉಳಿದು ದರಲ್ಲಿ ಎಷ್ಟೇ ಅಭಿಪ್ರಾಯ ಭೇದವಿರಲಿ, ಅಪರಿಶುದ್ಧ ಹೃದಯದ ಹೆಣ್ಣಾಗಲಿ ಗಂಡಾಗಲಿ ದೇವರ ಧವಳಪೀಠದ ಎದುರಿನಲ್ಲಿ ನಿಲ್ಲಬಾರದು ಎನ್ನುವುದರಲ್ಲಿ ಒಂದೇ. ಎಷ್ಟೇ ವೇದಪಾಠ ಮಾಡಲಿ, ಸಂಸ್ಕೃತದ ಗ್ರೀಕ್ ಲ್ಯಾಟೀನ್ ಭಾಷೆ ಗಳ ಅಖಂಡ ಪಾಂಡಿತ್ಯವಿರಲಿ ಹೃದಯ ಶುದ್ಧಿಯನ್ನು ಕಲಿಸದಿದ್ದರೆ ಅದೆಲ್ಲವೂ ವ್ಯರ್ಥ. ಸಮಸ್ತ ಜ್ಞಾನಕ್ಕೂ ಗುರಿ-ಚಾರಿತ್ರ್ಯ ನಿರ್ಮಾಣ.೧೧೬

ನೀನೇ ಕೈಯಾರೆ ಚಾರಿತ್ರ್ಯವನ್ನು ಬೆಳೆಸಬೇಕು. ಇತರರು ಮಾಡಲಾ ರರು. ಪ್ರಾಧ್ಯಾಪಕರು ನಿಮಗೆ ಚಾರಿತ್ರ್ಯವನ್ನು ನೀಡಲಾರರು, ಪುಸ್ತಕದಿಂದ ತೆಗೆಮು, ಚಾರಿತ್ರ್ಯದ ಉಗಮ ಜೀವನದಲ್ಲಿ, ನಿಮ್ಮ ಬಾಳಿನಲ್ಲಿ ಮೂಡಬೇಕು ಅದು.

ಕ್ರಿಶ್ಚಿಯನ್ ಮತ, ಹಿಂದೂಧರ್ಮ, ಇತರ ಮತಗಳು, ಎಲ್ಲವನ್ನೂ ಅಧ್ಯಯನ ಮಾಡುವಾಗ ಈ ಎಲ್ಲ ಮತ-ಧರ್ಮಗಳ ಅನಂತ ವೈವಿಧ್ಯದಲ್ಲಿ ಒಂದು ಮೂಲಭೂತ ಏಕತೆ ಇರುವುದು ನನಗೆ ಕಾಣಬಂತು. ಅದು ಸತ್ಯ, ಅಹಿಂಸೆ. ಹುಡುಗರು ನೀವು ಸತ್ಯ ಅಹಿಂಸೆಗಳನ್ನು ನಂಬಿ ಪರಾಕ್ರಮದಿಂದ ನಡೆದರೆ ಭದ್ರವಾದ ತಳಹದಿಯ ಮೇಲೆ ನಿಂತಿದೇವೆ ಎನಿಸೀತು.೧೧೭

ಈಗಿರುವ ಸ್ಥಿತಿಯಲ್ಲಿ ವಿದ್ಯಾರ್ಥಿಗಳು ಏನು ಮಾಡಬಲ್ಲರೋ, ದೇಶಸೇವೆ ಗಾಗಿ ನಾವು ಇನ್ನೂ ಏನು ಮಾಡಬಹುದೋ ಆಲೋಚಿಸಬೇಕು. ವಿದ್ಯಾರ್ಥಿ ಲೋಕ ಒಳ್ಳೆಯದೆನಿಸಲಿ ಎಂಬ ನನಗೂ ಇನ್ನೂ ಅನೇಕರಿಗೂ ಹೊಳೆದಿರುವ ಉತ್ತರ, ವಿದ್ಯಾರ್ಥಿಗಳು ತಮ್ಮೊಳಗೇ ಶೋಧನೆ ಮಾಡಬೇಕು. ತಮ್ಮ ನಡೆ ನುಡಿಯನ್ನು ಕಾಪಾಡಿಕೊಳ್ಳಬೇಕು. ಸಮಸ್ತ ಜ್ಞಾನಕ್ಕೂ ಚಾರಿತ್ರ್ಯ ನಿರ್ಮಾ ಣವೇ ಕೊನೆ.೧೧೮

ಅನೇಕ ಹುಡುಗ ಹುಡುಗಿಯರ, ಸಾವಿರಾರು ಮಂದಿ ಹುಡುಗ ಹುಡುಗಿ ಯರ ತಂದೆಯಂತೆ ಹುಡುಗರಿಗೆ ಹುಡುಗಿಯರಿಗೆ ಹೇಳುತ್ತೇನೆ—ನಿಮ್ಮ ನಿಮ್ಮ ಭವಿಷ್ಯ ನಿಮ್ಮ ಕೈಯಲ್ಲೇ ಇದೆ. ನೀವು ಶಾಲೆಯಲ್ಲಿ ಏನು ಕಲಿಯುತ್ತೀರೋ ಬಿಡುತ್ತೀರೋ ನನಗೆ ಬೇಕಾಗಿಲ್ಲ; ಎರಡನ್ನು ಮಾತ್ರ ನಡೆಸಿರಿ. ಎಂಥ ಪ್ರಸಂಗವೇ ಬರಲಿ, ಎಷ್ಟೇ ಕಷ್ಟತರವಾಗಿರಲಿ ನಿರ್ಭಯದಿಂದ ಸತ್ಯವನ್ನು ಪಾಲಿ ಸಿರಿ-ಇದು ಒಂದು ನಿಯಮ. ಸತ್ಯವಂತ, ಧೀರ ಆದ ಹುಡುಗ ಕ್ರಿಮಿಕೀಟ ವನ್ನು ಹಿಂಸೆ ಮಾಡುವುದಿಲ್ಲ. ಶಾಲೆಯಲ್ಲಿ ದುರ್ಬಲ ಹುಡುಗರನ್ನು ಶಾಲೆ

ಯೊಳಗೂ ಹೊರಗೂ, ಅವನ ಸಹಾಯ ಅಗತ್ಯವಿದ್ದವರನ್ನು ರಕ್ಷಿಸಿಯಾನು. ಮನಸ್ಸು, ಮೈ, ಕೃತಿಗಳಲ್ಲಿ ಪರಿಶುದ್ಧತೆಯಿಲ್ಲದ ಹುಡುಗನನ್ನು ಶಾಲೆಯಿಂದ ಓಡಿಸಬೇಕು. ಧೀರನಾದ ಹುಡುಗ ಯಾವಾಗಲೂ ತನ್ನ ಮನಸ್ಸನ್ನೂ ಕಣ್ಣು ಕೈಗಳನ್ನೂ ಶುದ್ಧವಾಗಿಟ್ಟುಕೊಳ್ಳುತ್ತಾನೆ. ಜೀವನದ ಈ ಮೂಲ ಸೂತ್ರಗಳನ್ನು ಕಲಿಯಲು ಯಾವ ಶಾಲೆಗೂ ಹೋಗಬೇಕಾದ್ದಿಲ್ಲ. ಈ ತ್ರಿಕರಣ ಶುದ್ಧಿ ಇದ್ದರೆ ಜೀವನಕ್ಕೆ ದೃಢವಾದ ತಳಹದಿ ದೊರೆತಂತೆ.೧೧೯

ಇಷ್ಟೆಲ್ಲ ಪುಸ್ತಕ ಪಾಂಡಿತ್ಯ, ಬೌದ್ಧಿಕ ಜ್ಞಾನಗಳ ಶಿಕ್ಷಣ ಪಡೆದರೂ ಸತ್ಯ ಪ್ರೇಮಗಳ ವಿಶಾಲ ಆಧಾರ ಒಂದು ಇಲ್ಲದಿದ್ದರೆ ಎಲ್ಲವೂ ವ್ಯರ್ಥ ಎಂದು ನಮ್ಮ ಶಿಕ್ಷಕರು ಪದೇ ಪದೇ ಹೇಳುತ್ತಿರಬೇಕು. ಸಂದೇಹವಿಲ್ಲ, ಸತ್ಯ ನಿಮಗೆ ಧೈರ್ಯ ನಿರ್ಭಯಗಳನ್ನು ಕೊಡುತ್ತದೆ. ಎಲ್ಲೇ ಹೋದರೂ ಅದ ರಿಂದ ನೀವು ಒಳ್ಳೆಯವರೆನಿಸಿಕೊಂಡೀರಿ. ಪ್ರೇಮ ಬಾಳನ್ನು ಸಹನೀಯವಾಗಿ ಮಾಡುತ್ತದೆ. ಪ್ರೇಮದ ವಿಶಿಷ್ಟಗುಣ ಅದು—ಪ್ರೇಮಕ್ಕೆ ಬದಲು ಅಖಂಡವಾಗಿ ಪ್ರೇಮ ಸಿಗುತ್ತದೆ.

ದೇವರು ಈ ಗುಣಗಳನ್ನು ಬೆಳೆಸಿಕೊಳ್ಳಲು ನಿಮಗೆ ದಿನ ದಿನವೂ ಸಹಾಯ ಮಾಡಲಿ.೧೨೦

ಬರೀ ವಿದ್ಯೆಯಿಂದ ಏನೂ ಲಾಭವಿಲ್ಲ. ಸ್ವರಾಜ್ಯ ಪಡೆಯಲು ಶುದ್ಧ ಚಾರಿತ್ರ್ಯದಿಂದಲೇ ಸಾಧ್ಯ. ಸ್ವಾತಂತ್ರ್ಯದ ಸಸಿಯನ್ನು ನೆಟ್ಟು ನೀರೆರೆದು ಬೆಳೆಸಬೇಕು. ಕಾಲಾನುಕಾಲಕ್ಕೆ ಅದು ಸೊಗಸಾದ ಸ್ವರಾಜ್ಯವೃಕ್ಷವಾಗಿ ಬೆಳೆಯಲು, ಚಾರಿತ್ರ್ಯ ಬಲದಿಂದ ಮಾತ್ರವೇ ಅದು ಬೆಳೆದೀತು.

ಹಣದ ಅಭಾವದಿಂದ ಎಂದೂ ಪ್ರಗತಿ ನಿಲ್ಲುವುದಿಲ್ಲ. ಮನುಷ್ಯನ ಅಭಾವದಿಂದ, ಸರಿಯಾದ ಮುಂದಾಳು ಇಲ್ಲದೆ, ಮುಂದಾಳು ಇದ್ದರೂ ಅನುಯಾಯಿಗಳು ಇಲ್ಲದೆ ಪ್ರಗತಿ ನಿಲ್ಲುತ್ತದೆ. ಆದರೆ ಯೋಗ್ಯನಾದ ಮುಖಂಡನಿಗೆ ಅನುಯಾಯಿಗಳು ಸಿಕ್ಕೇ ಸಿಗುತ್ತಾರೆಂದು ನನ್ನ ಮತ. ನೆಲ ಎಷ್ಟೇ ಡೊಂಕೆ ಇರಲಿ, ಕುಣಿತಬಲ್ಲ ನಟಿ ಚೆನ್ನಾಗಿಯೆ ಕುಣಿಯುತ್ತಾಳೆ. ಅದೇ ರೀತಿ ಮುಂದಾಳು ಕಲೆಗಾರನಾದರೆ ಮಣ್ಣನ್ನೂ ಮನುಷ್ಯರಾಗಿ ಮಾಡುತ್ತಾರೆ. ನಿಮ್ಮ ಶಿಕ್ಷಕರೂ ಅಂಥ ಜೀವನ ಕಲೆಯಲ್ಲಿ ನಿಪುಣರಾಗಬೇಕು.

ದೇಶದಲ್ಲಿರುವ ಪ್ರತಿಯೊಂದು ಮನೆಯೂ ಶಾಲೆಯೆ. ತಂದೆ ತಾಯಿಗಳೇ ಶಿಕ್ಷಕರು. ಈಗ ತಂದೆ ತಾಯಿ ಕಲಿಸುವುದನ್ನು ಕೈಬಿಟ್ಟಿದಾರೆ. ತಮ್ಮ ಪವಿತ್ರ

ಕರ್ತವ್ಯವನ್ನು ಕಡೆಗಣಿಸಿ ಭ್ರಷ್ಟರಾಗಿದಾರೆ. ಪರದೇಶದ ನಾಗರೀಕತೆಯ ಗುಣ ಅವಗುಣ ನಮಗೆ ಗೊತ್ತಿಲ್ಲ. ಅದರ ತಿರುಳು ತಿಳಿಯದು, ಎರವಲು ತಂದಿದೇವೆ ಅಥವಾ ಕದ್ದು ತಂದಿದೇವೆ, ಕಳವಿನ ಪದಾರ್ಥ ನಮಗೆ ಗತಿ ಕಾಣಿಸದು.೧೨೧

ಎಷ್ಟೇ ಅಪಾರ ಸಂಪತ್ತು ಇರಲಿ ಚಾರಿತ್ರ್ಯ ಇಲ್ಲದಿದ್ದರೆ ಆ ಮನುಷ್ಯ ಪಾಳುಬಿದ್ದ ಅರಮನೆಯ ಹಾಗೆ.೧೨೨

ದುಡ್ಡಿಗಿಂತ ಬುದ್ಧಿಯದೇ ಮೇಲುಗೈ. ಇದರಲಿ ಭಿನ್ನಾಭಿಪ್ರಾಯವಿಲ್ಲ, ಆದರೆ ಕಡೆಗೆ ಬುದ್ಧಿಗಿಂತ ಹೆಚ್ಚಾಗಿ ಹೃ . .ವೇ ಪಾರಿ ತೋರೀತು ಎಂಬು ದನ್ನು ಒಪ್ಪಬೇಕು. ಪರೀಕ್ಷೆಯ ಸಮಯದಲ್ಲಿ ಬುದ್ಧಿಯಲ್ಲ, ಚಾರಿತ್ರ್ಯಕ್ಕೇ ಬೆಲೆ.೧೨೩

ಚಾರಿತ್ರ್ಯವಿಲ್ಲದ ಜ್ಞಾನ ಆಸುರೀಶಕ್ತಿ, ಎಷ್ಟು ಜನ ಪ್ರತಿಭಾಶಾಲಿ ಕಳ್ಳರನ್ನು ಗೋಮುಖ ವ್ಯಾಘ್ರಗಳನ್ನು ನೋಡಿಲ್ಲ.೧೨೪

ನಿಮ್ಮ ಹೃದಯ ಪರಿಶುದ್ಧವಲ್ಲದಿದ್ದರೆ, ನಿಮ್ಮ ವಿಕಾರಗಳನ್ನು ನೀವು ನಿಗ್ರಹಿಸಲಾಗದಿದ್ದರೆ ನೀವು ವಿದ್ಯಾವಂತರಲ್ಲ. ಚಾರಿತ್ರ್ಯಶುದ್ಧಿಯಲ್ಲದ್ದು ವಿದ್ಯೆಯೆ? ವೈಯುಕ್ತಿಕ ಪ್ರಾಥಮಿಕ ಪರಿಶುದ್ಧಿಯೂ ಇಲ್ಲದೆ ಚಾರಿತ್ರ್ಯವೆ?೧೨೫

ಯಾವುದನ್ನು ಹಿಡಿಯಬೇಕೋ ಯಾವುದನ್ನು ಬಿಡಬೇಕೋ ವಿದ್ಯಾರ್ಥಿ ಗಳು ತಿಳಿದುಕೊಳ್ಳಬೇಕು. ಈ ವಿವೇಕವನ್ನು ವಿದ್ಯಾರ್ಥಿಗಳಿಗೆ ಕಲಿಸುವುದು ಶಿಕ್ಷಕನ ಕರ್ತವ್ಯ. ವಿವೇಚನೆಯಿಲ್ಲದೆ ಸಿಕ್ಕದ್ದನ್ನೆಲ್ಲ ಗ್ರಹಿಸುತ್ತ ಹೋದರೆ ನಾವೂ ಯಂತ್ರಗಳಿಗಿಂತ ಮೇಲೆನಿಸಿಕೊಳ್ಳಲಾರೆವು. ನಾವು ವಿಚಾರಶೀಲ, ಜ್ಞಾನಶೀಲ ಪ್ರಾಣಿಗಳು. ವಿದ್ಯಾರ್ಥಿ ದೆಶೆಯಲ್ಲಿ ಸತ್ಯಾಸತ್ಯವನ್ನು, ಮಧುರ ವಾಣಿ ಕಟುಭಾಷೆಗಳನ್ನು, ಶುದ್ಧಾಶುದ್ಧ ಪದಾರ್ಥಗಳನ್ನೂ ಪ್ರತ್ಯೇಕಿಸಿ ಅರಿತು ಕೊಳ್ಳಬೇಕು. ಒಳ್ಳೆಯದನ್ನು ಕೆಟ್ಟದನ್ನು ವಿಂಗಡಿಸಿಕೊಳ್ಳುವುದೊಂದೇ ಅಲ್ಲ; ಇವತ್ತು ವಿದ್ಯಾರ್ಥಿಗಳಿಗೆ ಇನ್ನೂ ಹೆಚ್ಚು ಕಷ್ಟವಿದೆ. ಋಷಿಗಳು ಪುಸ್ತಕ ವಿಲ್ಲದೆಯೆ ಶಿಷ್ಯರಿಗೆ ಪಾಠ ಹೇಳಿದರು. ಒಂದೆರಡು ಮಂತ್ರಗಳನ್ನು ಉಪದೇಶಿ ಸುತ್ತಿದ್ದರು. ಶಿಷ್ಯರು ಅವನ್ನು ನೆನೆಪಿಟ್ಟು ಬಾಳಿನಲ್ಲಿ ಅದರಂತೆ ನಡೆಯು ತ್ತಿದ್ದರು. ಇವತ್ತೋ ಪುಸ್ತಕದ ರಾಶಿಯಲ್ಲಿ, ಅವನ ಉಸಿರುಕಟ್ಟುವಷ್ಟು ರಾಶಿಯಲ್ಲಿ ಬದುಕಬೇಕು ವಿದ್ಯಾರ್ಥಿ.೧೨೬

ಸರ್. ಎಂ. ವಿಶ್ವೇಶ್ವರಯ್ಯನವರು ನಮ್ಮ ಈಗಿನ ಶಿಕ್ಷಣದ ಒಂದು

ಭಯಂಕರ ದೋಷವನ್ನು ಎತ್ತಿ ತೋರಿಸಿದಾರೆ. ಇದರಲ್ಲಿ ಪುಸ್ತಕ ಪಾಂಡಿತ್ಯಕ್ಕೇ ಹೆಚ್ಚು ಬೆಲೆ ಎಂತ. ಅದಕ್ಕಿಂತಲೂ ಭಯಂಕರವಾದ ಇನ್ನೊಂದು ದೋಷವನ್ನು ನಾನು ಹೇಳುತ್ತೇನೆ. ಅಲ್ಪವಾಗಲಿ ಆ ಗಳಿಗೆಯದಾಗಲಿ, ಯಾವ ಬಗೆಯ ಸೇವೆಯನ್ನೂ ಮಾಡಬಾರದು ವಿದ್ಯಾರ್ಥಿಯಾಗಿರುವಾಗ ಎಂಬ ಅಭಿಪ್ರಾಯ ಹುಡುಗರಿಗೆ ಬರುವಂತೆ ಮಾಡಿದಾರೆ. ಈಗ ಗುಜರಾತಿನಲ್ಲಿ ಪ್ರವಾಹಪೀಡಿತ ಪರಿಹಾರ ಕಾರ್ಯ ನಡೆಯುತ್ತಿದೆ. ಅಂಥ ಸೇವೆಯನ್ನು ಮಾಡಲು ವಿದ್ಯಾರ್ಥಿಗಳು ವ್ಯಾಸಂಗವನ್ನು ನಿಲ್ಲಿಸಿದರೂ ನಷ್ಟವಿಲ್ಲ, ಲಾಭವೇ ಉಂಟು. ಎಲ್ಲ ಶಿಕ್ಷಣಕ್ಕೂ ಸೇವೆಯೇ ಪರಿಸಮಾಪ್ತಿ. ಓದುವಾಗಲೇ ಸೇವೆಯ ಅವಕಾಶ ದೊರೆತರೆ, ಅದೊಂದು ಅಪೂರ್ವ ಅವಕಾಶ, ವಿದ್ಯಾಭ್ಯಾಸದ ಮುಕ್ತಾಯವಲ್ಲ ಅದು, ನಿಜವಾಗಿ ಅದಕ್ಕೆ ಪೂರಕ ಎಂದು ಭಾವಿಸಬೇಕು.[೧೨೭]

'ನಾವೇಕೆ ಕೈಗಳಿಂದ ಕೆಲಸ ಮಾಡಬೇಕು? ಕೈಗೆಲಸ ಅವಿದ್ಯಾವಂತರು ಮಾಡಬೇಕಾದ್ದು. ನಾನು ಸಾಹಿತ್ಯವನ್ನೂ ರಾಜಕೀಯ ವಾಙ್ಮಯವನ್ನೂ ಓದುತ್ತ ಕಾಲಕ್ಷೇಪ ಮಾಡಬಲ್ಲೆ' ಎಂದೀರಿ ನೀವು. ಶ್ರಮದ ಪ್ರತಿಷ್ಠೆಯನ್ನು ನಾವು ಅರಿತುಕೊಳ್ಳಬೇಕು. ಒಬ್ಬ ಚಮ್ಮಾರ ಅಥವ ಕ್ಷೌರಿಕ ಕಾಲೇಜಿನಲ್ಲಿ ಓದಿದರೆ ತನ್ನ ಚರ್ಮದ ಕೆಲಸ, ಕ್ಷೌರದ ಕೆಲಸ ಬಿಡಬೇಕಾಗಿಲ್ಲ. ವೈದ್ಯವೃತ್ತಿಯಷ್ಟೇ ಘನವಾದುದು ಕ್ಷೌರಿಕ ವೃತ್ತಿ ಎಂದು ನನ್ನ ಅಭಿಪ್ರಾಯ.[೧೨೮]

ನಮ್ಮ ಮಕ್ಕಳಿಗೆ ಶರೀರ ಶ್ರಮದಲ್ಲಿ ತಿರಸ್ಕಾರ ಹುಟ್ಟುವಂತೆ ಕಲಿಸಬಾರದು. ರೈತನ ಮಗ ಶಾಲೆಗೆ ಹೋದ ಮಾತ್ರಕ್ಕೇ ನಿರುಪಯೋಗಿಯಾಗಿ ಬೇಸಾಯದ ಕೆಲಸಗಾರನಾಗದಂತೆ ಆಗಬೇಕೆ? ಏನೂ ಕಾರಣವಿಲ್ಲ. ನಮ್ಮ ವಿದ್ಯಾರ್ಥಿಗಳು ಶರೀರ ಶ್ರಮವನ್ನು ಅಸಹ್ಯಸಿಕೊಳ್ಳದಿದ್ದರೂ ಅಪ್ರಿಯವಾಗಿ ಕಾಣುವುದು ದುಃಖದ ಸಂಗತಿ.[೧೨೯]

ನಿಜವಾದ ಶಿಕ್ಷಣ ನಮ್ಮೊಳಗಿರುವ ಉತ್ತಮೋತ್ತಮ ಶಕ್ತಿಯನ್ನು ಹೊರಗೆಳೆಯಬೇಕು. ಮಾನವ ಜೀವನಕ್ಕಿಂತ ಉತ್ತಮ ಗ್ರಂಥವುಂಟೆ? ದಿನದಿನವೂ ಹರಿಜನಕೇರಿಗೆ ಹೋಗಿ ಹರಿಜನರನ್ನು ಸ್ವಂತ ಕುಟುಂಬದವರಂತೆ ಕಾಣುವುದಕ್ಕಿಂತ ಹೆಚ್ಚಿನ ಶಿಕ್ಷಣ ಏನಿದೆ? ನಿಜವಾಗಿ, ಅದೇ ಉನ್ನತಿಕಾರಕ ಉತ್ತಮ ಜೀವನಪ್ರೇರಕ ವ್ಯಾಸಂಗ. ನನ್ನದು ಸಂಕುಚಿತ ಪಂಥವಲ್ಲ; ಮಾನವ ಕೋಟಿಯ ಭ್ರಾತೃತ್ವದ ಸಾಧನೆಯ ಪಂಥ.[೧೩೦]

# ಬ್ರಹ್ಮಚರ್ಯ

ಹಿಂದೂಧರ್ಮದ ಪ್ರಕಾರ ವಿದ್ಯಾರ್ಥಿ ಎಂದರೆ ಬ್ರಹ್ಮಚಾರಿ, ವಿದ್ಯಾರ್ಥಿ ದೆಶೆ ಬ್ರಹ್ಮಚರ್ಯಾಶ್ರಮ. ಮದುವೆಯಾಗದಿರುವುದು ಮಾತ್ರವೇ ಅಲ್ಲ ಬ್ರಹ್ಮಚರ್ಯೆ ಆ ಅರ್ಥ ತೀರಾ ಸಂಕುಚಿತ, ವಿದ್ಯಾರ್ಥಿದೆಶೆ ಎಂಬುದೇ ಮೂಲ ಅರ್ಥ. ಎಂದರೆ, ಇಂದ್ರಿಯನಿಗ್ರಹ. ಈ ಇಂದ್ರಿಯನಿಗ್ರಹದ ಮೂಲಕ ವಿದ್ಯಾಭ್ಯಾಸಮಾಡುವ ಅಥವಾ ಜ್ಞಾನವನ್ನು ಗಳಿಸುವ ಇಡೀ ಕಾಲವನ್ನೇ ಬ್ರಹ್ಮಚರ್ಯಾಶ್ರಮ ಎಂದರು, ಜೀವನದಲ್ಲಿ ಈ ಕಾಲದಲ್ಲಿ ಪಡೆಯುವುದೇ ಹೆಚ್ಚು, ಕೊಡುವುದೇ ಕಡಮೆ. ತಂದೆ ತಾಯಿಗಳಿಂದ, ಗುರುಗಳಿಂದ, ಜಗತ್ತಿನಿಂದ ದೊರೆತುವನ್ನೆಲ್ಲ ತೆಗೆದುಕೊಳ್ಳುವ ಕಾಲ ಇದು. ಆದರೆ ಆಗ ತೆಗೆದುಕೊಂಡುದನ್ನು ಆಗಲೇ ತಿರುಗಿ ಕೊಡಬೇಕಾದುದೇನೂ ಇರಲಿಲ್ಲ. ಆ ಇಡೀ ಸಾಲವನ್ನೆ ಕಾಲ ಬಂದಾಗ ಚಕ್ರಬಡ್ಡಿ ಸಮೇತ ತೀರಿಸುವ ಕರ್ತವ್ಯ ವೇನೋ ಇತ್ತು. ಆದುದರಿಂದಲೇ ಹಿಂದೂಗಳು ಬ್ರಹ್ಮಚರ್ಯಾಶ್ರಮವನ್ನು ಧಾರ್ಮಿಕ ಕರ್ತವ್ಯವಾಗಿ ನಡಸುತ್ತಾರೆ.

ಬ್ರಹ್ಮಚಾರಿ, ಸನ್ಯಾಸಿ—ಇಬ್ಬರ ಜೀವನವೂ ಆಧ್ಯಾತ್ಮಿಕವಾಗಿ ಸಮಾನ ಎನ್ನುತ್ತಾರೆ. ಬ್ರಹ್ಮಚಾರಿ ನಿಜವಾಗಿಯೂ ಬ್ರಹ್ಮಚಾರಿಯಾಗಲು ಸಂನ್ಯಾಸಿ ಯಾಗಲೇಬೇಕು. ಸಂನ್ಯಾಸ ಅವರವರ ಇಷ್ಟ. ಹಿಂದೂಧರ್ಮದ ನಾಲ್ಕು ಆಶ್ರಮಗಳ ಪವಿತ್ರತೆ ಈಗ ಅಳಿದು ಹೋಗಿದೆ. ಬರೀ ಹೆಸರಿಗೆ ಮಾತ್ರ ಇದೆ. ಬ್ರಹ್ಮಚಾರಿ–ವಿದ್ಯಾರ್ಥಿಯ ಜೀವನದ ಪ್ರಾರಂಭದಲ್ಲಿಯೆ ವಿಷ ಬೆರೆಯುತ್ತದೆ. ಈ ಮೇಲ್ಪಂಕ್ತಿಯನ್ನು ನೋಡಿ, ಅವರಂತೆ ಮಾಡಿ ಎಂದು ಈ ಕಾಲದವರಿಗೆ ಹೇಳಿ ತೋರಿಸಲು ಏನೂ ಉಳಿದಿಲ್ಲ ಆಶ್ರಮಗಳ ಬಾಳು. ಆದರೂ ಹಿಂದಿನ ಆ ಆಶ್ರಮಗಳ ಆದರ್ಶವನ್ನೆ ಈಗಲೂ ಅನುಸರಿಸಬಹುದು.೧೩೧

ವಿದ್ಯಾರ್ಥಿ ಎನ್ನಲಿಕ್ಕೆ ಹಿಂದೆ ಇದ್ದ ಶಬ್ದ ಬ್ರಹ್ಮಚಾರಿ. ಅವನ ಅಧ್ಯ ಯನ—ಅಭ್ಯಾಸ ಎಲ್ಲಕ್ಕೂ ಬ್ರಹ್ಮಶೋಧನೆಯೆ ಗುರಿಯಾಗಿತ್ತು. ಎಲ್ಲ ಧರ್ಮಗಳಲ್ಲೂ ವಿದ್ಯಾರ್ಥಿಗೆ ವಿಧಿಸುವ ರಾಗರಹಿತ ಸರಳತೆ, ಇಂದ್ರಿಯನಿಗ್ರಹ ಗಳ ದೃಢ ತಳಹದಿಯಮೇಲೆ ತನ್ನ ಬದುಕನ್ನು ಕಟ್ಟುತ್ತಿದ್ದ. ಯೌವನದಲ್ಲಿ ವಿಕಾರವಶನಾದವನು ಮುಪ್ಪಿನಲ್ಲಿ ಅದನ್ನು ಗೆಲ್ಲಲಾರ, ಹೀಗೆಂದರೆ, ಆಟ ಆಡಲೇಬೇಡಿ, ಸುಮ್ಮನೆ ಪುಸ್ತಕಹಿಡಿದು ಕೂತಿರಿ ಎಂದಲ್ಲ. ನಿಮ್ಮ ಆಟ,

ಕೆಲಸ ಎಲ್ಲವೂ ಸಂಯಮದ ಜೀವನಕ್ಕಾಗಿ ಇರಲಿ, ನಿಮ್ಮನ್ನು ದೇವರ ಸಮೀಪಕ್ಕೆ ಒಯ್ಯಿರಿ.೧೪೩

ನಿಗ್ರಹ ಸಂಯಮ ಇಲ್ಲದ ಗಂಡಸಿಗಾಗಲಿ ಹೆಂಗಸಿಗಾಗಲಿ ಅಧೋಗತಿಯೇ. ಇಂದ್ರಿಯಗಳ ನಿಗ್ರಹವಿಲ್ಲದಿದ್ದರೆ ಚುಕ್ಕಾಣಿಯಿಲ್ಲದ ದೋಣಿಯನ್ನು ತೇಲಿಬಿಟ್ಟಂತೆ. ಮೊದಲು ಯಾವ ಬಂಡೆ ಸಿಕ್ಕರೆ ಅದಕ್ಕೇ ಚೂರು ಚೂರು. ಆದ್ದರಿಂದಲೇ ನನ್ನ ನಿರಂತರ ಒತ್ತಾಯ-ನಿಗ್ರಹ, ನಿಗ್ರಹ ಎಂತ.೧೪೪

ಇವತ್ತು ಪಶ್ಚಿಮದಿಂದ ಅಪವಿತ್ರತೆಯ ಗಾಳಿ ಬಲವಾಗಿ ಬೀಸುತ್ತಿದೆ. ಆ ಗಾಳಿಗೆ ಹೊಡೆದುಕೊಂಡು ಹೋಗಬೇಡಿ. ಈ ಪದ್ಧತಿಗಳಿಗೆ ಯೂರೋಪಿನಲ್ಲಿ ಸರ್ವಸಾಮಾನ್ಯ ಮಾನ್ಯತೆ ಇದೆ ಎಂದಲ್ಲ. ಈ ವಿಷಪೂರಿತ ದುಃಸ್ವಭಾವವನ್ನು ನಾಶಗೊಳಿಸಲು ಕಷ್ಟಪಟ್ಟು ಹೋರಾಡುತ್ತಿರುವ ಗೆಳೆಯರೂ ಕೆಲವರು ಇದಾರೆ ಯೂರೋಪಿನಲ್ಲಿ. ಆದರೆ ಬೇಗ ಎಚ್ಚರಗೊಳ್ಳದಿದ್ದರೆ ಬೇಗ ಬೇಗ ಏರಿಬರುತ್ತಿರುವ ಈ ಅನೀತಿಯ ಉಬ್ಬರ ನಿಮ್ಮನ್ನು ಮುಚ್ಚಿ ಮುಳುಗಿಸೀತು. ಆದ್ದರಿಂದ ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಕೂಗುತ್ತಿದೇನೆ : ಎಚ್ಚರ, ಎಚ್ಚರೆಚ್ಚರ! ಬೆಂಕಿ ನಿಮ್ಮನ್ನು ಸುತ್ತಿಕೊಂಡು ಸುಡುವ ಮೊದಲೇ ಓಡಿಹೋಗಿ!೧೪೫

## ಲೈಂಗಿಕ ಶಿಕ್ಷಣ

ಈಗ ಎಲ್ಲಾ ಕಡೆಯಲ್ಲೂ ಲೈಂಗಿಕ ಶಿಕ್ಷಣ ಹೆಚ್ಚುತ್ತಿದೆ. ಅಷ್ಟೇ ಅಲ್ಲ, ಅದರ ಬಲೆಗೆ ಬಿದ್ದವರು ಅದರಲ್ಲೇನೋ ಹೆಚ್ಚುಘನತೆ ಇದ್ದಂತೆ·ಭಾವಿಸುತ್ತಾರೆ. ಕೈಯ ಸಂಕೋಲೆಯನ್ನು ದೊಡ್ಡ ಆಭರಣವೆಂದು ತಿಳಿದು ಪ್ರೀತಿಸಿ, ಅದೊಂದು ಹೆಮ್ಮೆಯೆಂದು ತಿಳಿದರೆ ಆಗ ಆ ಗುಲಾಮನ ಧಣಿ ಪೂರಾ ಗೆದ್ದಂತೆ, ಆದರೆ ಎಷ್ಟೇ ರಮಣೀಯವಾಗಿ ಕಾಣಬಂದರೂ ಕಾಮದ ಗೆಲವು ಅಲ್ಪಾಯುಸ್ಸಿನದು, ಅಧಮವಾದುದು, ನನಗೆ ಇದು ಮಂದಟ್ಟಾಗಿದೆ. ವಿಷವೆಲ್ಲಾ ಮುಗಿದು ಹೋದ ಚೇಳಿನಂತೆ ಕಟ್ಟಕಡೆಗೆ ಕಾಮವೂ ನಿರ್ವೀರ್ಯವಾಗುತ್ತದೆ. ಹಾಗೆಂದ ಮಾತ್ರಕ್ಕೆ ಅಷ್ಟು ಹೊತ್ತು ನಾವು ಕೈ ಕಟ್ಟಿಕೊಂಡು ಸುಮ್ಮನೆ ಕೂಡಬೇಕಾಗಿಲ್ಲ. ಅದರ ಸೋಲು ಖಂಡಿತ ಎಂದು ನಾವು ಸುಳ್ಳು ನಿಶ್ಚಿಂತೆಗೆ ಗುರಿಯಾಗಬಾರದು. ಕಾಮ–ಜಯವೇ ಗಂಡಸಿಗಾಗಲಿ ಹೆಂಗಸಿಗಾಗಲಿ ಜೀವನದ ಪರಮೋಚ್ಚ ಧ್ಯೇಯ, ಕಾಮವನ್ನು ಗೆಲ್ಲದೆ ಮನುಷ್ಯ ಆತ್ಮವನ್ನು ಗೆಲ್ಲಲಾರ.

ಆತ್ಮಜಯವಿಲ್ಲದೆ ಸ್ವರಾಜ್ಯವೂ ಇಲ್ಲ, ರಾಮರಾಜ್ಯವೂ ಇಲ್ಲ, ಆತ್ಮರಾಜ್ಯ ವಿಲ್ಲದೆ ಸರ್ವರರಾಜ್ಯ ಬಣ್ಣದ ಮಾವಿನಹಣ್ಣಿನಂತೆ ಬರೀ ಮೋಸ, ಕೇವಲ ವ್ಯರ್ಥ. ಮೇಲೆ ನೋಡಿದರೆ ಬಹಳ ಚೆಂದ, ಒಳಗೆ ಬರೀ ಟೊಳ್ಳು–ಸುಳ್ಳು. ಕಾಮವನ್ನು ಗೆಲ್ಲದ ಕೆಲಸಗಾರ ಯಾರೂ ಹರಿಜನ ಸೇವೆ, ಮತೀಯ ಏಕತೆ, ಖಾದಿಸೇವೆ, ಗೋಸೇವೆ, ಗ್ರಾಮಸೇವೆ ಮುಂತಾದ ಸೇವೆ ಮಾಡಲಾರ, ಇಂಥ ಮಹಾಕಾರ್ಯಗಳು ಬರೀ ಬುದ್ಧಿಯಿಂದ ನಡೆಯಲಾರವು; ಆತ್ಮಶಕ್ತಿ ಅಥವಾ ಅಧ್ಯಾತ್ಮ ಪ್ರಯತ್ನ ಬೇಕು, ಆತ್ಮ ಶಕ್ತಿಗೆ ಭಗವಂತನ ಅನುಗ್ರಹ ಬೇಕು, ಕಾಮದ ಗುಲಾಮನಿಗೆ ಎಂದಿಗೂ ಲಭಿಸದು ಭಗವಂತನ ಅನುಗ್ರಹ.

ಹಾಗಿದ್ದರೆ ನಮ್ಮ ಶಿಕ್ಷಣದಲ್ಲಿ ಲೈಂಗಿಕ ಶಾಸ್ತ್ರದ ಬೋಧನೆಗೆ ಏನು ಸ್ಥಾನ, ಸ್ಥಾನವಿದೆಯೋ ಇಲ್ಲವೋ? ಲೈಂಗಿಕ ಶಾಸ್ತ್ರ ಎರಡು ಬಗೆ. ಒಂದು ಕಾಮದ ವಿಕಾರವನ್ನು ನಿಗ್ರಹಿಸಲು, ಗೆಲ್ಲಲು ಉಪಯುಕ್ತವಾದುದು; ಇನ್ನೊಂದು ಆ ವಿಕಾರಕ್ಕೆ ತಿನಿಸು ಕೊಟ್ಟು ಹೆಚ್ಚು ಮಾಡಲು ಉಪಯುಕ್ತ ವಾದುದು. ಮಕ್ಕಳ ಶಿಕ್ಷಣದಲ್ಲಿ ಮೊದಲಿನ ಬಗೆಯ ಬೋಧನೆ ಎಷ್ಟು ಅಗತ್ಯವೋ ಎರಡನೆಯ ಬೋಧನೆ ಅಷ್ಟು ವಿನಾಶಕರ, ಆದ್ದರಿಂದ ವರ್ಜ್ಯ. ಎಲ್ಲ ಶ್ರೇಷ್ಠ ಧರ್ಮಗಳೂ ಕಾಮವನ್ನು ಪರಮ ಶತ್ರು, ಅದರ ತರುವಾಯವೇ ಸಿಟ್ಟು ದ್ವೇಷ ಎಂದು ಹೇಳಿವೆ, ನ್ಯಾಯ. ಗೀತೆಯ ಪ್ರಕಾರ ಸಿಟ್ಟು ಕಾಮದ ಮರಿ. ಗೀತೆ ಎಲ್ಲಾ ಬಗೆಯ ಆಸೆಯನ್ನೂ ಕಾಮ ಎನುತ್ತದೆ, ವಿಶಾಲಾರ್ಥದಲ್ಲಿ, ಸಂಕುಚಿತ ಅರ್ಥದಲ್ಲೂ ಕಾಮದ ಮರಿಯೆ ಸಿಟ್ಟು.

ಇಷ್ಟಾದರೂ ನಮ್ಮ ಪ್ರಶ್ನೆಗೆ ಉತ್ತರ ಬರಲಿಲ್ಲ. ಚಿಕ್ಕ ವಯಸ್ಸಿನ ವಿದ್ಯಾರ್ಥಿಗಳಿಗೆ ಜನನೇಂದ್ರಿಯಗಳ ಕಾರ್ಯ-ಉಪಯೋಗಗಳ ಜ್ಞಾನವನ್ನು ಕಲಿಸಬೇಕೆ, ಬೇಡವೆ? ಈ ಜ್ಞಾನವನ್ನು ಕೆಲವು ಮಟ್ಟಿಗೆ ತಿಳಿಸುವುದು ಅಗತ್ಯ ಎನಿಸುತ್ತದೆ ನನಗೆ. ಈಗ ಆ ಜ್ಞಾನವನ್ನು ಅವರು ಹೇಗಾದರೂ ಪಡೆಯಲೆಂದು ಬಿಟ್ಟಹಾಗಿದೆ. ಅದರಿಂದ ಅವರು ದುಷ್ಟ ಚಾಳಿಗಳನ್ನು ಕಲಿಯು ತ್ತಾರೆ. ಕಾಮದ ವಿಕಾರವನ್ನು ಅದರ ಕಡೆ ಕಣ್ಣು ಮುಚ್ಚಿಕೊಂಡರೆ ನಿಗ್ರಹಿ ಸಲು ಗೆಲ್ಲಲು ಸಾಧ್ಯವಿಲ್ಲ. ಆದ್ದರಿಂದ ಜನನೇಂದ್ರಿಯಗಳ ಮಹತ್ವವನ್ನೂ ಸರಿ ಯಾದ ಉಪಯೋಗವನ್ನೂ ಹುಡುಗರಿಗೂ ಹುಡುಗಿಯರಿಗೂ ತಿಳಿಸಬೇಕೆಂದು ನನ್ನ ದೃಢಾಭಿಪ್ರಾಯ. ನನ್ನ ರೀತಿಯಲ್ಲಿ ನಾನು, ಯಾರ ಶಿಕ್ಷಣಕ್ಕೆ ಜವಾಬ ದಾರನಾಗಿದ್ದೇನೋ ಅವರಿಗೆ ಈ ಜ್ಞಾನವನ್ನು ಹೇಳಿಕೊಟ್ಟಿದೇನೆ.

ಆದರೆ ನಾನು ಹೇಳುವ ಲೈಂಗಿಕ ಶಿಕ್ಷಣದ ಗುರಿ ಕಾಮದ ಜಯ, ಶುದ್ಧೀಕರಣ. ಅಂಥ ಶಿಕ್ಷಣದಲ್ಲಿ ಸ್ವಾಭಾವಿಕವಾಗಿಯೆ ಮನುಷ್ಯರಿಗೂ ಪಶುವಿಗೂ ಇರುವ ಮುಖ್ಯ ಭೇದ ಮಕ್ಕಳಿಗೆ ಮನದಟ್ಟಾಗಬೇಕು. ಮನುಷ್ಯನಿಗೆ ಬುದ್ಧಿ, ಹೃದಯ ಎರಡೂ ಇವೆ; ಇದು ಅವನ ವೈಶಿಷ್ಟ್ಯ, ಹೆಮ್ಮೆ. ಭಾವಜೀವಿಯೂ ಹೌದು, ಬುದ್ಧಿಜೀವಿಯೂ ಹೌದು, ಮನುಷ್ಯ ಎಂಬ ಹೆಸರೇ ತೋರಿಸುವ ಹಾಗೆ; ತನ್ನ ಕುರುಡು ಸ್ವಭಾವದ ಮೇಲೆ ಬುದ್ಧಿಯ ಯಾಜಮಾನ್ಯವನ್ನು ಕೈಬಿಟ್ಟರೆ ಮನುಷ್ಯತ್ವವನ್ನು ಬಿಟ್ಟ ಹಾಗೆ. ಇವನ್ನೆಲ್ಲ ಅವರಿಗೆ ನಾಟುವ ಹಾಗೆ ಮಾಡಬೇಕು. ಮನುಷ್ಯನಲ್ಲಿ ಬುದ್ಧಿ–ವಿಚಾರ ಭಾವಕ್ಕೆ ದಾರಿ ತೋರುತ್ತದೆ, ಪುಟ ಕೊಡುತ್ತದೆ. ಪಶುವಿನಲ್ಲಿ ಆತ್ಮ ಸುಪ್ತ. ಹೃದಯವನ್ನು ಎಚ್ಚರಿಸುವುದೆಂದರೆ ಆತ್ಮವನ್ನು ಎಚ್ಚರಿಸಿದ ಹಾಗೆ, ವಿಚಾರವನ್ನು ಎಚ್ಚರಿಸಿ ಶುಭಾಶುಭಗಳ ವಿವೇಚನೆಯನ್ನು ನೆಲೆಗೊಳಿಸಿದಹಾಗೆ.

ಈ ಲೈಂಗಿಕ ಶಿಕ್ಷಣವನ್ನು ಯಾರು ಕಲಿಸಬೇಕು? ತನ್ನ ವಿಕಾರಗಳನ್ನು ಗೆದ್ದವರು; ಸ್ಪಷ್ಟವೇ. ಖಗೋಳಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಕಲಿಸಲು ಅದರಲ್ಲಿ ಶಿಕ್ಷಣ ಪಡೆದವರು, ಆ ವಿದ್ಯೆಯ ಪ್ರವೀಣರು ಇವಾರೆ. ಹಾಗೆಯೆ ಲೈಂಗಿಕ ಶಾಸ್ತ್ರವನ್ನು ಅಥವಾ ಕಾಮನಿರೋಧದ ಶಾಸ್ತ್ರವನ್ನು ಕಲಿಸುವವರೂ ಆತ್ಮಸಂಯಮಿಗಳಾಗಬೇಕು. ಪ್ರಾಮಾಣಿಕತೆ, ಅನುಭವ ಇಲ್ಲದ ಮಾತು ಎಷ್ಟೇ ದೊಡ್ಡದಾದರೂ ಅದು ಜಡ, ನಿರ್ಜೀವ. ಅದು ಜನರ ಹೃದಯವನ್ನು ಹೊಗಲಾರದು, ಹೊಡೆದೆಬ್ಬಿಸಲಾರದು. ಅದೇ ಆತ್ಮಸಾಕ್ಷಾತ್ಕಾರ, ಪ್ರಾಮಾಣಿಕ ಅನುಭವಗಳಿಂದ ಹೊಮ್ಮಿದ ಮಾತು ಯಾವಾಗಲೂ ಫಲಕಾರಿ.

ಇವತ್ತು ನಮ್ಮ ವಾತಾವರಣವೆಲ್ಲ—ನಮ್ಮ ಓದು, ನಮ್ಮ ಯೋಚನೆ, ನಮ್ಮ ವರ್ತನೆ—ಕಾಮಲಾಲಸೆಯನ್ನು ತೃಪ್ತಿಪಡಿಸುವ ಸಲುವಾಗಿ ರೂಪುಗೊಂಡಿವೆ. ಆ ಕೋಟೆಯನ್ನು ಭೇದಿಸಿಕೊಂಡು ಹೋಗುವುದು ಸುಲಭ ಸಾಧ್ಯವಲ್ಲ. ಆದರೆ ಸರ್ವಶ್ರೇಷ್ಠ ಪ್ರಯತ್ನಗಳಿಗೂ ಯೋಗ್ಯವಾದ ಕೆಲಸ ಅದು, ಮನುಷ್ಯನ ಪರಮ ಕರ್ತವ್ಯ ಆತ್ಮಸಂಯಮ ಎಂಬ ಧ್ಯೇಯವನ್ನೊಪ್ಪಿ, ಪ್ರತ್ಯಕ್ಷ ಅನುಭವ ಪಡೆದ ಶಿಕ್ಷಕರು ಒಂದು ಹಿಡಿಯಷ್ಟೇ ಇದ್ದರೂ, ಅವರಿಗೆ ತಮ್ಮ ಜೀವನಧರ್ಮದಲ್ಲಿ ನಿಜವಾದ ಅದಮ್ಯ ಶ್ರದ್ಧೆಯಿದ್ದರೆ, ಅವರು ನಿದ್ದೆಗಾಣದೆ ಸದಾ ಜಾಗರೂಕರೂ ಕ್ರಿಯಾಶೀಲರೂ ಆಗಿದ್ದರೆ, ಅವರ ಶ್ರಮ ಗುಜರಾತಿನ ಮಕ್ಕಳಿಗೆ ದಾರಿ

ತೋರುವ ದೀಪವಾಗಿ ಬೆಳಗಿ, ಅಜಾಗರೂಕರನ್ನು ಕಾಮಕೂಪದಲ್ಲಿ ಬೀಳದಂತೆ ಕಾಪಾಡಿ, ಆಗಲೇ ಬಿದ್ದು ಮುಳುಗಿರುವವರನ್ನು ಬದುಕಿಸಿಯಾರು. ೧೩೫

## ಹುಡುಗರ ಕಾಟ

ಬೀದಿಯಲ್ಲಿ ಹೋಗುವಾಗ, ಸಿನಿಮಾದಲ್ಲಿ ಕೂತಾಗ, ಶಾಲೆಗಳಲ್ಲಿ ಅಂಗಡಿಗಳಲ್ಲಿ, ಎಲ್ಲಿ ಅಸಹಾಯರಾಗಿ ಸಿಕ್ಕರೆ ಅಲ್ಲಿ ಹುಡುಗಿಯರನ್ನು, ಹೆಂಗಸರನ್ನು ಕಂಡು ಹುಡುಗರು ತರುಣರು ಕಾಡುತ್ತಾರೆ. ಸಿನಿಮಾದಲ್ಲಿ ಹಿಂದೆ ಕೂತು ಹೇಸಿ ಮಾತನ್ನು ಆಡುತ್ತಾರೆ. ಬೀದಿಯಲ್ಲಿ ಅಟ್ಟಿಸಿಕೊಂಡು ಬರುವ ಹಾಗೆ ಮಾಡುತ್ತಾರೆ. ಹುಡುಗಿಯರ ಮಾನಭಂಗ ಮಾಡುವುದೇ ಒಂದು ಆಟ ಹುಡುಗರಿಗೆ. ಇದನ್ನು ಹೇಗೆ ತಪ್ಪಿಸಬೇಕು ? ಎಂದು ಕಾಲೇಜು ಹುಡುಗಿಯರು, ಅನುಭವಿಗಳಾದ ಹಿರಿಯ ಹೆಂಗಸರು ಬರೆದು ತಮ್ಮ ದುಃಖ ತೋಡಿದ್ದಾರೆ.

ಹಾಗೆ ಕಾಡಲು ಬಂದ ಒಬ್ಬ ಹುಡುಗನ ಮೋರೆಗೆ ತನ್ನ ಕೈಯಲ್ಲಿದ್ದ ಪುಸ್ತಕ ಒಂದನ್ನು ಎಸೆದು ಅವನನ್ನು ಪಲಾಯನ ಮಾಡಿಸಿದ ಸಂಗತಿಯನ್ನು ಒಬ್ಬ ಹುಡುಗಿ ಬರೆದು, ಬೆಳೆಯುತ್ತಿರುವ ಈ ಪೀಡೆಗೆ ಏನು ಮದ್ದು ಎಂದು ಕೇಳಿದಾಳೆ.

ಆ ಹುಡುಗಿ ಅವನ ಮುಖಕ್ಕೆ ಪುಸ್ತಕ ಎಸೆದುದು ಸರಿ. ಇದು ಹಿಂದಿನ ಕಾಲದಿಂದಲೂ ಬಂದ ಮದ್ದು. ರೇಗಿದಾಗ, ಮನುಷ್ಯ ಎಷ್ಟೇ ದುರ್ಬಲನಾಗಿರಲಿ, ಎದುರಾಳಿ ಎಷ್ಟೇ ಬಲಿಷ್ಠನಾಗಿರಲಿ, ಹಿಂಸೆಯನ್ನು ಅವಲಂಬಿಸಲು ಬಲಹೀನತೆ ಅಡ್ಡಿ ಬರುವುದಿಲ್ಲ. ಈಗೇನು? ಸ್ವಲ್ಪ ಬುದ್ಧಿಯಿದ್ದರೆ ಚಿಕ್ಕ ಹುಡುಗಿಯೂ ಕೂಡ ತಲೆಹಾರಿಸಿಬಿಡಬಹುದು.

ಹೊಲಸುಮಾತಿಗೆ ಸಿಡಿಮಿಡಿಯಾಗಬೇಕಾದ್ದಿಲ್ಲ. ಸುಮ್ಮನೆ ಅದನ್ನು ಸಹಿಸಲೂ ಬೇಕಾಗಿಲ್ಲ. ಅಂಥ ಸಂಗತಿಗಳನ್ನೆಲ್ಲ ಪತ್ರಿಕೆಗಳಲ್ಲಿ ಪ್ರಕಟಿಸಬೇಕು. ಹೀಗೆ ಮಾಡಿದ ಹುಡುಗರ ಹೆಸರು ಗೊತ್ತಿದ್ದರೆ ಅದನ್ನು ಪ್ರಕಟಿಸಬೇಕು. ಈ ದುಷ್ಟತನವನ್ನು ಪ್ರಕಟಿಸಲು ನಾಚಬಾರದು. ಅದು ತಪ್ಪು. ಬಹಿರಂಗವಾದ ಕೆಟ್ಟ ನಡತೆಗೆ ಸಾರ್ವಜನಿಕಾಭಿಪ್ರಾಯಕ್ಕಿಂತ ದೊಡ್ಡ ಛೀಮಾರಿಯಿಲ್ಲ. ಇಂಥ ವಿಷಯಗಳಲ್ಲಿ ಸಾರ್ವಜನಿಕರಿಗೆ ಬಹಳ ಅಸಡ್ಡೆ ನಿಜ. ಆದರೆ ಸಾರ್ವಜನಿಕರದು ಮಾತ್ರವೇ ತಪ್ಪಲ್ಲ. ಇಂಥ ದುಷ್ಟವರ್ತನೆಯ ಉದಾಹರಣೆಗಳು ಅವರ ಗಮನಕ್ಕೆ ಬರಬೇಕು. ಕಳವಿನ ಸುದ್ದಿಯನ್ನು ಪ್ರಕಟಿಸಿ,

ಅದರ ಬೆನ್ನುಹತ್ತಿದ್ದರೆ ಕಳ್ಳತನ ನಿಲ್ಲದು. ಅದೇ ರೀತಿ ದುಷ್ಟ ವರ್ತನೆಯನ್ನು ಮುಚ್ಚಿಟ್ಟರೆ ಅದನ್ನು ನಿಲ್ಲಿಸಲು ಸಾಧ್ಯವಿಲ್ಲ. ಪಾಪಕಾರ್ಯಕ್ಕೆ ಸಾಧಾರಣವಾಗಿ ಮರೆ, ಕತ್ತಲೆ ಬೇಕು. ಬೆಳಕು ಬಿದ್ದ ಕೂಡಲೆ ಅವು ಮರೆಯಾಗುತ್ತವೆ.

ಆದರೆ ಈಗಿನ ಕಾಲದ ಹುಡುಗಿಗೆ ನಾಲ್ವರ ನಲ್ಲೆಯಾಗಲು, ಚೆಲ್ಲಾಟ ಮಾಡಲು ಬಹಳ ಇಷ್ಟ. ಈಗಿನ ಹುಡುಗಿ ಬಟ್ಟೆ ಉಡುವುದು ಗಾಳಿ ಮಳೆ ಬಿಸಿಲಿಗೆ ಅಡ್ಡವಾಗಿ ಅಲ್ಲ, ಅಪರಿಪರ ದೃಷ್ಟಿ ಸೆಳೆಯಲಿಕ್ಕೆ. ಪ್ರಕೃತಿ ಕೊಟ್ಟದ್ದು ಸಾಲದೆಂದು ಬಣ್ಣ ಬಳಿದುಕೊಂಡು ವಿಲಕ್ಷಣವಾಗಿ ಕಾಣುತ್ತಾಳೆ. ಇಂಥ ಹುಡುಗಿಯರಿಗಲ್ಲ ಅಹಿಂಸೆಯ ದಾರಿ. ಅಹಿಂಸೆಯ ಸ್ವಸಂರಕ್ಷಣೆ ಬೆಳೆಸಲು ನಿಶ್ಚಿತ ನಿಯಮಗಳಿವೆ. ಬಹಳ ಶ್ರಮದ ಪ್ರಯತ್ನ ಅದು. ವಿಚಾರ ಆಚಾರ ಗಳಲ್ಲಿ ಒಂದು ಕ್ರಾಂತಿಯೆ ಆಗಬೇಕು. ಹುಡುಗಿಯರು ತಮ್ಮ ಜೀವನವನ್ನು ನಿಯಮಿತ ರೀತಿಯಲ್ಲಿ ಪರಿವರ್ತನೆ ಮಾಡಿಕೊಂಡರೆ, ಅವರ ಬಳಿಗೆ ಬಂದ ತರುಣರು ಅವರಿಗೆ ಗೌರವ ತೋರಿಸಿ ಬಹಳ ಉತ್ತಮನಾಗಿ ನಡೆದುಕೊಂಡಾರು. ಒಂದು ವೇಳೆ ಅವರ ಪವಿತ್ರತೆಗೇ ಭಂಗ ಬರುವಂತೆ ಇದ್ದರೆ, ಅಂಥ ವೇಳೆಯಲ್ಲಿ ಮನುಷ್ಯರ ಪಶುತ್ವಕ್ಕೆ ಬಲಿಯಾಗುವುದಕ್ಕಿಂತ ಸಾಯಲು ಸಿದ್ಧವಾಗುವ ಧೈರ್ಯ ಬೇಕು. ಕೈಕಾಲು ಕಟ್ಟಿ ಹಾಕಿದರೆ, ಬಾಯಿಗೆ ಬಟ್ಟೆ ತುರುಕಿದರೆ, ಬಿಡಿಸಿ ಕೊಳ್ಳಲಿಕ್ಕೂ ಆಗದೆ ಇದ್ದ ಹುಡುಗಿಗೆ ಸಾಯುವುದು ನಾನು ಹೇಳಿದಷ್ಟು ಸುಲಭವಲ್ಲ ಎಂದು ಹೇಳಿದಾರೆ. ಆದರೆ ಪ್ರತಿಭಟಿಸುವ ಸಂಕಲ್ಪವಿದ್ದರೆ ಆ ಹುಡುಗಿಯನ್ನು ಎಷ್ಟು ಕಟ್ಟಿಹಾಕಿದರೂ ಕಟ್ಟಲು ಸಾಧ್ಯವಿಲ್ಲ, ಎಲ್ಲ ಕಟ್ಟನ್ನೂ ಕಿತ್ತೊಗೆದಾಳು. ಅವಳ ದೃಢಸಂಕಲ್ಪವೇ ಅವಳಿಗೆ ಸಾಯುವ ಶಕ್ತಿಯನ್ನು ಕೊಡುತ್ತದೆ.

ಈ ಶೌರ್ಯ ಎಲ್ಲರಿಗೂ ಸಾಧ್ಯವಿಲ್ಲ; ಅದಕ್ಕೆ ಶಿಕ್ಷಣ ಬೇಕು. ಅಹಿಂಸೆ ಯಲ್ಲಿ ಸಜೀವ ಶ್ರದ್ಧೆ ಇಲ್ಲದವರು ಸಾಧಾರಣ ಆತ್ಮಸಂರಕ್ಷಣೆಯ ವಿದ್ಯೆ ಕಲಿತು ಗುಣಹೀನ ತರುಣರ ಅಶ್ಲೀಲ ವರ್ತನೆಯನ್ನು ಎದುರಿಸಬೇಕು.

ಆದರೆ ಮಹತ್ತ್ವದ ಪ್ರಶ್ನೆ—ಸಭ್ಯರಾದ ಹುಡುಗಿಯರಿಗೆ ಸದಾ ಕಾಲವೂ ತಮಗೆ ಎಲ್ಲಿ ಮಾನಭಂಗವಾದೀತೋ ಎಂದು ಅಂಜಿಕೊಂಡಿರುವಷ್ಟು ಕಾಟ ಕೊಡಲೇಕೆ ತರುಣರು? ಸಾಮಾನ್ಯವಾದ ಒಳ್ಳೇ ನಡತೆಯೂ ಇರಬೇಡವೆ? ನಮ್ಮ ತರುಣರಿಗೆ, ಬಹುಜನಕ್ಕೆ, ಸದ್ವರ್ತನೆ, ಹೆಂಗಸರಿಗೆ ತೋರಬೇಕಾದ ಗೌರವಬುದ್ಧಿ ಲವಲೇಶವೂ ಇಲ್ಲವೆಂಬುದು ತಿಳಿದರೆ ನನಗೆ ಬಹಳ ದುಃಖ

ವಾದೀತು. ತಮ್ಮ ವರ್ಗದ ಕೀರ್ತಿಯ ಕಡೆ ದೃಷ್ಟಿಯಿಟ್ಟು ತಮ್ಮೊಳಗೇ ಅಂಥ ಅಸಂಭಾವಿತರನ್ನು ದಂಡಿಸಬೇಡವೆ? ತಮ್ಮ ತಾಯಿ ತಂಗಿಯರ ಮರ್ಯಾದೆ ಎಷ್ಟು ಪ್ರಿಯವೋ ತಮಗೆ ಎಲ್ಲ ಹೆಂಗಸರ ಮರ್ಯಾದೆಯೂ ಅಷ್ಟೇ ಪ್ರಿಯವೆಂದು ತಿಳಿಯಲು ಕಲಿಯಬೇಕು. ಒಳ್ಳೆಯ ನಡತೆಯನ್ನು ಕಲಿಯದಿದ್ದರೆ ಅವರು ಓದಿದ ಓದೆಲ್ಲವೂ ವ್ಯರ್ಥ.

ಬರೀ ಪಾಠ ಹೇಳಿದರಾಯಿತೆ? ತಮ್ಮ ವಿದ್ಯಾರ್ಥಿಗಳು ಸಭ್ಯರಾಗುವಂತೆ ಮಾಡುವುದು, ಅಷ್ಟೇ ಮಟ್ಟಿಗೆ, ಶಿಕ್ಷಕರದೂ ಕರ್ತವ್ಯವಲ್ಲವೆ?೧೩೩

ಬರೀ ಅಕ್ಷರ ವಿದ್ಯೆಯಿಂದೇನು ಲಾಭ? ಅದಕ್ಕಿಂತ ಸಾಂಸ್ಕೃತಿಕ ಶಿಕ್ಷಣಕ್ಕೆ ನಾನು ಹೆಚ್ಚು ಮಹತ್ವ ಕೊಡುತ್ತೇನೆ. ಹುಡುಗಿಯರು ಮೊಟ್ಟಮೊದಲು ಕಲಿಯಬೇಕಾದುದು ಸಂಸ್ಕೃತಿ. ಅದೇ ತಳಹದಿ. ನಿಮ್ಮ ನಡತೆಯ ಚಿಕ್ಕಪುಟ್ಟ ಸಂಗತಿಯಲ್ಲೂ, ನಿಮ್ಮ ನಡವಳಿಯಲ್ಲೂ — ಕೂಡುವುದು, ನಡೆಯುವುದು ಮುಂತಾದುದರಲ್ಲಿ — ಇದು ಕಂಡು ಬರಬೇಕು. ನೋಡಿದ ಕೂಡಲೆ ನೀವು ಇಂಥ ಶಾಲೆಯ ಹುಡುಗಿಯರು ಎಂದು ತಿಳಿಯಬೇಕು. ನಿಮ್ಮ ಮಾತಿನಲ್ಲಿ, ನಿಮ್ಮ ಅತಿಥಿಗಳನ್ನು ಆಗಂತುಕರನ್ನು ನಡೆಸಿಕೊಳ್ಳುವ ರೀತಿಯಲ್ಲಿ, ನಿಮ್ಮ ಪರಸ್ಪರ ವರ್ತನೆಯಲ್ಲಿ, ಶಿಕ್ಷಕರೊಡನೆ ಹಿರಿಯರೊಡನೆ ವರ್ತಿಸುವುದರಲ್ಲಿ ನಿಮ್ಮ ಒಳಗಿನ ಸಂಸ್ಕೃತಿ ಪ್ರತಿಬಿಂಬಿಸಬೇಕು.೧೩೭

## ಶರೀರ ಶ್ರಮದ ಮಹಿಮೆ

ಕೆಲವು ದಿನಗಳ ಕೆಳಗೆ ಒಬ್ಬ ಗೆಳೆಯ ಗಾಂಧೀಜಿಯೊಡನೆ ಮಾತನಾಡುತ್ತಿದ್ದ. ಬಿಡುವಿನ ಪ್ರಶ್ನೆ ಬಹಳ ಕಠಿಣ ಎನ್ನುತ್ತ ಆಶ್ಚರ್ಯದಿಂದ ಹೇಳಿದ: 'ದಿನವೂ ಮನುಷ್ಯ ಎಂಟು ಗಂಟೆ ಶರೀರ ಶ್ರಮ ಮಾಡಬೇಕು ಎಂದು ನೀವೇಕೆ ಒತ್ತಾಯ ಮಾಡುತ್ತೀರಿ? ಸುವ್ಯವಸ್ಥಿತವಾದ ಸಮಾಜದಲ್ಲಿ ಕೆಲಸದ ಸಮಯವನ್ನು ಕಡಮೆಮಾಡಿ, ಎರಡೇ ಗಂಟೆ ಮಾಡಿ ಮನುಷ್ಯನ ಬುದ್ಧಿ—ಕಲೆಗಳ ವಿಕಾಸಕ್ಕಾಗಿ ಸಾಕಷ್ಟು ಬಿಡುವನ್ನು ಕೊಡಲು ಸಾಧ್ಯವಿಲ್ಲವೆ?'

'ಇಷ್ಟು ಬಿಡುವು ದೊರೆತರೆ ಮನುಷ್ಯ—ಅವನು ಕೂಲಿಗಾರನಾಗಲಿ ಬುದ್ಧಿಜೀವಿಯಾಗಲಿ—ಅದನ್ನು ಚೆನ್ನಾಗಿ ಉಪಯೋಗ ಮಾಡುವುದಿಲ್ಲ, ನಾನು ನೋಡಿದೇನೆ. ಅದಕ್ಕೆ ವಿರುದ್ಧವಾಗಿ ಕೆಲಸವಿಲ್ಲದ ಬುದ್ಧಿ ಬರೀ ಪಾಪಕೂಪವಾಗುವುದನ್ನೂ ನೋಡಿದೇನೆ.'

'ಇಲ್ಲ. ಮನುಷ್ಯ ಸೋಮಾರಿಯಾಗಿ ಕೂಡಲಾರ. ಎರಡು ಗಂಟೆ ಶರೀರ ಶ್ರಮ, ಆರು ಗಂಟೆ ಬೌದ್ಧಿಕ ಶ್ರಮ – ಹೀಗೆ ನಾವು ದಿನವನ್ನು ಎರಡು ಭಾಗ ಮಾಡಿದರೆ, ಇದರಿಂದ ರಾಷ್ಟ್ರಕ್ಕೆ ಲಾಭವಾಗದೆ ?'

'ಹಾಗಾದೀತೆಂದು ನಾನು ತಿಳಿದಿಲ್ಲ, ನಾನೇನು ಇದರ ಲೆಕ್ಕವನ್ನಾಡಿಲ್ಲ. ಆದರೆ ಒಬ್ಬ ಮನುಷ್ಯ ರಾಷ್ಟ್ರಕ್ಕಾಗಿ ಅಲ್ಲದೆ ಬರೀ ಸ್ವಾರ್ಥಕ್ಕಾಗಿ ಶರೀರಶ್ರಮ ಮಾಡಿದರೆ ಈ ಯೋಜನೆ ಗತಿ ಮುಟ್ಟಿದು. ಆ ಎರಡು ಗಂಟೆಯ ಕೆಲಸಕ್ಕಾಗಿ ಸರಕಾರ ಅವನಿಗೆ ಸಾಕಷ್ಟು ಹಣ ಕೊಟ್ಟು, ಬೇರೆ ಏನೂ ಕೊಡದೆಯೆ ಬೇರೆ ಕೆಲಸಮಾಡಲು ಬಲಾತ್ಕಾರ ಮಾಡುವುದಾದರೆ, ಅದು ಬೇರೆ ಮಾತು. ಅದು ಬಹಳ ಚಲೋ ಆದೀತು, ಆದರೆ ಒಂದು ರೀತಿಯಲ್ಲಿ ಸರಕಾರದ ಬಲಾತ್ಕಾರ ವಿಲ್ಲದೆ ಇದು ಸಾಧ್ಯವಲ್ಲ.'

'ನಿಮ್ಮ ಉದಾಹರಣೆಯನ್ನೆ ತೆಗೆದುಕೊಳ್ಳಿ. ನಿಮ್ಮಿಂದ ಎಂಟು ಗಂಟೆ ಶರೀರ ಶ್ರಮ ಸಾಧ್ಯವಿಲ್ಲ. ನೀವು ಎಂಟುಗಂಟೆಯೋ ಇನ್ನೂ ಹೆಚ್ಚೋ ಬೌದ್ಧಿಕ ಕೆಲಸ ಮಾಡಬೇಕಾಗುತ್ತದೆ. ನೀವು ನಿಮ್ಮ ಬಿಡುವನ್ನು ದುರುಪಯೋಗ ಮಾಡುವುದಿಲ್ಲವಲ್ಲ !'

'ಇದು ಮಾಡಬೇಬೇಕಾದ ಕೆಲಸ. ಇದರಲ್ಲಿ ಬಿಡುವೇ ಸಿಗುವುದಿಲ್ಲ. ಉದಾಹರಣೆಗಾಗಿ ನಾನು ಟೆನಿಸ್ ಆಡಲು ಹೋದರೆ ಅದು ಬಿಡುವಿನ ಸಮಯ ಎನ್ನಬಹುದು. ನನ್ನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ನಾನು ದಿನವೂ ಎಂಟುಗಂಟೆ ಕೈಕಾಲುಗಳಿಂದ ಕೆಲಸ ಮಾಡದಿದ್ದರೆ ನನ್ನ ಮನಸ್ಸು ಇಂದಿಗಿಂತ ಎಷ್ಟೋ ಒಳ್ಳೆಯದಾಗುತ್ತಿತ್ತು. ಒಂದು ಕೆಟ್ಟವಿಚಾರ ಬರುತ್ತಿರಲಿಲ್ಲ. ನನ್ನ ಮನಸ್ಸಿನಲ್ಲಿ ಕೆಟ್ಟ ಯೋಚನೆ ಹುಟ್ಟುವುದೇ ಇಲ್ಲ ಎಂದು ನಾನು ಹೇಳಲಾರೆ. ಇಷ್ಟತ್ತಿಗಾದರೂ ನಾನು ಹೀಗಿರಲು ಕಾರಣ ಬಾಳಿನಲ್ಲಿ ಬಹುಬೇಗ ಶರೀರ ಶ್ರಮದ ಬೆಲೆಯನ್ನು ಅರಿತುಕೊಂಡದ್ದೇ.'

'ಶರೀರ ಶ್ರಮದಲ್ಲಿ ಇಷ್ಟು ಉತ್ತಮ ಗುಣವಿದ್ದರೆ ನಮ್ಮ ಜನ ದಿನವೂ ಎಂಟುಗಂಟಗಿಂತ ಹೆಚ್ಚಾಗಿ ಕೆಲಸ ಮಾಡುತ್ತಾರಲ್ಲ, ಅವರ ಮನಸ್ಸಿನ ಪಾವಿತ್ರ್ಯದ ಮೇಲೆ ಅಥವಾ ಶಕ್ತಿಯಮೇಲೆ ಅದರ ವಿಶೇಷ ಪ್ರಭಾವ ಏನೂ ಕಾಣಬಾರದಲ್ಲ !'

'ಬರೀ ಮಾನಸಿಕ ಶ್ರಮದಲ್ಲೇ ಹೇಗೆ ಶಿಕ್ಷಣವೆಲ್ಲಾ ಅಡಕವಾಗದೋ ಶರೀರ ಶ್ರಮದಲ್ಲೂ ಇಡೀ ಶಿಕ್ಷಣ ಅಡಕವಾಗದು, ನಮ್ಮ ಜನಕ್ಕೆ ಗೊತ್ತಿಲ್ಲ.

ಅವರ ದೃಷ್ಟಿಯಲ್ಲಿ ಇದು ವ್ಯರ್ಥ ಶ್ರಮ, ಇದರಿಂದ ಮನುಷ್ಯನ ಸೂಕ್ಷ್ಮ ವೃತ್ತಿಗಳೆಲ್ಲ ಜಡವಾಗಿ ಬಿಡುತ್ತವೆ. ಸವರ್ಣ ಹಿಂದೂಗಳ ವಿರುದ್ಧ ಎಲ್ಲಕ್ಕಿಂತ ಹೆಚ್ಚಿನ ಟೀಕೆ ನನ್ನದು ಇದೇ. ಕೂಲಿಗಾರರ ಕೆಲಸವನ್ನು ಲಾಭವಿಲ್ಲದ ಕೆಲಸವಾಗಿ ಮಾಡಿಬಿಟ್ಟಿದಾರೆ ಅವರು, ಇದರಿಂದ ಅವರಿಗೆ ಆನಂದವೂ ಸಿಗದು, ಈ ಕೆಲಸದಲ್ಲಿ ಅಭಿರುಚಿಯೂ ಇಲ್ಲ. ಅವರನ್ನು ಸಮಾಜದಲ್ಲಿ ಸಮಾನಸ್ಕಂಧರಂತೆ ತಿಳಿದಿದ್ದರೆ ಸಮಾಜದಲ್ಲಿ ಅವರ ಸ್ಥಾನ ಎಲ್ಲರಿಗಿಂತ ಹೆಚ್ಚು ಗೌರವಪೂರ್ಣವಾಗಿರುತ್ತಿತ್ತು. ಇದು ಕಲಿಯುಗ ಎನ್ನುತ್ತಾರೆ. ಸತ್ಯಯುಗದಲ್ಲಿ ಸಮಾಜ ಇಂದಿಗಿಂತ ಎಷ್ಟೋ ಹೆಚ್ಚು ಸುವ್ಯವಸ್ಥಿತವಾಗಿತ್ತು ಎಂದು ನಾನು ತಿಳಿದಿದೇನೆ. ನಮ್ಮ ದೇಶ ಬಹಳ ಪುರಾತನವಾದುದು. ಇದರಲ್ಲಿ ಎಷ್ಟೋ ಸಂಸ್ಕೃತಿ ಹುಟ್ಟಿದವು, ಅಳಿದವು, ನಾವು ಆಯಾ ಯುಗದಲ್ಲಿ ಹೇಗೆ ಇದ್ದೆವೆಂಬುದನ್ನು ನಿಶ್ಚಯವಾಗಿ ಹೇಳುವುದೂ ಕಷ್ಟ. ಆದರೆ ಬಹುಕಾಲದವರೆಗೆ ನಾವು ಶೂದ್ರರನ್ನು ಉಪೇಕ್ಷೆ ಮಾಡಿದುದರ ಫಲವೇ ಇಂದಿನ ದುರ್ದೆಶೆ. ಇವತ್ತಿನ ಗ್ರಾಮಸಂಸ್ಕೃತಿ. ಅವನ್ನು ಸಂಸ್ಕೃತಿಯೆಂದು ಕರೆಯಬಹುದಾದರೆ – ಭಯಾನಕವಾಗಿದೆ. ಹಳ್ಳಿಯ ಜನರು ದನಕ್ಕಿಂತಲೂ ಕೀಳು ಜೀವನವನ್ನು ನಡಸುತ್ತಿದಾರೆ. ಪ್ರಕೃತಿ ಪಶುಗಳನ್ನು ಕೆಲಸ ಮಾಡುವಂತೆ ಸ್ವಾಭಾವಿಕ ಜೀವನವನ್ನು ನಡಸುವಂತೆ ಒತ್ತಾಯ ಮಾಡುತ್ತದೆ. ನಮ್ಮ ಕೂಲಿಗಾರರು ಸ್ವಾಭಾವಿಕವಾಗಿ ಕೆಲಸ ಮಾಡುವಂತೆಯೂ ಇಲ್ಲ, ಸಹಜವಾಗಿ ಬಾಳುವಂತೆಯೂ ಇಲ್ಲ, ಹೀಗೆ ಮಾಡಿದೇವೆ. ನಮ್ಮ ಜನರು ಬುದ್ಧಿಪೂರ್ವಕವಾಗಿ ಆನಂದಮಯ ಶರೀರಶ್ರಮವನ್ನು ಮಾಡದಿದ್ದರೆ ಇವತ್ತು ನಮ್ಮ ಸ್ಥಿತಿ ಬೇರೆಯೇ ಆಗಿರುತ್ತಿತ್ತು.'

'ಎಂದರೆ ಶ್ರಮಕ್ಕೂ ಸಂಸ್ಕಾರಿತೆಗೂ ಗಂಟು ಹಾಕಲು ಸಾಧ್ಯವಿಲ್ಲ ಎಂದೇ ಅಲ್ಲವೆ ?'

'ಅಲ್ಲ. ಪ್ರಾಚೀನ ರೋಮಿನಲ್ಲಿ ಹಾಗೆ ಮಾಡುವ ಪ್ರಯತ್ನ ಮಾಡಿದರು. ಆದರೆ ಅದು ತೀರಾ ನಿಷ್ಫಲವಾಯಿತು. ಶ್ರಮ ಮಾಡದೆ ಬರುವ ಸಂಸ್ಕಾರಿತೆ ಪ್ರಯೋಜನಕಾರಿಯಲ್ಲ. ರೋಮನ್ ಜನರು ವಿಲಾಸವನ್ನು ರೂಢಿ ಮಾಡಿಕೊಂಡರು. ಹಾಳಾದರು. ಇಡೀ ಕಾಲ ಮನುಷ್ಯ ಕೇವಲ ಓದಿ ಬರೆದು ಅಥವಾ ಭಾಷಣಮಾಡಿ ಮನಸ್ಸಿನ ವಿಕಾಸಮಾಡಿಕೊಳ್ಳಲಾರ. ನಾನು ಓದಿದ್ದೆಲ್ಲ ಸೆರೆಮನೆಯಲ್ಲಿ, ಬಿಡುವಿದ್ದಾಗ. ಅದರಿಂದ ನನಗೆ ಲಾಭವಾಗಿದೆ. ಏಕೆಂದರೆ ಮನಸ್ಸಿಗೆ ಬಂದ ಹಾಗೆ ಓದಿದ್ದಲ್ಲ ಅದು. ಒಂದು ನಿಶ್ಚಿತ ಉದ್ದೇಶದಿಂದ

ಓದಿದ್ದು. ನಾನು ದಿನಗಟ್ಟಲೆ ತಿಂಗಳುಗಟ್ಟಲೆ ದಿನವೂ ಎಂಟೆಂಟು ಗಂಟೆ ಕೆಲಸ ಮಾಡಿದ್ದೇನೆ. ಆದರೆ ನನ್ನ ತಲೆ ಬರಿದಾಗಿರಲಿಲ್ಲ. ಎಷ್ಟೋ ಸಲ ದಿನಕ್ಕೆ ನಲವತ್ತು ಮೈಲಿಯಂತೆ ನಡೆದಿದ್ದೇನೆ. ಆದರೂ ನನಗೆ ಬುದ್ಧಿಯ ಜಡತೆ ಅನಿಸಲಿಲ್ಲ.'

'ನಿಮಗೆ ಮನಸ್ಸಿಗೆ ಬಹಳ ಶಿಕ್ಷಣ ದೊರೆತಿತ್ತಲ್ಲ!'

'ಇಲ್ಲ, ತಮ್ಮ, ನಿನಗೆ ಗೊತ್ತಿಲ್ಲ, ನಾನು ಶಾಲೆಯಲ್ಲೂ ವಿಲಾಯತಿಯಲ್ಲೂ ಎಂಥ ಮಧ್ಯಮ ಬುದ್ಧಿಯ ಹುಡುಗನಾಗಿದ್ದೆನೋ. ಚರ್ಚಾ ಕೂಟಗಳಲ್ಲಿ ಶಾಕಾಹಾರಿಗಳ ಸಭೆಗಳಲ್ಲಿ ಮಾತನಾಡಲಿಕ್ಕೂ ಕೂಡ ನನಗೆ ಧೈರ್ಯವಿರಲಿಲ್ಲ. ಹುಟ್ಟಿನಿಂದಲೇ ನನ್ನಲ್ಲಿ ಒಂದು ಅಸಾಧಾರಣ ಶಕ್ತಿಯಿತ್ತೆಂದು ತಿಳಿಯಬೇಡ, ತಮ್ಮ. ಆ ಕಾಲದಲ್ಲಿ ದೇವರು ಉದ್ದೇಶಪೂರ್ವಕವಾಗಿಯೆ ನನಗೆ ಮಾತಾಡುವ ಶಕ್ತಿಯನ್ನು ಕೊಡಲಿಲ್ಲ; ನಾ ಬಲ್ಲೆ. ನಿನಗೆ ಗೊತ್ತಿರಲಿ, ನಮ್ಮ ಇಡೀ ಗುಂಪಿನಲ್ಲಿ ಎಲ್ಲರಿಗಿಂತ ಕಡಮೆ ಓದಿದವನು ನಾನು.'[೧೪೮]

## ವ್ಯಾಯಾಮ ಪದ್ಧತಿಯ ಬಗ್ಗೆ

ನನ್ನ ಅಭಿಪ್ರಾಯದಲ್ಲಿ ವಿದ್ಯಾರ್ಥಿಗಳ ಶರೀರ ವ್ಯಾಯಾಮ ಹಳೆಯ ರೀತಿಯ ಪ್ರಕಾರ ನಡೆಯಬೇಕು—ಎಂದರೆ ಪ್ರಾಣಾಯಾಮ, ಆಸನ ಮುಂತಾದುವುಗಳ ಮೂಲಕ, ಮುಲ್ಲರ್ ಮೊದಲಾದ ಪಶ್ಚಿಮದವರು ಈಚೆಗೆ ಶರೀರವನ್ನು ಬೆಳೆಸಲು ಬರೆದಿರುವ ಪುಸ್ತಕಗಳಿಗೆ, ಅವಕ್ಕೆ ಸಿಕ್ಕಿರುವ ಸ್ವಲ್ಪ ಮಟ್ಟಿನ ಸಫಲತೆಗೆ ಕಾರಣ, ಅದರ–ಬೇರು ಪ್ರಾಚೀನ ಪದ್ಧತಿಯಲ್ಲಿರುವುದೇ. ಈ ಜನ ಅದನ್ನೇ ಈಗಿನ ವಿಜ್ಞಾನಶಾಸ್ತ್ರದ ಭಾಷೆಯಲ್ಲಿ ಹೇಳಿದಾರೆ. ಅದರಲ್ಲಿ ಸ್ವಲ್ಪ ಸುಧಾರಣೆಯನ್ನೂ ಮಾಡಿದಾರೆ. ಈ ಬಗ್ಗೆ ನಾವು ಬಹಳ ಸ್ವಲ್ಪ ಕೆಲಸಮಾಡಿದೇವೆ, ನಿಜ. ಈ ಪದ್ಧತಿಯಿಂದ ವ್ಯಾಯಾಮವನ್ನು ಕಲಿತ ಮೇಲೆ ಈಗಿನ ಕಾಲದ ಕುಸ್ತಿಯನ್ನು ಕಲಿಯಬೇಕೆಂದರೆ ಅನುಕೂಲಮಾಡಿಕೊಡಬೇಕು. ಆದರೆ ಲಾಠಿ–ಕತ್ತಿವರಸೆಗಳನ್ನು ಕಲಿಯುವುದು ಅಗತ್ಯ ಎಂದು ತಿಳಿಯಬಾರದು. ಮಕ್ಕಳು ಚಿಕ್ಕಂದಿನಿಂದಲೆ ದೊಣ್ಣೆವರಸೆ ಕತ್ತಿವರಸೆಗಳನ್ನು ಕಲಿಯುವ ಗೋಜಿಗೆ ಹೋಗಬೇಕಾದ್ದಿಲ್ಲ. ಶರೀರವನ್ನು ಗಟ್ಟಿಮುಟ್ಟುಗೊಳಿಸುವುದರಲ್ಲಿ ಬೇರೆ ಬೇರೆ ಅವಯವಗಳನ್ನು ವಿಕಾಸಗೊಳಿಸುವುದರಲ್ಲಿ ಲಾಠಿಗೆ ಸ್ಥಾನ ಬಹಳ ಕಡಿಮೆ. ಇದು ವ್ಯಾಯಾಮದ ಅಂಗವಲ್ಲ. ಆದರೆ

ಆತ್ಮ ಸಂರಕ್ಷಣೆಗೆ ಅಥವಾ ಅಂಥ ಬೇರೆ ಕಾರಣಗಳಿಗಾಗಿ ಕೊಡುವ ಶಿಕ್ಷಣ ಎನ್ನಬೇಕು.

*　　*　　*　　*　　*

ವ್ಯಾಯಾಮ ಆಟಗಳನ್ನು ಕಡ್ಡಾಯ ಮಾಡಿದಿರಿ. ನನಗೆ ಬಹಳ ಸಂತೋಷ. ಯಾವು ಯಾವುದು ಒಳ್ಳೆಯದೋ ಅದನ್ನು ಕಡ್ಡಾಯ ಮಾಡೋಣ. ಗುಜರಾತಿ, ಸಂಸ್ಕೃತ ಮುಂತಾದ ವಿಷಯಗಳನ್ನು ನಾವು ಒಳ್ಳೆಯದು, ಅತ್ಯಗತ್ಯ ಎಂದುಕೊಂಡಿದ್ದೇವೆ. ಅದಕ್ಕಾಗಿ ಅವನ್ನು ಅನಿವಾರ್ಯವಾಗಿ ಮಾಡಿದ್ದೇವೆ. ವ್ಯಾಯಾಮ ಆಟಗಳನ್ನು ಇಷ್ಟು ಅಗತ್ಯವೆಂದುಕೊಳ್ಳಲಿಲ್ಲ. ಅದಕ್ಕಾಗಿ ಅದನ್ನು ವಿದ್ಯಾರ್ಥಿಗಳ ಇಷ್ಟಕ್ಕೇ ಬಿಟ್ಟುಬಿಟ್ಟೆವು. ಈಗ ಅವನ್ನು ಗುಜರಾತಿಗೆ ಸಮಾನವಾಗಿ ಅಗತ್ಯವೆಂದು ನೀವು ತಿಳಿದಿದೀರಿ. ಆದ್ದರಿಂದ ಅವು ಅನಿವಾರ್ಯವಾದವು. ನಮ್ಮ ಇಷ್ಟಕ್ಕೆ ವಿರುದ್ಧವಾಗಿ ಹಾಕಿದ ಅಂಕುಶ ನಮ್ಮನ್ನು ಪರಾಧೀನರನ್ನಾಗಿಮಾಡುತ್ತದೆ. ನಮಗೆ ನಾವೇ ಹಾಕಿಕೊಂಡ ಅಂಕುಶ ನಮ್ಮ ನಿಜವಾದ ಸ್ವಾತಂತ್ರ್ಯವನ್ನು ಹೆಚ್ಚಿಸುತ್ತದೆ.೧೪೯

## ವರ್ತಮಾನ ಪತ್ರಿಕೆ

ನನ್ನ ಅಲ್ಪಬುದ್ಧಿಗೆ ಅನುಸಾರವಾಗಿ ಪತ್ರಿಕೆಯ ವೃತ್ತಿಯನ್ನು ಹೊಟ್ಟೆಯ ಪಾಡಿಗಾಗಿ ಮಾಡುವುದು ಒಳ್ಳೆಯದಲ್ಲ. ಕೆಲವು ಕೆಲಸ ಇತ್ತ ಅಪಾಯಕರ, ಅತ್ತ ಸಾರ್ವಜನಿಕ, ಅವುಗಳ ಮೂಲಕ ಹೊಟ್ಟೆ ಹೊರೆಯುವ ಮನಸ್ಸಿದ್ದರೆ ಆ ಕೆಲಸದ ಮೂಲೋದ್ದೇಶಕ್ಕೇ ಭಂಗ ಬರುತ್ತದೆ. ಇನ್ನೂ ಮುಂಬರಿದು ಪತ್ರಿಕೆಗಳನ್ನು ಐಶ್ವರ್ಯ ಗಳಿಸುವ ಸಾಧನವನ್ನಾಗಿ ಮಾಡಿದರೆ ಅದರಿಂದ ಬಹಳ ಕೆಟ್ಟ ಪರಿಣಾಮವಾಗಬಲ್ಲದು. ಪತ್ರಿಕೆಗಳ ಅನುಭವ ಇದ್ದವರಿಗೆ ಇವತ್ತು ಅಂಥ ಕೆಟ್ಟ ಪರಿಣಾಮ ಬಹಳ ಆಗಿದೆ ಎಂಬುದನ್ನು ತೋರಿಸಿಕೊಡಬೇಕಾದ್ದೇನಿಲ್ಲ.

ಪತ್ರಿಕೆಯ ಕೆಲಸ ಜನರಿಗೆ ಶಿಕ್ಷಣ ನೀಡುವುದು. ಪತ್ರಿಕೆಗಳ ಮೂಲಕ ಜನರಿಗೆ ವರ್ತಮಾನ ಇತಿಹಾಸ ಸಿಗುತ್ತದೆ. ಇದೇನು ಅಲ್ಪ ಸ್ವಲ್ಪ ಜವಾಬದಾರಿಯ ಕೆಲಸವಲ್ಲ, ಇಷ್ಟಾದರೂ ಓದುಗರು ಪತ್ರಿಕೆಗಳನ್ನು ನಂಬುವ ಹಾಗಿಲ್ಲ ಎಂಬುದನ್ನು ನೋಡುತ್ತಿದ್ದೇವೆ. ಎಷ್ಟೋ ಸಲ ಪತ್ರಿಕೆಗಳಲ್ಲಿರುವ ಸುದ್ದಿಯೇ ಒಂದು ನಡೆದಿರುವ ವಿಷಯವೇ ಬೇರೊಂದು—ತಿರುಗುಮುರುಗು. ಹೀಗೆ

ಕಾಣಬರುತ್ತದೆ. ತನ್ನ ಕೆಲಸ ಲೋಕಶಿಕ್ಷಣದ್ದು ಎಂದು ಪತ್ರಿಕೆ ತಿಳಿದು ಕೊಂಡರೆ ಸುದ್ದಿಯನ್ನು ಕೊಡುವ ಮೊದಲು ಅದು ನಿಧಾನಿಸೀತು. ಎಷ್ಟೋಸಲ ಪತ್ರಿಕೆಗಳ ಸ್ಥಿತಿ ಬಹಳ ವಿಷಮವಾಗುತ್ತದೆ, ನಿಜ. ಬಹಳ ಸ್ವಲ್ಪ ಸಮಯ ದಲ್ಲಿ ಸಾರಾಸಾರ ನಿರ್ಣಯವನ್ನು ಅವು ಮಾಡಬೇಕು. ನಿಜವಾದ ಸುದ್ದಿ ಯನ್ನು ಊಹಿಸಲೇ ಬೇಕಾಗುತ್ತದೆ. ಆದರೂ ಒಂದು ಸುದ್ದಿ ನಿಜವೋ ಅಲ್ಲವೊ ನಿಶ್ಚಯವಾಗಿ ತಿಳಿಯದಿದ್ದರೆ ಅದನ್ನು ಕೊಡದಿರುವುದೇ ಲೇಸು ಎನ್ನು ತ್ತೇನೆ.

ಭಾಷಣಕಾರರ ಭಾಷಣಗಳನ್ನು ಅಚ್ಚುಮಾಡುವುದರಲ್ಲಿ ಹಿಂದುಸ್ಥಾನದ ಪತ್ರಿಕೆಗಳಲ್ಲಿ ಬಹಳ ದೋಷಗಳು ಕಾಣಬರುತ್ತವೆ. ಭಾಷಣವನ್ನು ಕೇಳಿ ಬರೆಯಬಲ್ಲ ಶಕ್ತಿಯುಳ್ಳವರು ಬಹಳ ಸ್ವಲ್ಪ. ಇದರಿಂದ ಭಾಷಣಕಾರನ ಭಾಷಣ ಕಲಸುಮೇಲೋಗರವಾಗಿ ಬಿಡುತ್ತದೆ. ಪ್ರತಿಯೊಬ್ಬ ಭಾಷಣಕಾರರ ಭಾಷಣದ ಅಚ್ಚಿನ ಕರಡನ್ನೂ ಅವರವರ ಬಳಿಗೆ ತಿದ್ದಲು ಕಳಿಸಿಕೊಡುವುದು ಎಲ್ಲಕ್ಕಿಂತ ಶ್ರೇಷ್ಠ ನಿಯಮ. ಆತ ಅದನ್ನು ತಿದ್ದಿಕೊಡದಿದ್ದರೆ ಪತ್ರಿಕೆ ತಾನು ಅಣಿಮಾಡಿದ ಸಾರವನ್ನು ಕೊಡಬಹುದು.

ಅನೇಕವೇಳೆ ಪತ್ರಿಕೆಗಳು ಸ್ಥಳವನ್ನು ತುಂಬಿಸಲಿಕ್ಕೆ ಯಾವ ಯಾವ ದನ್ನೋ ಅಚ್ಚು ಮಾಡುವುದನ್ನು ನೋಡುತ್ತೇವೆ. ಈ ರೂಢಿ ಎಲ್ಲಾ ಕಡೆಗಳಲ್ಲೂ ಕಾಣಬರುತ್ತದೆ. ಪಶ್ಚಿಮದಲ್ಲೂ ಇಷ್ಟೇ. ಪತ್ರಿಕೆಗಳ ದೃಷ್ಟಿ ಹೆಚ್ಚಾಗಿ ಸಂಪಾದನೆಯ ಕಡೆ ಇರುವುದೇ ಇದಕ್ಕೆ ಕಾರಣ. ಪತ್ರಿಕೆಗಳು ಬೇಕಾದಷ್ಟು ಸೇವೆಮಾಡಿವೆ, ಸಂದೇಹವಿಲ್ಲ. ಅದರಿಂದ ಅದರ ದೋಷಗಳು ಮುಚ್ಚಿಹೋಗುತ್ತವೆ. ಎಷ್ಟು ಮಟ್ಟಿಗೆ ಸೇವೆಮಾಡಿವೆಯೋ ಅಷ್ಟು ಮಟ್ಟಿಗೆ ಕಷ್ಟವನ್ನೂ ಮಾಡಿವೆಯೆಂದು ನನ್ನ ಅಭಿಪ್ರಾಯ. ಪಶ್ಚಿಮದಲ್ಲಿ ಕೆಲವು ಪತ್ರಿಕೆ ಎಷ್ಟು ಅನೀತಿಮಯವೆಂದರೆ ಅವನ್ನು ಮುಟ್ಟುವುದೂ ಒಂದು ಪಾಪವೇ. ಅನೇಕ ಪತ್ರಿಕೆಗಳು ಪಕ್ಷಪಾತದಿಂದ ತುಂಬಿತುಳುಕುತ್ತವೆ. ಅದರಿಂದ ಜನರಲ್ಲಿ ಹಗೆತನವನ್ನು ಹುಟ್ಟಿಸುತ್ತವೆ, ಹರಡುತ್ತವೆ. ಎಷ್ಟೋ ಬಾರಿ ಕುಟುಂಬಗಳ ನಡುವೆ ಜಾತಿಗಳ ನಡುವೆ ಜಗಳ ತಂದೊಡ್ಡುತ್ತವೆ. ಲೋಕಸೇವೆ ಮಾಡು ತ್ತವೆ ಎಂದು ಪತ್ರಿಕೆಗಳನ್ನು ಟೀಕಿಸದಿರಲು ಸಾಧ್ಯವಿಲ್ಲ. ಎಲ್ಲವನ್ನೂ ತೂಗಿ ನೋಡಿದರೆ ಲಾಭ–ನಷ್ಟ ಸಮ ಸಮ ಎನ್ನುವಂತಿದೆ.

ಪತ್ರಿಕೆಗಳಲ್ಲಿ ಒಂದು ರೂಢಿ ಬಂದಿದೆ. ಅದರ ಮುಖ್ಯ ಸಂಪಾದನೆ

ಚಂದಾದಾರರಿಂದ ಬರುತ್ತಿಲ್ಲ, ಪ್ರಕಟನೆಗಳಿಂದ ಬರುತ್ತದೆ. ಇದರ ಫಲ ದುಃಖದಾಯಕವೇ ಆಗಿದೆ. ಇತ್ತಕಡೆ ಹೆಂಡದ ಅವಗುಣಗಳ ಟೀಕೆ ಬರುತ್ತದೆ ಪತ್ರಿಕೆಯಲ್ಲಿ; ಅತ್ತಕಡೆ ಹೆಂಡದ ಹೊಗಳಿಕೆ ಬರುತ್ತದೆ ಪ್ರಕಟನೆಗಳಲ್ಲಿ—ಅದೇ ಪತ್ರಿಕೆಯಲ್ಲಿ. ಒಂದೇ ಪತ್ರಿಕೆಯಲ್ಲೇ ಹೊಗೆಸೊಪ್ಪಿನ ದೋಷಗಳನ್ನೂ ಓದಬಹುದು. ಅತ್ಯುತ್ತಮವಾದ ಹೊಗೆಸೊಪ್ಪು ಎಲ್ಲಿ ಸಿಗುತ್ತದೆ ಎಂಬ ಪ್ರಕಟನೆಯನ್ನೂ ನೋಡಬಹುದು. ನಾಟಕದ ಉದ್ದುದ್ದ ಪ್ರಕಟನೆಯೂ ಅದರಲ್ಲೇ, ನಾಟಕದ ಟೀಕೆಯೂ ಅದರಲ್ಲೇ. ಹೆಚ್ಚು ದುಡ್ಡು ಸಿಗುವುದು ಔಷಧಗಳ ಪ್ರಕಟನೆಯಿಂದ, ಆದರೆ ಔಷಧಗಳ ಪ್ರಕಟನೆಗಳಿಂದ ಜನರಿಗೆ ಎಷ್ಟು ನಷ್ಟವಾಗಿದೆಯೋ, ಇನ್ನೂ ಆಗುತ್ತಿದೆಯೋ ಹೇಳಲು ಸಾಧ್ಯವಿಲ್ಲ. ಪತ್ರಿಕೆಗಳು ಏನಾದರೂ ಅಲ್ಪ ಸ್ವಲ್ಪ ಸೇವೆಮಾಡಿದ್ದರೆ ಈ ಔಷಧದ ಪ್ರಕಟನೆಗಳು ಅವೆಲ್ಲವನ್ನೂ ಮುಳುಗಿಸುತ್ತವೆ—ಎಲ್ಲವೂ ಕೊಚ್ಚಿಹೋಗುತ್ತದೆ, ಔಷಧಗಳ ಪ್ರಕಟನೆಯಿಂದ ಆಗುವ ಹಾನಿಯನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಅನೇಕರು ಪ್ರಕಟನೆಗಳಿಗೆ ಮೋಸಹೋಗಿ ಹಾನಿಕರ ಔಷಧಗಳನ್ನು ತೆಗೆದುಕೊಳ್ಳುತ್ತಾರೆ. ಎಷ್ಟೋ ಔಷಧ ಅನೀತಿಗೆ ಪುಷ್ಟಿಕೊಡುವಂಥವು. ಇಂಥ ಪ್ರಕಟನೆಗಳು ಧಾರ್ಮಿಕ ಪತ್ರಿಕೆಗಳಲ್ಲೂ ಬರುತ್ತವೆ. ಇದು ಪಶ್ಚಿಮದಿಂದ ಬಂದ ರೂಢಿ. ಏನಾದರೂ ಪ್ರಯತ್ನಮಾಡಿ ಪ್ರಕಟನೆಗಳ ಪದ್ಧತಿಯನ್ನು ತೊಡೆದುಹಾಕಬೇಕು, ಇಲ್ಲವೆ ಅದರಲ್ಲಿ ಬಹಳ ಸುಧಾರಣೆ ಮಾಡಬೇಕು. ಪ್ರತಿಯೊಂದು ಪತ್ರಿಕೆಯೂ ಪ್ರಕಟನೆಗಳಲ್ಲಿ ಹಿಡಿತವಿಟ್ಟುಕೊಳ್ಳಬೇಕು. ಅದು ಕರ್ತವ್ಯ.

ನಮ್ಮ ಪತ್ರಿಕೆಗಳಲ್ಲಿ ಸಾಧಾರಣವಾಗಿ ಎರಡುಕಡೆ ಅರ್ಥ ಬರುವಂತೆ ಬರೆಯುತ್ತಾರೆ. ಇದನ್ನು ಕೆಲವು ಪತ್ರಿಕೆಗಳು ಶಾಸ್ತ್ರವಾಗಿಯೆ ಮಾಡಿವೆ. ಇದರಿಂದ ದೇಶಕ್ಕೆ ನಷ್ಟವೆಂದು ನನ್ನ ಅಭಿಪ್ರಾಯ. ಜನರಲ್ಲಿ ನಿರ್ವೀರ್ಯತನ ಬರುತ್ತದೆ. ಎರಡೆರಡು ಅರ್ಥದ ಮಾತಾಡುವ ರೂಢಿ ಬೀಳುತ್ತದೆ. ಇದರಿಂದ ಭಾಷೆಯ ರೂಪ ವ್ಯತ್ಯಾಸವಾಗುತ್ತದೆ. ವಿಚಾರ ಪ್ರಕಟನೆಯ ಬದಲು ವಿಚಾರವನ್ನು ಮರೆಮಾಚುವ ಸಾಧನವಾಗುತ್ತದೆ ಭಾಷೆ. ಈ ರೀತಿಯಲ್ಲಿ ಜನತೆ ನಿರ್ಮಾಣವಾಗದೆಂದು ನನ್ನ ಅಭಿಪ್ರಾಯ. ಮನಸ್ಸಿನಲ್ಲಿರುವುದನ್ನೇ ಹೇಳುವ ರೂಢಿ ಜನತೆಯಲ್ಲಿ ಬರಬೇಕು. ವ್ಯಕ್ತಿಗಳಲ್ಲೂ ಅಷ್ಟೇ. ಪತ್ರಿಕೆಗಳಿಂದ ಈ ಶಿಕ್ಷಣ ಚೆನ್ನಾಗಿ ಸಿಗಬಲ್ಲದು. ಮನಸ್ಸಿನಲ್ಲಿರುವುದನ್ನು ನಿರ್ಭಯ

ವಾಗಿ, ಆದರೆ ನಮ್ರವಾಗಿ ಹೇಳಬೇಕು. ಬಂದದ್ದನ್ನು ಭೋಗಿಸಬೇಕು. ನ್ಯಾಯಮೂರ್ತಿ ಸ್ಟೀವನ್ ಹೇಳಿದ್ದಾರೆ: ಮನಸ್ಸಿನಲ್ಲೂ ಯಾರು ದ್ರೋಹ ಬಗೆಯರೋ ಅವರ ಭಾಷೆಯಲ್ಲಿ ದ್ರೋಹ ಎಳ್ಳಷ್ಟೂ ಬಾರದು. ಮನಸ್ಸಿನಲ್ಲಿ ದ್ರೋಹವಿದ್ದರೆ ನಿರ್ಭಯವಾಗಿ ಹೇಳಿಬಿಡಬೇಕು. ಹಾಗೆ ಮಾಡಲು ಧೈರ್ಯ ವಿಲ್ಲದಿದ್ದರೆ ಪತ್ರಿಕೆಯನ್ನು ನಿಲ್ಲಿಸಬೇಕು. ಇದರಿಂದ ಎಲ್ಲರಿಗೂ ಒಳ್ಳೆಯದು.

೧೯೦

## ಶಿಕ್ಷಣವೂ ಸಾಹಿತ್ಯವೂ

### ೧

(ಗುಜರಾತ ಸಾಹಿತ್ಯ ಪರಿಷತ್ಸಮ್ಮೇಲನದ ಅಧ್ಯಕ್ಷ ಭಾಷಣದಿಂದ)

ಸಾಹಿತ್ಯ ಪರಿಷತ್ತು ಏನುಮಾಡಬೇಕು? ಪರಿಷತ್ತಿನಿಂದ ನಾನು ಏನು ಬಯಸಲಿ? ನಾವು ಸಾಹಿತ್ಯನಿರ್ಮಾಣ ಮಾಡುವುದು ಯಾರಿಗಾಗಿ? ಕಸ್ತೂರಭಾಯಿ ಕಂಪನಿಯವರಿಗಾಗಿಯೆ ಅಂಬಾಲಾಲಭಾಯಿಗಾಗಿಯೆ; ಸರ್ ಚೀನುಭಾಯಿಗಾಗಿಯೆ? ಅವರ ಬಳಿ ಹಣ ಇದೆ. ಎಷ್ಟು ಜನ ಸಾಹಿತಿ ಗಳನ್ನು ಬೇಕಾದರೂ ಇಟ್ಟುಕೊಳ್ಳಬಹುದು. ಎಷ್ಟು ಪುಸ್ತಕಾಲಯಗಳನ್ನು ಬೇಕಾದರೂ ತೆರೆಯಬಹುದು. ಆದರೆ ಬಾವಿಯಲ್ಲಿ ಕಪಿಲೆ ಹೊಡೆಯುವವನ ಗತಿ? ರಮಣಭಾಯಿಗೆ ನಾನು ಹೇಳಿದ್ದೆ: ನಮ್ಮ ಭಾವಿಯಲ್ಲಿ ಕಪಿಲೆ ಹೊಡೆಯುವವನು ಯಾವ ಭಾಷೆ ಆಡುತ್ತಾನೋ ನಿಮಗೆ ತಿಳಿಯುವುದಿಲ್ಲ. ನೀವು ಬೈಯುತ್ತೀರೋ ಅವನಿಗೆ ಗೊತ್ತಾಗುವುದಿಲ್ಲ. ಅವನ ಬಳಿಗೆ ಬರ ಬೇಕು ಕವಿ. ಯಾರಾದರೂ ಅದ್ಭುತ ಕಲೆಗಾರ ಅವನ ಬಳಿಗೆ ಹೋಗಿ ಅವನಿಗೆ ತಿಳಿಸಬಹುದು. ಇಲ್ಲೊಂದು ಅಲ್ಲೊಂದು ಮಾತು ಹೇಳಿ, ಅವನಿಗೆ ಅದು ಅರಗುವಂತೆ ಹೇಳಲಿ.

ಆಗ ನನ್ನ ಎದುರಿಗೆ ಅವನೊಬ್ಬನೇ ಇದ್ದ. ಅವನೂ ಪೂರಾ ಹಳ್ಳಿ ಯವನಲ್ಲ, ಕೊಚರಬ್‌ನವನು. ಅದೂ ಒಂದು ಹಳ್ಳಿಯೆ? ಅಹಮದಾ ಬಾದಿನ ಹೊರವಳಯ, ಎಂಜಲು. ಅಲ್ಲಿ ಜೀವನಲಾಲಭಾಯಿಯ ಬಂಗಲೆ ಇತ್ತು. ಅಲ್ಲಿ ನನ್ನಂಥ ದೆವ್ವ ಅಲ್ಲದೆ ಮತ್ತಾರು ಇರಬೇಕು? ಇರಲಿ. ಈಗ ಆ ಕಪಿಲೆಗಾರನಂಥವರು ಅನೇಕರು ಇದ್ದಾರೆ ನನ್ನ ಹತ್ತಿರ. ಈಗ ನಾನು ಸೇಗಾಂವದಲ್ಲಿ ಹೋಗಿ ಬಿದ್ದಿದ್ದೇನೆ. ೬೦೦ ಜನ ಇದ್ದಾರೆ ಅಲ್ಲಿ. ಅವರಲ್ಲಿ ೧೦ ಜನಕ್ಕಾದರೂ ಓದು ಬರುತ್ತದೆಯೋ ಇಲ್ಲವೋ. ಅವರಲ್ಲಿ ೧೦ ಕಡಮೆ

ಎಂದರೆ ೫೦ ಎನ್ನಿ. ಅದು ಬಹಳ ಹೆಚ್ಚು. ಅಲ್ಲಿ ನಾನು ಏನು ಮಾಡಿದೆ? ಉಚಿತಪುಸ್ತಕಾಲಯ ಒಂದನ್ನು ತೆರೆದೆ. ಅಲ್ಲಿ ಪುಸ್ತಕಗಳನ್ನು ಕೂಡಿಸಿದೆ. ಆದರೆ ಓದಲು ಹತ್ತರಲ್ಲಿ ಅರ್ಥಮಾಡಿಕೊಳ್ಳುವವರು ಇಬ್ಬರೋ ಮೂವರೋ, ಹೆಂಗಸರಲ್ಲಂತೂ ಓದಬಲ್ಲವರು ಒಬ್ಬರೂ ಇಲ್ಲ.

ಅಲ್ಲಿ ಪುಸ್ತಕಾಲಯವನ್ನು ತೆರೆದೆ. ಅದರಲ್ಲಿ ಏನು ಸಾಹಿತ್ಯವಿದ್ದೀತು? ಒಬ್ಬಿಬ್ಬರು ಹುಡುಗಿಯರ ಪಾಠ್ಯಪುಸ್ತಕಗಳನ್ನು ಕಿತ್ತುಕೊಂಡೆ. ಈ ಕೆಲಸಕ್ಕೆ ಬಾರದ ಪಾಠ್ಯಪುಸ್ತಕಗಳನ್ನು ಅಣಿಮಾಡುವವರ ವಿಷಯ ಏನು ಹೇಳಲಿ? ಗಂಟೆಗಟ್ಟಲೆ ಹೇಳಿ ನಿಮ್ಮನ್ನು ನಗಿಸಬಲ್ಲೆ. ಆದರೆ ಈಗ ಸಮಯವಿಲ್ಲ.

ಇಂಥ ಹಳ್ಳಿಯಲ್ಲಿ ಏನು ಓದಿಸಲಿ? ಮುನ್ಷಿಯ ಕಾದಂಬರಿಗಳನ್ನೆ, ಕೃಷ್ಣಲಾಲಭಾಯಿಯ ಕೃಷ್ಣಚರಿತೆಯನ್ನೋ? ಹಳ್ಳಿಗರಿಗೆ ರಘುವಂಶ ಓದಿ ಭವಭೂತಿಯನ್ನೇ ಓದಿ ಇಂಗ್ಲೀಷನ್ನು ಓದಿ ಎಂದರೆ ಆದೀತೆ? ಪುಸ್ತಕ ಓದಿ ಓದಿ ಕ್ಷಯವೇ ಆದರೂ ರಕ್ತದ ಒತ್ತಡವೇ ಆದರೂ ಇವರಿಗೆ ಓದುವ ಚಟ ತಪ್ಪದು- ಇಂಥವರು ಹಳ್ಳಿಗಳಿಗಾಗಿ ಪುಸ್ತಕಗಳನ್ನು ಬರೆದರೆ ಅವಕ್ಕೂ ರೋಗ ಹಿಡಿದೀತು. ಇಂಥವರಿಗೆ ಹಳ್ಳಿಯಲ್ಲೇನು ಕೆಲಸ? ಥರ್ಮಾಸನ್ನು ಹಿಡಿದುಕೊಂಡು ಹೋಗುವ ನನ್ನಂಥವನಿಗಿಂತ ನಿಜವಾಗಿ ಹಳ್ಳಿಯವರಂತೆ ಇರ ಬಲ್ಲವರೇ ಆ ಜನಕ್ಕೆ ಜೀವಂತ ಸಾಹಿತ್ಯ ಕೊಡಬಲ್ಲರು.

ರವಿಶಂಕರ ರಾವಲ್‌ನಂಥವರು ಅಹಮದಾಬಾದಿನಲ್ಲಿ ಕೂತೇ ಕುಂಚವನ್ನು ತೀಡುತ್ತಾರೆ. ಹಳ್ಳಿಗೆ ಹೋಗಿ ಇವರು ಏನು ಮಾಡಬೇಕು? ಅವರ ಚಿತ್ರಗಳ ಪ್ರದರ್ಶನವನ್ನು ನೋಡಿ ನನ್ನ ಎದೆ ತುಂಬಾ ಹಿಗ್ಗಿತು. ಇದಕ್ಕೆ ಮೊದಲು ಇಂಥ ಚಿತ್ರಗಳಿರಲಿಲ್ಲ. ಆದರೆ ನನ್ನ ಕಣ್ಣು ಗ್ರಾಮಸ್ಥರ ಕಣ್ಣು. ನನಗೆ, ನನ್ನೊಡನೆ ಮಾತಾಡುವ ಚಿತ್ರ ಬೇಕು. ಚಿತ್ರ ನನ್ನ ಮುಂದೆ ನಾಟ್ಯ ಮಾಡಬೇಕು. ಇಂಥ ಚಿತ್ರ ಜಗತ್ತಿನಲ್ಲಿ ಬಹಳ ಕಡಿಮೆ. ರೋಮಿನಲ್ಲಿ ಪೋಪರ ಸಂಗ್ರಹದಲ್ಲಿ ಒಂದು ಮೂರ್ತಿಯನ್ನು ನೋಡಿದೆ. ನೋಡಿ ನನಗೆ ಎಚ್ಚರ ತಪ್ಪಿತು. ಶಿಲುಬೆಯ ಮೇಲಿನ ಕ್ರಿಸ್ತನ ಮೂರ್ತಿ ಅದು. ಆ ಮೂರ್ತಿ ಯನ್ನು ನೋಡಿದ ಮನುಷ್ಯ ಹುಚ್ಚನಾಗುತ್ತಾನೆ. ಅದನ್ನು ನೋಡಿ ನಾನು ಸ್ತಬ್ಧನಾದೆ. ಇದು ವಿದೇಶದ ಮಾತು. ಕೆಲವು ವರುಷಗಳ ಹಿಂದೆ ನಾನು ಮೈಸೂರಿಗೆ ಹೋಗಿದ್ದೆ. ಬೇಲೂರಿಗೆ ಹೋಗಿದ್ದೆ. ಅಲ್ಲಿನ ಪುರಾತನ ದೇವಾ ಲಯದಲ್ಲಿ ಬೆತ್ತಲೆಯಾಗಿ ನಿಂತಿದ್ದ ಒಬ್ಬ ಹೆಂಗಸಿನ ವಿಗ್ರಹವನ್ನು ನೋಡಿದೆ.

ಅದನ್ನು ಯಾರೂ ನನಗೆ ತೋರಿಸಲಿಲ್ಲ. ನನ್ನ ಲಕ್ಷ್ಯ ಅತ್ತ ಹೋಯಿತು. ನಾನು ಆಕರ್ಷಿತನಾದೆ. ಚಿತ್ತಲೆ ಹೆಂಗಸಿನ ವರ್ಣನೆ ಮಾಡುವುದಿಲ್ಲ ನಾನು. ಆದರೆ ನಾನು ತಿಳಿದುಕೊಂಡ ಭಾವವನ್ನು ಹೇಳುತ್ತೇನೆ. ಅವಳ ಕಾಲಿನ ಮುಂದೆ ಒಂದು ಚೇಳು ಬಿದ್ದಿದೆ. ಅದರ ಶಿಲ್ಪಿ ಭೀಭತ್ಸನಲ್ಲ. ಆದ್ದರಿಂದ ಆ ಹೆಣ್ಣಿನ ಮೈಯನ್ನು ಅರೆ ಮುಚ್ಚಿದಾನೆ. ಕಪ್ಪು ಬಣ್ಣದ ಅಮೃತಶಿಲೆ ಅದು. ಅದನ್ನು ನೋಡಿದರೆ ಯಾರೋ ರಂಭೆ, ಅಸಂತುಷ್ಟಳಾದ ರಂಭೆ ಎನಿಸುತ್ತದೆ. ನಾನು ಮಾಡುವ ವರ್ಣನೆ ಹಳ್ಳಿಯ ತರದ್ದು. ನಾನು ಅದನ್ನು ನೋಡುತ್ತ ನಿಂತೇ ಬಿಟ್ಟೆ. ಆಕೆ ತನ್ನ ಮೈ ಮೇಲಿನ ಬಟ್ಟೆಯನ್ನು ಹರಿಯುತ್ತಿದಾಳೆ. ಶಿಲ್ಪಕಲೆಗೆ ಪೂರ್ತಿ ಅಗತ್ಯವಿಲ್ಲ. ಸಾಕ್ಷಾತ್ ಕಾಮದೇವನೇ ಇಲ್ಲಿ ಚೇಳಾಗಿ ಕೂತಿದಾನೆ ಎನಿಸಿತು ನನಗೆ. ಆ ಹೆಂಗಸಿನ ಮೈಯಲ್ಲಿ ಬೆಂಕಿ ಉರಿಯುತ್ತಿದೆ. ಶಿಲ್ಪಿ ಕಾಮದೇವನನ್ನು ಗೆಲಿಸಲು ನೋಡಿದ. ಆದರೆ ಆ ಹೆಂಗಸು ಕಟ್ಟ ಕಡೆಗೆ ತನ್ನ ಸೀರೆಯಿಂದ ಆ ಚೇಳನ್ನು ಕೊಡವಿ ಹಾಕಿದಾಳೆ ಕೆಳಗಡೆ. ಅದನ್ನು ಗೆಲ್ಲಗೊಡಲಿಲ್ಲ. ಆ ಹೆಂಗಸಿನ ಅಂಗಾಂಗಗಳಲ್ಲೂ ಅವಳ ವೇದನೆ ಕಾಣಬರುತ್ತದೆ. ರವಿಶಂಕರ ಇದಕ್ಕೆ ಏನು ಬೇಕಾದರೂ ಅರ್ಥ ಮಾಡಲಿ. ಪಟ್ಟಣದ ಅವನ ಅರ್ಥ ತಪ್ಪು, ನನ್ನ ಹಳ್ಳಿಯ ಅರ್ಥವೆ ಸರಿ.

ನಾನು ಏನು ಬಯಸುತ್ತೇನೋ ಹೇಳಿದೆ. ನನ್ನ ಎದೆಯಲ್ಲಿ ಬೆಂಕಿ ಉರಿಯುತ್ತಿದೆ. ಎದೆಯಲ್ಲಿ ಅಳು ತುಂಬಿದೆ. ಆದರೆ ಕಣ್ಣಿನಿಂದ ಕಂಬನಿಯನ್ನು ಹೇಗೆ ಸುರಿಯಲಿ ? ಇಷ್ಟೆಲ್ಲ ಅಪಾರವಾದ ನೋವು ಇದ್ದರೂ ನಾನು ನಗಬೇಕಾಗಿದೆ. ಅಳುವ ಪ್ರಸಂಗ ಬಂದಾಗಲೂ ನಾನು ಅಳುವುದಿಲ್ಲ. ಮನಸ್ಸನ್ನು ಗಟ್ಟಿ ಮಾಡಿಕೊಳ್ಳುತ್ತೇನೆ. ಆದರೆ ಹಳ್ಳಿಯ ಎಲುಬಿನ ಹಂದರಗಳನ್ನು ನೋಡಿದರೆ ನಿಮ್ಮ ಸಾಹಿತ್ಯವೆಲ್ಲ ನಿಷ್ಪ್ರಯೋಜಕ ಎನಿಸುತ್ತದೆ.

ಅಲ್ಲಿನ ಹೆಂಗಸರನ್ನು ನೋಡಿದರೆ ಅವರಿಗೂ ಅಹಮದಾಬಾದದ ಹೆಂಗಸರಿಗೂ ಏನು ಸಂಬಂಧ ಎನಿಸುತ್ತದೆ. ಆ ಹೆಂಗಸರು ಸಾಹಿತ್ಯವನ್ನು ಏನು ಬಲ್ಲರು ? ರಾಮಭಜನೆ ಹೇಳಿ ಕೊಟ್ಟರೂ ಹೇಳಲಾರರು. ಹಾವು ಚೇಳಿಗೆ ಅಂಜದೆ, ಚಳಿ ಮಳೆ ಬಿಸಿಲಿಗೆ ಬೆದರದೆ ನೀರು ತರುತ್ತಾರೆ, ಹುಲ್ಲು ಕುಯ್ಯುತ್ತಾರೆ, ಸೌದೆ ತರುತ್ತಾರೆ. ಒಂದು ಬಿಲ್ಲೆ ಕೊಟ್ಟರೆ ನನ್ನನ್ನು ಅನ್ನದಾತನೆಂದು ತಿಳಿಯುತ್ತಾರೆ. ಆಲ್ಲಿ ಯಾರಿದಾರೆ ಅವರಿಗೆ ಆ ಬಿಲ್ಲೆ ಕೊಡುವವರು. ಈ ಭಾರತ ಅಹಮದಾಬಾದಿನಲ್ಲಿಲ್ಲ, ಏಳು ಲಕ್ಷ ಹಳ್ಳಿಗಳಲ್ಲಿದೆ. ಅವರಿಗೆ ನೀವು ಏನು ಕೊಡು

ತ್ತೀರಿ ? ಅದರಲ್ಲಿ ನೂರಕ್ಕೆ ಐವರು ಓದು ಬಲ್ಲವರು. ಬಹಳವಾದರೆ ನೂರಿನ್ನೂರು ಶಬ್ದ ಅದರ ಬಂಡವಾಳ. ಅವರ ಬಳಿಗೆ ಏನನ್ನು ಕೊಂಡೊಯ್ಯಬೇಕೋ ನನಗೆ ಗೊತ್ತು. ಆದರೆ ನಿಮಗೆ ಹೇಳಿ ಏನು ಮಾಡಲಿ ? ಇವತ್ತು ಮಾತಾಡುತ್ತೇನೆ. ಅದೂ ವಿಶೇಷ ಪರಿಸ್ಥಿತಿಯಲ್ಲಿ. ವರುಷಗಟ್ಟಲೆ ನಾನು ಮಾತಾಡಲೇ ಇಲ್ಲ. ಗೆಳೆಯರು ನನ್ನನ್ನು ಮೂರ್ಖ (dunce) ಎಂದರು. ಚಿಕ್ಕ ಗುಂಪಿನಲ್ಲೂ ನನಗೆ ಬಾಯಿ ಬಿಡಲು ಬರುತ್ತಿರಲಿಲ್ಲ. ನ್ಯಾಯಾಲಯದಲ್ಲೂ ಏನು ಮಾತಾಡಬೇಕೋ ತಿಳಿದಿರಲಿಲ್ಲ. ನನಗೆ ಮಾತಾಡಲೇ ಬರುತ್ತಿರಲಿಲ್ಲ. ಬ್ಯಾರಿಸ್ಟರು ಆದೆ. ಆದರೆ ಹಳ್ಳಿಯವನು. ನನಗೆ ಗೊತ್ತಿದೆ ಸ್ವರಾಜ್ಯದ ಬೀಗದ ಕೈ ಕೂಲಿಗಾರನಲ್ಲೂ ಇಲ್ಲ, ಹಳ್ಳಿಗಳಲ್ಲಿದೆ. ಹಳ್ಳಿಯನ್ನೊ ನಾನು ಮುಡುಕಿಕೊಂಡು ಹೋಗಲಿಲ್ಲ. ಸತ್ಯಾಗ್ರಹವನ್ನೂ ನಾನು ಮುಡುಕಿಕೊಂಡು ಹೋಗಲಿಲ್ಲ. ಈ ಹಳ್ಳಿಗಳ ಹೆಂಗಸರು ಎಷ್ಟೋ ಜನ ಬಲವಂತವಾಗಿ ನನ್ನನ್ನು ವರಿಸಿದಾರೆ. ಅವರೆಲ್ಲರನ್ನೂ ನಾನು ತಾಯಂದಿರನ್ನಾಗಿ ಸ್ವೀಕರಿಸಿದೇನೆ. ತಾಯಂದಿರಂತೆ ಅವರನ್ನು ಪೂಜಿಸುತ್ತೇನೆ. ಈ ಮಾತೃಮಂದಿರಕ್ಕೆ ನಿಮಗೂ ಔತಣ ಕೊಡುತ್ತೇನೆ, ಬನ್ನಿ.

೨

## ಉಪಸಂಹಾರ ಭಾಷಣ

ಚಲೋ ಲೇಖನಗಳನ್ನು ಓದುವುದು ನನಗೆ ಸೇರುವುದಿಲ್ಲ ಎಂದಲ್ಲ. ನನ್ನೊಳಗೆ ಎಷ್ಟೋ ರಸ ತುಂಬಿವೆ, ನಾನು ತೃಪ್ತಿಗೊಳಿಸಲಾರದವು. ಅದರಲ್ಲಿ ಕೆಲವು ಬತ್ತಿಹೋಗಿವೆ. ಉಳಿದವು 'ಪರ' ಅಥವಾ ಭಗವಂತನ ದರ್ಶನವಾಗುವವರೆಗೆ ಆಗಾಗ ಚಿಮ್ಮುತ್ತಿರುತ್ತವೆ.

ಈಗ ಕಾದಂಬರಿಗಳ ಹುಚ್ಚು ಹೊಳೆ ಹರಿಯುತ್ತಿದೆ. ಕಾದಂಬರಿ ಓದುವುದು ಒಂದು ಚಟ ಆಗಿದೆ. ನಾಯಿಕೊಡೆಗಳ ಹಾಗೆ ಕಾದಂಬರಿಗಳು ಹುಟ್ಟುತ್ತಲೇ ಇವೆ. ಕಾದಂಬರಿಗಳನ್ನು ಹೇಗೆ ಬರೆಯುತ್ತಾರೋ ತಿಳಿಯಬೇಕೆಂದರೆ ಬೇಕಾದಷ್ಟು ಹೇಳಬಲ್ಲೆ. ಆದರೆ ಅದರ ಚಿತ್ರವನ್ನು ಸಭ್ಯಸ್ತ್ರೀಪುರುಷರ ಮುಂದೆ ಇಡಲು ಸಾಧ್ಯವಲ್ಲ. ಕಲ್ಪನೆಯ ಕುದುರೆ ಎತ್ತ ಬೇಕಾದರೂ ಓಡಬಹುದು. ಅದಕ್ಕೆ ಲಗಾಮೇ ಇಲ್ಲ. ಈ ಕಾದಂಬರಿಗಳಿಲ್ಲದಿದ್ದರೂ ನಮ್ಮ ಕೆಲಸ ಸಾಗುತ್ತದೆ. ಕಾದಂಬರಿಗಳಿಲ್ಲದಿದ್ದರೆ ಗುಜರಾತಿ ಭಾಷೆ ವಿಧವೆಯಾಗದು. ಇವತ್ತು ಗುಜರಾತಿ ಭಾಷೆ ವಿಧವೆಯೆ. ನಾನು ದಕ್ಷಿಣ ಆಫ್ರಿಕಾಕ್ಕೆ

ಹೋದಾಗ ಜೊತೆಗೆ ಕೆಲವು ಗುಜರಾತಿ ಪುಸ್ತಕಗಳನ್ನು ಒಯ್ದೆ. ಅದರಲ್ಲಿ ಟೆಯಲನ ಗುಜರಾತಿ ವ್ಯಾಕರಣವೂ ಇತ್ತು. ಅದು ನನಗೆ ಬಹಳ ಹಿಡಿಸಿತು. ಆ ಪುಸ್ತಕದ ಕೊನೆಯಲ್ಲಿ ಆತ ಹೇಳಿದ್ದಾನೆ: ಯಥಾ ಭಾಷಕ: ತಥಾ ಭಾಷಾ. ಗುಜರಾತಿಯಲ್ಲಿ ಭಾಷೆಗೆ ದಾರಿದ್ರ್ಯವಿಲ್ಲ, ಆಡುವವನ ದಾರಿದ್ರ್ಯ ಕಾಣುತ್ತದೆ. ಕಾದಂಬರಿಗಳಿಂದ ಈ ಬಡತನ ಹಿಂಗೀತೆ?

ನಾನು ಹಳ್ಳಿಯಲ್ಲಿ ಬಿದ್ದಿದ್ದೇನೆ. ಹಳ್ಳಿಯುವರ ದೃಷ್ಟಿಯಿಂದ ನನ್ನ ಹಸಿವನ್ನು ಹೇಳುತ್ತೇನೆ. ಮಟ್ರಿಕ್ ತರಗತಿಯಲ್ಲಿ ನಾನು ಜ್ಯೋತಿಷ್ಯದ ಪುಸ್ತಕ ಓದಿದ್ದೆ. ಆದರೆ ಆಕಾಶದ ಕಡೆ ನೋಡು ಎಂದು ಯಾರೂ ಹೇಳಲಿಲ್ಲ. ಕಾಕಾಸಾಹೇಬರು ರಸಿಕರು. ಯರವಡಾ ಸೆರೆಮನೆಯಲ್ಲಿ ಅವರು ದಿನವೂ ಮುಗಿಲಿನ ಚಿಕ್ಕೆಗಳ ಕಡೆ ನೋಡುತ್ತಿದ್ದರು. ದಿನವೂ ಏನು ನೋಡುತ್ತಾರೆ ಇವರು ಎನಿಸಿತು. ಅವರು ಹೊರಬಿದ್ದ ಮೇಲೆ ನಾನು ಪುಸ್ತಕಗಳನ್ನು ತರಿಸಿದೆ. ನನಗೆ ಗುಜರಾತಿ ಪುಸ್ತಕ ಬೇಕಾಗಿತ್ತು. ಯಾವುದೋ ಒಂದು ಕೆಲಸಕ್ಕೆ ಬಾರದ ಪುಸ್ತಕ ಸಿಕ್ಕಿತು. ಅದರಿಂದ ನನ್ನ ಹಸಿವು ಹೇಗೆ ಇಂಗಬೇಕು? ಹಳ್ಳಿಯವರಿಗೆ ಅರ್ಥವಾಗುವಂಥ ಜ್ಯೋತಿಷ್ಯದ ಪುಸ್ತಕವನ್ನು ಅವರಿಗೆ ಕೊಡಲಾರೆವೆ?

ಜ್ಯೋತಿಷ್ಯ ಹೋಗಲಿ, ಅವರಿಗೆ ಭೂಗೋಳ ತಾನೆ ಎಲ್ಲಿದೆ? ನಿಜವಾಗಿ ನಾವು ಹಳ್ಳಿಗಳನ್ನು ಗಮನಿಸಿಯೆ ಇಲ್ಲ. ನಮ್ಮ ಹಿಟ್ಟಿಗೆ ಬಟ್ಟೆಗೆ ಹಳ್ಳಿಗಳೇ ಆಧಾರ. ಆದರೂ ನಾವು ಅವರ ಸೇಠರಂತೆ ನಡೆಯುತ್ತೇವೆ. ಅವರಿಗೆ ಏನು ಬೇಕೋ ನಾವು ಯೋಚಿಸಿದ್ದೇ ಇಲ್ಲ. ತನ್ನ ಭಾಷೆಯನ್ನು ಬಿಟ್ಟು ಪರಭಾಷೆಯ ಮೂಲಕ ತನ್ನ ಸಮಸ್ತ ವ್ಯವಹಾರವನ್ನೂ ನಡಸುವ ಇಂಥ ನಿರ್ಭಾಗ್ಯ ದೇಶ ಎಲ್ಲಾದರೂ ಇದೆಯೆ? ಇದರಿಂದಲೇ ನಮ್ಮ ದೇಶ ಬಡವಾಗಿದೆ, ನಮ್ಮ ಭಾಷೆ ವಿಧವೆ ಆಗಿದೆ. ಫ್ರೆಂಚ್ ಜರ್ಮನ್ ಭಾಷೆಗಳಲ್ಲಿ ಬಂದ ಪುಸ್ತಕ ತಟ್ಟನೆ ಇಂಗ್ಲೀಷಿಗೆ ಅನುವಾದವಾಗಿರುತ್ತದೆ. ಹಾಗೆ ಗುಜರಾತಿಯಲ್ಲಿ ಏನಿದೆ? ಇದ್ದರೆ ಹೃದಯಪೂರ್ವಕ ಆಶೀರ್ವದಿಸುತ್ತೇನೆ.

ಲೇಖಕರಿಗೆ ಹೇಳುತ್ತೇನೆ—ಪಟ್ಟಣದವರಿಗಾಗಿ ಬರೆಯುವ ಬದಲು ನಮ್ಮ ಮೂಕಜನರಿಗಾಗಿ ಬರೆಯಿರಿ. ಆ ಕ್ಷೇತ್ರದೊಳಕ್ಕೆ ಧುಮುಕಿರಿ. ಮನೋರಂಜಕ ಕಥೆಗಳನ್ನು ನೀವು ಬರೆದೀರಿ. ಅದರಿಂದ ಅವರ ಬುದ್ಧಿಯ ಮೇಲೆ ಪ್ರಭಾವ ಬೀಳದು. ನಮ್ಮಲ್ಲಿ ಗ್ರಾಮಸೇವಕ ವಿದ್ಯಾಲಯವಿದೆ. ಅದರ ಆಚಾರ್ಯ

ರಿಗೆ ನಾನು ಹೇಳಿದೆ. ಅವರಿಗೆ ಉದ್ಯೋಗವನ್ನು ಕಲಿಸುವ ಮುನ್ನ ಉದ್ಯೋಗದ ಉಪಕರಣಗಳ ಅಧ್ಯಯನ ಮಾಡಿ, ಬಾಜಿಯ ರಚನೆಯನ್ನು ತಿಳಿದುಕೊಳ್ಳಿ. ನಿಮ್ಮ ಬುದ್ಧಿ ವಿಕಾಸವಾಗಬೇಕೋ, ಹಳ್ಳಿಯ ಸಾಧನೆಗಳನ್ನೂ ಅಧ್ಯಯನ ಮಾಡಿ. ಅವುಗಳ ಗುಣಗಳನ್ನೂ ದೋಷಗಳನ್ನೂ ಅರಿಯಿರಿ. ಬುದ್ಧಿಯ ವಿಕಾಸಕ್ಕೆ ನಿಜವಾದ ಕ್ಷೇತ್ರ ಹಳ್ಳಿ, ಪಟ್ಟಣವಲ್ಲ.

ಈಗ ಹೆಂಗಸರ ಬಗ್ಗೆ ನೀವೇನು ಬರೆಯುತ್ತೀರೋ ಅದರಿಂದ ಅವರಿಗೆ ನೋವಾಗಿದೆ. ಈಗ ಸಾಹಿತ್ಯದಲ್ಲಿ ಬರುವ ಸ್ತ್ರೀ ವರ್ಣನೆ ವಿಕೃತ. ನಮ್ಮ ಮೈಯನ್ನು ವರ್ಣಿಸಲಿಕ್ಕೆಂದೇ ನಿಮಗಾಗಿ ದೇವರು ಸೃಷ್ಟಿಸಿದಾರೆ ಎಂದು ಹೆಂಗಸರು ಕೇಳುತ್ತಾರೆ. ನಾವು ಸತ್ತರೆ ನಮ್ಮ ಚರ್ಮದಲ್ಲಿ ಮಸಾಲೆ ತುಂಬಿ ಇಟ್ಟುಕೊಳ್ಳುತ್ತೀರಾ? ನಮ್ಮನ್ನು ಇದ್ದ ಹಾಗೆ ತಿಳಿದುಕೊಳ್ಳಬಾರದೆ? ನಿಮ್ಮ ಹಾಗೆ ನಾವೂ ಸ್ವತಂತ್ರ ಮನುಷ್ಯರು. ನಾವು ರಂಭೆಯರೂ ಅಲ್ಲ, ಅಪ್ಸರೆಯರೂ ಅಲ್ಲ, ಅಥವಾ ನಿಮ್ಮ ಚರಣದಾಸಿ—ಗುಲಾಮರೂ ಅಲ್ಲ ಎನ್ನುತ್ತಾರೆ.

ಹೆಂಗಸರ ವರ್ಣನೆ ಮಾಡುವಾಗ ನಿಮಗೆ ನಿಮ್ಮ ತಾಯಂದಿರ ನೆನಪೇಕೆ ಬಾರದು? ನನ್ನ ಬಳಿ ಒಂದು ರಾಶಿ ಹೆಂಗಸರು ಇದ್ದರು ಒಂದು ಕಾಲದಲ್ಲಿ. ದಕ್ಷಿಣ ಆಫ್ರಿಕಾದಲ್ಲಿ ಅರವತ್ತು ಎಪ್ಪತ್ತು ಮನೆಗಳ ಹೆಂಗಸರಿಗೆ ಅಣ್ಣ—ತಂದೆ ಆಗಿದ್ದೆ ನಾನು. ಅವರು ಬಹಳ ಚೆಲುವೆಯರೂ ಇದ್ದರು. ಕುರೂಪಿಗಳೂ ಇದ್ದರು. ಆ ಹೆಂಗಸರೆಲ್ಲ ಅವಿದ್ಯಾವತಿಯರು. ಆದರೂ ಅವರ ವೀರತನವನ್ನು ನಾನು ಪ್ರಕಟಗೊಳಿಸಿದೆ. ಗಂಡಸರ ಹಾಗೆ ಆದರೂ ದಿಟ್ಟತನದಿಂದ ಸೆರೆಮನೆಗೆ ಹೋದರು.

ನಿಮ್ಮ ದೃಷ್ಟಿಯನ್ನು ವ್ಯತ್ಯಾಸ ಮಾಡಿಕೊಳ್ಳಿ, ನಾನು ಹೇಳುತ್ತೇನೆ. ಈಗಿನ ಸಾಹಿತ್ಯದಲ್ಲಿ ಹೆಂಗಸರ ಹೊಗಳಿಕೆ ಬಹಳವಂತೆ. ಹೀಗೆ ಸುಳ್ಳು ಹೊಗಳಿಕೆ, ಅವರ ಕಣ್ಣು ಕಿವಿ ಮೂಗು ಬೇರೆ ಅಂಗಗಳ ವರ್ಣನೆ ನನಗೆ ಬೇಕಾಗಿಲ್ಲ. ಎಂದಾದರೂ ನಿಮ್ಮ ತಾಯಿಯ ಅಂಗಗಳ ವರ್ಣನೆ ಮಾಡುತ್ತೀರಾ ನೀವು? ಹೇಳುತ್ತೇನೆ ಕೇಳಿ. ಹೆಂಗಸಿನ ಬಗ್ಗೆ ಲೇಖನಿ ಹಿಡಿದಿರೋ, ನಿಮ್ಮ ಕಣ್ಣಿನ ಮುಂದೆ ನಿಮ್ಮ ತಾಯಿಯನ್ನು ಸುಳಿಯಿಸಿಕೊಳ್ಳಿ. ಆಗ ನೀವು ಯೋಚಿಸಿ ಬರೆದೀರಿ. ನಿಮ್ಮ ಲೇಖನಿಯಿಂದ ಹೊರಹೊಮ್ಮುವ ಸಾಹಿತ್ಯ ಅಂದವಾದ ಮುಗಿಲಿನಿಂದ ಮೋಡ ಮಳೆಗರೆವಂತೆ, ಇಳಿದು ಬರಲಿ. ಭೂಮಾತೆಯಂತೆ ಹೆಂಗಸನ್ನು ಪೋಷಿಸಲಿ. ಇವತ್ತು ಹೆಂಗಸಿಗೆ ಶಾಂತಿ ನೀಡುವ ಬದಲು ಪ್ರೋತ್ಸಾಹ

ಕೊಡುವ ಬದಲು ಅವಳನ್ನು ಸುಡುತ್ತಿದೀರಿ. ಇಂಥ ವರ್ಣನೆ ಸಾಹಿತ್ಯಕ್ಕೇನು ಅನಿವಾರ್ಯ ಅಂಗವೆ? ಉಪನಿಷತ್ತು, ಬೈಬಲ್, ಕೊರಾನುಗಳಲ್ಲಿ ಹೊಲಸಾದುದು ಏನಾದರೂ ಇದೆಯೆ? ತುಲಸೀದಾಸರ ಕಾವ್ಯದಲ್ಲಿ ಕೊಳಕು ಇದೆಯೆ? ಈ ದೊಡ್ಡ ಗ್ರಂಥಗಳು ಸಾಹಿತ್ಯವಲ್ಲವೇನು? ಬೈಬಲ್ ಸಾಹಿತ್ಯವಲ್ಲವೆ? ಇಂಗ್ಲೀಷ್ ಭಾಷೆಯಲ್ಲಿ ಮುಕ್ಕಾಲು ಭಾಗ ಬೈಬಲ್, ಕಾಲುಭಾಗ ಷೇಕ್ಸ್‌ಪಿಯರ್ ಎನ್ನುತ್ತಾರೆ. ಇದಿಲ್ಲದಿದ್ದರೆ ಇಂಗ್ಲೀಷಿನಲ್ಲಿ ಬಂತು? ಕೊರಾನಿಲ್ಲದೆ ಅರಬ್ಬಿಯೆ? ತುಲಸೀದಾಸರಿಲ್ಲದೆ ಹಿಂದಿಯೆ? ಇಂಥ ಸಾಹಿತ್ಯವನ್ನು ನೀವೇಕೆ ಕೊಡುವುದಿಲ್ಲ? ನಾನು ಹೇಳಿದುದನ್ನು ವಿಚಾರ ಮಾಡಿ. ಪದೇ ಪದೇ ವಿಚಾರ ಮಾಡಿ. ಇದು ನಿಷ್ಪ್ರಯೋಜಕ ಎನಿಸಿದರೆ ಬಿಸುಟು ಬಿಡಿ.೧೪೧

## ವಿದ್ಯಾರ್ಥಿ ನಿಲಯ

ವಿದ್ಯಾರ್ಥಿ ನಿಲಯ—ಛಾತ್ರಾಲಯ—ನಡಸಿದ ಅನುಭವ ಸ್ವಲ್ಪ ಇದೆ ನನಗೆ. ವಿದ್ಯಾರ್ಥಿ ನಿಲಯದ ಅರ್ಥವನ್ನು ಸ್ವಲ್ಪ ಹಿಗ್ಗಿಸಬೇಕು. ಯಾವುದನ್ನು ಕಲಿಯುತ್ತಿದ್ದರೂ ಅವನು ವಿದ್ಯಾರ್ಥಿ. ಒಬ್ಬನಿಗಿಂತ ಹೆಚ್ಚು ಜನ ವಿದ್ಯಾರ್ಥಿಗಳಿದ್ದರೆ ಅದು ವಿದ್ಯಾರ್ಥಿನಿಲಯ.

ಇಂಥ ವಿದ್ಯಾರ್ಥಿನಿಲಯದ ಗೃಹಪತಿ (ಸೂಪರಿಂಟೆಂಡೆಂಟ್) ಗುಣವಂತನಾಗಿರಬೇಕು.

ವಿದ್ಯಾರ್ಥಿನಿಲಯ ಒಂದು ಛತ್ರದಂತೆ ಆಗಬಾರದು. ಬರೀ ಊಟ ತಿಂಡಿಗಾಗಿ ಒಟ್ಟುಗೂಡುವವರ ಗುಂಪು ಆಗಬಾರದು.

ವಿದ್ಯಾರ್ಥಿಗಳಲ್ಲಿ ಕುಟುಂಬ ಭಾವನೆ ಹರಡಬೇಕು. ಗೃಹಪತಿ ತಂದೆಯ ಹಾಗೆ ಇರಬೇಕು. ಆದ್ದರಿಂದ ಆತ ವಿದ್ಯಾರ್ಥಿಗಳ ಬಾಳಿನಲ್ಲಿ ಹಾಸುಹೊಕ್ಕಾಗಿ ಬೆರೆತು ಹುಡುಗರ ಜೊತೆಯಲ್ಲಿ ತನ್ನ ಊಟ ಉಪಚಾರಗಳನ್ನು ಮಾಡಬೇಕು.

ಆದರ್ಶ ವಿದ್ಯಾರ್ಥಿನಿಲಯ ಶಾಲೆಗಿಂತ ಹೆಚ್ಚಿನದು ಆಗಬೇಕು. ನಿಜವಾದ ಶಾಲೆ ಅದೇ. ಶಾಲೆ ಕಾಲೇಜುಗಳಲ್ಲಿ ಹುಡುಗರಿಗೆ ಸಿಗುವುದು ಬರೀ ಅಕ್ಷರ ಜ್ಞಾನ. ವಿದ್ಯಾರ್ಥಿನಿಲಯದಲ್ಲಿ ಎಲ್ಲಾ ಬಗೆಯ ಶಿಕ್ಷಣವೂ ಸಿಗುತ್ತದೆ. ವಿದ್ಯಾರ್ಥಿನಿಲಯ ಬೇರೆ, ಶಾಲೆ ಬೇರೆ ಇರುವುದಿಲ್ಲ ಆದರ್ಶಸ್ಥಿತಿಯಲ್ಲಿ. ಎಲ್ಲಾ ಒಂದೇ ವ್ಯವಸ್ಥೆ. ಸಾಧ್ಯವಿದ್ದಮಟ್ಟಿಗೂ ವಿದ್ಯಾರ್ಥಿಗಳೂ ಶಿಕ್ಷಕರೂ

ಜೊತೆಯಲ್ಲೇ ಇರುತ್ತಾರೆ. ಸ್ವಾಭಾವಿಕ ಕುಟುಂಬದಲ್ಲೂ ಇವತ್ತು ಈ ಸ್ಥಿತಿಯಿಲ್ಲ. ಹೊಸ ಹಾಗೂ ದೊಡ್ಡ ಕುಟುಂಬ ಆದ ವಿದ್ಯಾರ್ಥಿನಿಲಯಗಳ ಮೂಲಕ ಈ ಸ್ಥಿತಿಯನ್ನು ಈಗ ರಚಿಸಬೇಕು. ಈ ದೃಷ್ಟಿಯಿಂದ ವಿದ್ಯಾರ್ಥಿನಿಲಯಗಳು ಗುರುಕುಲಗಳಾಗುತ್ತವೆ.

ಈಚೆಗೆ ವಿದ್ಯಾರ್ಥಿನಿಲಯಗಳಲ್ಲಿ ಅನೇಕ ದೋಷಗಳು ಕಾಣುತ್ತಿವೆ. ಅದರಲ್ಲಿ ಕುಟುಂಬದ ಭಾವನೆಯನ್ನು ಹುಟ್ಟಿಸುತ್ತಿಲ್ಲ, ವಿದ್ಯಾರ್ಥಿನಿಲಯಗಳನ್ನು ನಡಸುವವರು ವಿದ್ಯಾರ್ಥಿಗಳ ಬಾಳಿನಲ್ಲಿ ಪೂರ್ಣವಾಗಿ ಬೆರೆಯುತ್ತಿಲ್ಲ ಎಂಬುದೇ ಕಾರಣ.

ವಿದ್ಯಾರ್ಥಿನಿಲಯಗಳು ಪಟ್ಟಣದ ಹೊರಗೆ ಇರಬೇಕು. ಹಳ್ಳಿಯಲ್ಲಿ ಪಟ್ಟಣವಲ್ಲಿ ಏನೇನು ಸುಧಾರಣೆಯಾಗಬೇಕು ಎನ್ನುತ್ತೇವೋ ಅವೆಲ್ಲವೂ ಅಲ್ಲಿ ಆಗಬೇಕು. ಶೌಚ ಮುಂತಾದ ನಿಯಮಗಳ ಪಾಲನೆ ಅಲ್ಲಿ ನಡೆಯಬೇಕು. ಆದರ್ಶ ವಿದ್ಯಾರ್ಥಿನಿಲಯದಲ್ಲಿ ಸ್ನಾನಕ್ಕೆ ಶೌಚಕ್ಕೆ ಒಳ್ಳೊಳ್ಳೇ ಅನುಕೂಲ ಇರಬೇಕು. ಗಾಳಿ ಬೆಳಕು ಚೆನ್ನಾಗಿರಬೇಕು. ಅದರಲ್ಲಿ ಒಂದು ತೋಟ ಇರಬೇಕು.

ಆದರ್ಶ ವಿದ್ಯಾರ್ಥಿನಿಲಯ ಎಲ್ಲಾ ರೀತಿಯಲ್ಲೂ ಸ್ವದೇಶೀ ಆಗಿದ್ದೀತು. ಅವರ ಕಟ್ಟಡಗಳಲ್ಲಿ, ಅಲಂಕಾರದಲ್ಲಿ ಹಳ್ಳಿಯ ಬಾಳಿನ ನೆರಳು ಕಾಣಬೇಕು. ಭಾರತದ ಬಡತನದ ದೃಷ್ಟಿಯಿಂದ ಅದನ್ನು ಕಟ್ಟಬೇಕು. ಪಶ್ಚಿಮ ದೇಶದ ಶೀತಲ ಧನಿಕ ಪ್ರದೇಶದ ವಿದ್ಯಾರ್ಥಿನಿಲಯಗಳು ನಮಗೆ ಮಾದರಿಯಾಗಲಾರವು.

ಹುಡುಗರು ಸೋಮಾರಿಗಳು, ಪೋಲಿಗಳು ಆಗುವಂತೆ ಮಾಡುವುದು ಯಾವುದೂ ನಿಲಯದಲ್ಲಿ ಕೂಡದು. ಸಾಧು ಜೀವನವನ್ನು ಬೆಳಗಿಸುವ ಸರಳ ಆಹಾರ ಇದ್ದೀತು. ಪ್ರಾರ್ಥನೆ ನಡೆದೀತು, ಕೂಡಲು ಮಲಗಲು ನಿಯಮ ಇದ್ದಾವು.

ಆದರ್ಶ ವಿದ್ಯಾರ್ಥಿನಿಲಯ ಬ್ರಹ್ಮಚರ್ಯಾಶ್ರಮವಾದೀತು. ವಿದ್ಯಾರ್ಥಿ ಎಂಬುದು ಹೊಸಕಾಲದ ಮಾತು. ವಿದ್ಯಾರ್ಥಿಗೆ ನಿಜವಾದ ಶಬ್ದ ಬ್ರಹ್ಮಚಾರಿ. ವಿದ್ಯಾಭ್ಯಾಸದ ಕಾಲದಲ್ಲಿ ಬ್ರಹ್ಮಚರ್ಯ ಅತ್ಯಗತ್ಯ. ಈಗಿನ ಭಿನ್ನ ಭಿನ್ನ ಸ್ಥಿತಿಯಲ್ಲಿ, ಮದುವೆಯಾದ ಹುಡುಗರು ವಿದ್ಯಾರ್ಥಿನಿಲಯದಲ್ಲಿದ್ದರೆ ಅವರೂ ವಿದ್ಯಾಭ್ಯಾಸ ಮುಗಿಯುವವರೆಗೆ ಬ್ರಹ್ಮಚರ್ಯವನ್ನು ಪಾಲಿಸಬೇಕೆಂದು,

ವಿದ್ಯಾಭ್ಯಾಸದ ಸಮಯದಲ್ಲಿ ಅವರು ಹೆಂಡತಿಯನ್ನು ಬಿಟ್ಟು ಬೇರೆ ಇರಬೇಕೆಂದು ನಾನು ಬಯಸುತ್ತೇನೆ.

ನೆನಪಿರಲಿ, ನಾನು ವರ್ಣಿಸಿದ್ದು ಆದರ್ಶ ವಿದ್ಯಾರ್ಥಿನಿಲಯ. ಎಲ್ಲ ವಿದ್ಯಾರ್ಥಿನಿಲಯಗಳೂ ಈ ಮಟ್ಟಕ್ಕೆ ಬರಲಾರವೆಂಬುದು ಅರಿಯ ಬೇಕಾದ ಮಾತೇ. ಆದರೆ ಆದರ್ಶ ಸರಿ ಎಂದರೆ ಎಲ್ಲಾ ವಿದ್ಯಾರ್ಥಿನಿಲಯಗಳೂ ಆ ಒರೆಗಲ್ಲಿಗೆ ತಕ್ಕಂತೆ ನಡೆಯಬೇಕು.

ವಿದ್ಯಾಲಯಕ್ಕಿಂತ ನಾನು ವಿದ್ಯಾರ್ಥಿನಿಲಯಕ್ಕೆ ಹೆಚ್ಚು ಮಹತ್ತ್ವ ಕೊಡುತ್ತೇನೆ. ಶಾಲೆಯಲ್ಲಿ ಸಿಗಲಾರದ ಅನೇಕ ವಿದ್ಯೆ ವಿದ್ಯಾರ್ಥಿನಿಲಯದಲ್ಲಿ ಸಿಗುತ್ತವೆ. ಇದರಲ್ಲಿ ವಿದ್ಯಾರ್ಥಿಗಳ ಮನಸ್ಸಿಗೆ ಸಿಗುವ ಬಲ ಶಾಲೆಯಲ್ಲಿ ಸಿಗದು. ನನ್ನ ಕಲ್ಪನೆ ವಿದ್ಯಾರ್ಥಿನಿಲಯವೇ ವಿದ್ಯಾಲಯವಾಗಬೇಕು.(೪೨)

## ಆದರ್ಶ ಬಾಲಮಂದಿರ

ಮಕ್ಕಳ ಶಿಕ್ಷಣದ ವಿಷಯ ಸುಲಭಾತಿಸುಲಭವಾಗಬೇಕು. ಆದರೆ ಬಹಳ ಕಠಿಣವಾಗಿದೆ ಈಗ. ನಾವು ಬಯಸಲಿ ಬಿಡಲಿ ಮಕ್ಕಳು ಒಳ್ಳೆಯದೋ ಕೆಟ್ಟದೋ ಶಿಕ್ಷಣ ಪಡೆಯುತ್ತಿದ್ದಾರೆ. ಮಕ್ಕಳು ಎಂದರೆ ಹತ್ತುವರ್ಷದ ಒಳಗಿನ ಹುಡುಗ ಹುಡುಗಿಯರು.

ಶಿಕ್ಷಣ ಎಂದರೆ ಬರೀ ಅಕ್ಷರಜ್ಞಾನವಲ್ಲ. ಅಕ್ಷರಜ್ಞಾನ ಶಿಕ್ಷಣಕ್ಕೆ ಸಾಧನಮಾತ್ರ. ಮನಸ್ಸಿನಿಂದ ಹಿಡಿದು ಎಲ್ಲಾ ಇಂದ್ರಿಯಗಳಿಂದಲೂ ಒಳ್ಳೆಯ ಕೆಲಸ ಮಾಡುವುದನ್ನು ಕಲಿಯುವುದೇ ಶಿಕ್ಷಣ. ಕೈಯಿಂದ ಕಳ್ಳತನ ಮಾಡಬಾರದು, ನೊಣ ಕೊಲ್ಲಬಾರದು, ತನ್ನ ಜೊತೆಯ ಚಿಕ್ಕ ಮಕ್ಕಳನ್ನು ಹೊಡೆಯಬಾರದು ಎಂಬ ಅರಿವು ಯಾವ ಮಗುವಿಗೆ ದೊರೆಯುತ್ತದೆಯೋ ಆ ಮಗುವಿನ ಶಿಕ್ಷಣ ಪ್ರಾರಂಭವಾಯಿತು. ತನ್ನ ಮೈ, ತನ್ನ ಹಲ್ಲು ನಾಲಗೆ ಕಿವಿ ಮೂಗು ಕಣ್ಣು ತಲೆ ಉಗುರು ಎಲ್ಲವನ್ನೂ ಚೊಕ್ಕಟವಾಗಿಟ್ಟುಕೊಳ್ಳುವುದು ಅಗತ್ಯ ಎನಿಸಿದರೆ ಮಗುವಿಗೆ, ಚೊಕ್ಕಟವಾಗಿಟ್ಟುಕೊಂಡರೆ, ಅದರ ಶಿಕ್ಷಣ ಆರಂಭವಾಯಿತೆಂದು ತಿಳಿಯಬಹುದು. ಊಟ ಮಾಡುವಾಗ ಚಂಡಿ ಮಾಡದೆ ಒಂಟಿಯಾಗಿಯೋ ಇತರರ ಜೊತೆಯಲ್ಲೋ ಕೂತು ನಿಯಮಪ್ರಕಾರವಾಗಿ ಊಟ ಮಾಡುವ ಮಗು, ಸರಿಯಾಗಿ ಕೂತು ಊಟದಲ್ಲಿ ಶುದ್ಧ—ಅಶುದ್ಧ ಪದಾರ್ಥಗಳನ್ನು ಅರಿತ ಮಗು, ತಿಂಡಿಪೋತನಾಗಿ ಕೂರಿ ತುರುಕಿ

ಕೊಳ್ಳದ ಮಗು, ತಾನೇ ಯಾವುದನ್ನೂ ಬೇಡದೆ ಬಡಿಸಿದುದನ್ನು ತಿಂದು ಬಡಿಸದಿದ್ದರೆ ಗದ್ದಲ ಮಾಡದೆ ತಿನ್ನುವ ಮಗು ಆಗಲೇ ಶಿಕ್ಷಣದಲ್ಲಿ ಉನ್ನತಿ ಪಡೆದಿದಾನೆ. ಯಾರ ಉಚ್ಚಾರಣೆ ಶುದ್ಧವಾಗಿದೆಯೋ, ಇತಿಹಾಸ ಭೂಗೋಳ ಎಂಬ ಹೆಸರು ತಿಳಿಯದಿದ್ದರೂ ನೆರೆಹೊರೆಯ ಪ್ರದೇಶದ ಇತಿಹಾಸ-ಭೂಗೋಳ ಯಾರಿಗೆ ಗೊತ್ತಿದೆಯೋ, ದೇಶ ಎಂದರೆ ಏನೋ ಯಾರಿಗೆ ತಿಳಿದಿದೆಯೋ ಅಂಥ ಮಗು ಶಿಕ್ಷಣದ ದಾರಿಯಲ್ಲಿ ಸಾಕಷ್ಟು ದೂರ ಸಾಗಿ ಬಂದಿದಾನೆ. ನಿಜ ಯಾವುದು ಸುಳ್ಳು ಯಾವುದು, ಸಾರ ಯಾವುದು ಅಸಾರ ಯಾವುದು ಎಂಬ ಭೇದವನ್ನು ಅರಿಯಬಲ್ಲ ಮಗು, ಒಳ್ಳೆಯದನ್ನೇ ನಿಜವನ್ನೇ ಆರಿಸಿಕೊಂಡು, ಮೊಂಡತನವನ್ನು ಸುಳ್ಳನ್ನು ಬಿಟ್ಟ ಮಗು ಶಿಕ್ಷಣದಲ್ಲಿ ಬಹಳ ಮುಂಬರಿದಿದಾನೆ. ಇದನ್ನು ಬೆಳೆಸಬೇಕಾಗಿಲ್ಲ. ಉಳಿದ ಬಣ್ಣಗಳನ್ನು ಓದುಗರೇ ತುಂಬಿಕೊಳ್ಳ ಬಹುದು. ಒಂದು ಮಾತನ್ನು ಸ್ಪಷ್ಟವಾಗಿ ಹೇಳಬೇಕು. ಇದರಲ್ಲಿ ಎಲ್ಲೂ ಅಕ್ಷರಜ್ಞಾನ ಅಥವಾ ಲಿಪಿಜ್ಞಾನ ಅಗತ್ಯವಿದ್ದಂತೆ ಕಾಣಿಸದು. ಮಕ್ಕಳಿಗೆ ಲಿಪಿಯ ಜ್ಞಾನದ ಭಾರವನ್ನು ಹೊರಿಸುವುದು ಅವರ ಮನಸ್ಸು–ಇಂದ್ರಿಯಗಳ ಮೇಲೆ ಭಾರ ಹೊರಿಸಿದಂತೆ. ನಿಜವಾದ ಶಿಕ್ಷಣ ಪಡೆದ ಮಗು ಸಕಾಲದಲ್ಲಿ ಓದು–ಬರೆಹವನ್ನು ಕಲಿಯುತ್ತಾನೆ, ಆನಂದದಿಂದ ಕಲಿಯುತ್ತಾನೆ. ಈಗ ಮಕ್ಕಳಿಗೆ ಈ ಜ್ಞಾನ ಭಾರವಾಗಿದೆ. ಮಗು ಮುಂದೆ ಸಾಗಲು ಅನುಕೂಲವಾದ ಒಳ್ಳೆಯ ಸಮಯ ವ್ಯರ್ಥವಾಗಿ ಹೋಗುತ್ತದೆ. ಕಡೆಯಲ್ಲಿ ಅಂದವಾದ ಅಕ್ಷರ ಬರೆಯುವುದನ್ನು ಒಳ್ಳೇ ರೀತಿಯಲ್ಲಿ ಓದುವುದನ್ನು ಬಿಟ್ಟು ಕೋಳಿಯ ಕಾಲಿನ ಹಾಗೆ ಅಕ್ಷರ ಬರೆಯಲು ಕಲಿಯುತ್ತಾನೆ. ಚೆನ್ನಾಗಿ ಓದಲಾರ, ತಪ್ಪು ತಪ್ಪಾಗಿ ಓದುತ್ತಾನೆ. ಇದನ್ನು ಶಿಕ್ಷಣ ಎಂದರೆ ಶಿಕ್ಷಣಕ್ಕೆ ಅಪಚಾರಮಾಡಿ ದಂತೆ ಮಗು ಓದು–ಬರೆಹವನ್ನು ಕಲಿಯುವ ಮೊದಲೇ ಅವನಿಗೆ ಪ್ರಾಥಮಿಕ ಶಿಕ್ಷಣ ಸಿಗಬೇಕು. ಹಾಗೆ ಮಾಡಿದರೆ ಈ ಬಡದೇಶ ಅನೇಕ ಪಾಠಶಾಲೆಗಳ ಮಕ್ಕಳ ಪುಸ್ತಕಗಳ ವೆಚ್ಚವನ್ನೂ ಅನೇಕ ಕೆಡುಕುಗಳನ್ನೂ ತಪ್ಪಿಸಬಹುದು. ಬಾಲಬೋಧೆಯ ಪುಸ್ತಕ ಬೇಕು ಎಂದರೆ ಅದು ಶಿಕ್ಷಕರಿಗೆ ಕೈಪಿಡಿಯಾಗಿ ಇರಲಿ, ನಾನು ಹೇಳುವ ಮಕ್ಕಳಿಗೆ ಮಾತ್ರ ಎಂದಿಗೂ ಬೇಡ. ಹರಿಯುವ ನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತಿರದಿದ್ದರೆ, ನಮಗೆ ಈ ಮಾತು ದೀಪ ದಂತೆ ಸ್ಪಷ್ಟವಾಗಿ ತೋರಬೇಕು.

ಮೇಲೆ ಹೇಳಿದ ಶಿಕ್ಷಣವನ್ನು ಮಗು ಮನೆಯಲ್ಲೇ ಪಡೆಯಬಹುದು,

ಅದೂ ತಾಯಿಯ ಬಳಿಯಲ್ಲೇ. ಹಾಗೆ ಎಂಥದೋ ಒಂದು ಬಗೆಯ ಶಿಕ್ಷಣ ವನ್ನು ಮಕ್ಕಳು ತಾಯಿಯ ಮೂಲಕ ಕಲಿತೇ ಕಲಿಯುತ್ತಾರೆ. ಇವತ್ತು ನಮ್ಮ ಮನೆಗಳು ಅಸ್ತವ್ಯಸ್ತವಾಗಿವೆ. ತಂದೆತಾಯಿಗಳು ಹುಡುಗರ ಬಗ್ಗೆ ತಮ್ಮ ಧರ್ಮವನ್ನು ಮರೆತಿದಾರೆ. ಮಕ್ಕಳಿಗೆ ಕುಟುಂಬದಂಥ ಪರಿಸ್ಥಿತಿಯಲ್ಲಿ ಶಿಕ್ಷಣ ಸಿಗಬೇಕು. ಈ ಧರ್ಮವನ್ನು ತಾಯಂದಿರೇ ನಿರ್ವಹಿಸಬಲ್ಲವರು. ಆದ್ದರಿಂದ ಮಕ್ಕಳ ಶಿಕ್ಷಣ ಹೆಂಗಸರ ಕೈಯಲ್ಲೇ ಇರಬೇಕು. ಹೆಂಗಸು ತೋರಬಲ್ಲ ಪ್ರೇಮ–ಸ್ಥೈರ್ಯಗಳನ್ನು ಸಾಧಾರಣವಾಗಿ ಗಂಡಸು ಇಂದಿನವರೆಗೆ ತೋರಿಸಿಲ್ಲ. ಇವೆಲ್ಲ ನಿಜ ಎಂದರೆ ಮಕ್ಕಳ ಶಿಕ್ಷಣದ ಮಾತನ್ನು ಬಿಡಿಸುವಾಗ ಹೆಂಗಸರ ಶಿಕ್ಷಣದ ಮಾತು ತಾನೇ ಬಂದು ನಿಲ್ಲುತ್ತದೆ. ನಿಜವಾದ ಬಾಲಶಿಕ್ಷಣವನ್ನು ಕೊಡಬಲ್ಲ ತಾಯಂದಿರು ಸಿದ್ಧವಾಗದಿರುವವರೆಗೆ, ನೂರಾರು ಶಾಲೆಗಳಿಗೆ ಹೋದರೂ ಮಕ್ಕಳು ಅಶಿಕ್ಷಿತರಾಗಿಯೆ ಇದ್ದಾರು ಎನ್ನಲು ನನಗೆ ಎಳ್ಳಷ್ಟೂ ಸಂಕೋಚವಿಲ್ಲ.

ಮಕ್ಕಳ ಶಿಕ್ಷಣದ ಕೆಲವು ರೂಪರೇಖೆಗಳನ್ನು ತೋರಿಸುತ್ತೇನೆ. ತಾಯಿ ಯಂಥ ಒಬ್ಬ ಹೆಂಗಸಿನ ಕೈಗೆ ಐವರು ಮಕ್ಕಳು ಬಂದರೆನ್ನಿ. ಅವರಿಗೆ ಓಡಾ ಡಲೂ ಬಾರದು. ಸಿಂಬಳವನ್ನು ತೆಗೆದು ಕಾಲಿಗೋ ಬಟ್ಟೆಗೋ ಒರಸುತ್ತಾರೆ. ಕಣ್ಣು ತುಂಬಾ ಕಿಸರು, ಕಿವಿಯಲ್ಲಿ ಉಗುರಿನಲ್ಲಿ ಕೊಳೆ, ಕೂಡು ಎಂದರೆ ಕಾಲು ಚಾಚಿ ಕೂಡುತ್ತವೆ. ಮಾತಾಡಿದರೆ ಸುತ್ತಲೂ ಉಗುಳಿನ ತುಂತುರು. ಹ ಎನ್ನಲು ಅ ಎನ್ನುತ್ತವೆ. ನಾನು ಎನ್ನಲು ನಾವು ಎನ್ನುತ್ತವೆ. ಪೂರ್ವ ಪಶ್ಚಿಮ ದಕ್ಷಿಣ ಉತ್ತರಗಳ ನೆಲೆಯೆ ತಿಳಿಯದು, ಬಟ್ಟೆಯೆಲ್ಲ ಕೊಳಕು, ಗುಪ್ತ ಇಂದ್ರಿಯವನ್ನು ಮರೆ ಮಾಡಿಲ್ಲ, ಮೇಲಿಂದ ಮೇಲೆ ಅದನ್ನು ಮುಟ್ಟಿ ಕೊಳ್ಳುತ್ತಾರೆ. ಜೇಬಿನಲ್ಲಿ ತಿಂಡಿ ತುರುಕಿಕೊಂಡು ಆಗಾಗ ತೆಗೆದು ಬಾಯಿಗೆ ಹಾಕಿಕೊಳ್ಳುತ್ತಾರೆ. ಅದರಲ್ಲಿ ಸ್ವಲ್ಪವನ್ನು ನೆಲದ ಮೇಲೆ ಚೆಲ್ಲುತ್ತಾರೆ. ಕೈ ಅಂಟು ಮಾಡಿಕೊಳ್ಳುತ್ತಾರೆ, ತಲೆಯ ಮೇಲಿನ ಟೋಪಿಯ ಅಂಚೆಲ್ಲ ಕೊಳೆ ಯಿಂದ ಕಪ್ಪಾಗಿದೆ. ದುರ್ವಾಸನೆ ಹೊಡೆಯುತ್ತಿದೆ. ಈ ಮಕ್ಕಳನ್ನು ಸಂಬಾಳಿ ಸುವ ಹೆಂಗಸಿಗೆ ತಾಯಿಯ ಭಾವನೆ ಇದ್ದರೇನೇ ಆಕೆ ಅವರಿಗೆ ಶಿಕ್ಷಣ ಕೊಡ ಬಲ್ಲಳು. ಮೊಟ್ಟಮೊದಲನೆ ಪಾಠ ಅವರಿಗೆ ರೀತಿಯನ್ನು ಕಲಿಸುವುದು. ತಾಯಿ ಪ್ರೀತಿಯಿಂದ ಅವರನ್ನು ಮೀಯಿಸಿಯಾಳು, ಕೆಲವು ದಿನ ಅವರನ್ನು ನಗಿಸು ತ್ತಿದ್ದಾಳು .ಇಂದಿನವರೆಗೆ ತಾಯಂದಿರು ಮಾಡಿದ ಹಾಗೆ, ಕೌಸಲ್ಯೆ ಶ್ರೀರಾಮ

ನಿಗೆ ಮಾಡಿದಂತೆ, ಹಲವು ಬಗೆಯಲ್ಲಿ ತಾಯಿ ಮಕ್ಕಳನ್ನು ಪ್ರೇಮಪಾಶದಲ್ಲಿ ಬಿಗಿದಾಳು. ಅವರನ್ನು ಹೇಗೆ ಕುಣಿಸಬೇಕೋ ಹಾಗೆ ಕುಣಿಯಲು ಕಲಿಸಿಯಾಳು. ಎಲ್ಲಿಯವರೆಗೆ ತಾಯಿಗೆ ಇದು ಸಾಧಿಸದೋ ಅಲ್ಲಿಯವರೆಗೆ ಹಿಂದೆ ಬಿದ್ದ ಕರುವಿನ ಹಿಂದೆ ಆಕಳು ದುಃಖದಿಂದ ಅತ್ತಿತ್ತ ಹೇಗೆ ಓಡುತ್ತದೆಯೋ ಹಾಗೇ ಈ ಮಕ್ಕಳಿಗಾಗಿ ಕಸಿವಿಸಿಗೊಂಡಾಳು. ಈ ಮಕ್ಕಳು ತಮ್ಮ ಪಾಡಿಗೆ ತಾವೇ ಸ್ವಚ್ಛವಾಗಿರಲಾರದವರೆಗೆ, ಅವರ ಹಲ್ಲು ಕಣ್ಣು ಕಿವಿ ಮೂಗು ಕೈ ಕಾಲು ಹೇಗಿರಬೇಕೋ ಹಾಗಿಲ್ಲದಿರುವವರೆಗೆ, ಅವರ ದುರ್ಗಂಧದ ಬಟ್ಟೆ ಬದಲಾಗದಿರುವವರೆಗೆ, ಅವರ ಉಚ್ಚಾರಣೆ ಶುದ್ಧವಾಗದಿರುವವರೆಗೆ ಆಕೆಗೆ ಸಮಾಧಾನವಿಲ್ಲ. ಇಷ್ಟೆಲ್ಲ ಸಾಧಿಸಿದ ಮೇಲೆ ತಾಯಿ ಮಕ್ಕಳಿಗೆ ಮೊದಲು ರಾಮನಾಮವನ್ನು ಹೇಳಿಕೊಟ್ಟಾಳು. ಧರ್ಮದ ತರುವಾಯ ಅರ್ಥದ್ದು ಸ್ಥಾನ. ಈಗ ಅಂಕಗಣಿತವನ್ನು ಮೊದಲಿಡುತ್ತಾಳೆ. ಮಗ್ಗಿ ಗಟ್ಟಿಮಾಡಿಸಿ ಕೂಡುವುದು ಕಳೆಯುವುದನ್ನು ಬಾಯಿಂದ ಹೇಳಿಕೊಟ್ಟಾಳು. ತಾವು ಎಲ್ಲಿದೇವೆ ಎಂಬುದು ಮಕ್ಕಳಿಗೆ ತಿಳಿಯಬೇಡವೆ? ಆದ್ದರಿಂದ ನೆರೆ ಹೊರೆಯ ಹಳ್ಳ–ತಿಟ್ಟು, ಗುಡ್ಡ ಬೆಟ್ಟ, ಮನೆ ಮಠ, ಗುಡಿಗೋಪುರಗಳನ್ನು ತೋರಿಸಿಯಾಳು. ಹಾಗೆ ಮಾಡುಮಾಡುತ್ತ ಅವರಿಗೆ ದಿಕ್ಕಿನ ಜ್ಞಾನ ಆದೀತು. ಮಕ್ಕಳಿಗೆ ತಮ್ಮ ಬಗ್ಗೆ ಹೆಚ್ಚು ತಿಳಿವಳಿಕೆ ನೀಡಿಯಾಳು. ಈ ಕಲ್ಪನೆಯಲ್ಲಿ ಇತಿಹಾಸ ಭೂಗೋಳ ಪ್ರತ್ಯೇಕ ವಿಷಯುಗಳಲ್ಲ. ಎರಡನ್ನೂ ಕಲೆಗಳ ಮೂಲಕ ತಿಳಿಸಿಯಾಳು. ಇಷ್ಟರಿಂದ ತಾಯಿಗೆ ಸಂತೋಷವಾಗದು. ಹಿಂದೂ ತಾಯಿ ಮಕ್ಕಳಿಗೆ ಚಿಕ್ಕಂದಿನಿಂದಲೇ ಸಂಸ್ಕೃತದ ಧ್ವನಿಯನ್ನು ರೂಢಿಗೊಳಿಸಿಯಾಳು. ಅದಕ್ಕಾಗಿ ದೇವರ ಸ್ತೋತ್ರಗಳನ್ನು ತಾನು ಬಾಯಿಪಾಠ ಮಾಡಿಯಾಳು, ಅವರಿಗೆ ಮಾಡಿಸಿಯಾಳು. ಮಕ್ಕಳಿಗೆ ಶುದ್ಧ ಉಚ್ಚಾರಣೆ ಕಲಿಸಿಯಾಳು. ದೇಶಪ್ರೇಮಿ ಮಾತೆ ಅವರಿಗೆ ಹಿಂದೀ ಕಲಿಸಿಯಾಳು. ಮಕ್ಕಳನ್ನು ದ್ವಿಭಾಷಿಗಳಾಗಿ ಮಾಡಿಯಾಳು. ಇಷ್ಟಾದರೂ ಅಕ್ಷರ ಜ್ಞಾನ ಕಲಿಸಲಿಕ್ಕಿಲ್ಲ. ಆದರೆ ಮಕ್ಕಳ ಕೈಗೆ ಕುಂಚವನ್ನು ಕೊಟ್ಟಾಳು. ರೇಖಾಗಣಿತದ ಆಕೃತಿಗಳನ್ನು ಬರೆಸಿಯಾಳು; ಸರಳರೇಖೆ, ವೃತ್ತಗಳನ್ನು ಕಲಿಸಿಯಾಳು. ಮಗುವಿಗೆ ಹೂವನ್ನು ಬರೆಯಲು ಬಾರದಿದ್ದರೆ, ಒಂದು ಲೋಟಾದ ಚಿತ್ರ ಬರೆಯಲು ಬಾರದಿದ್ದರೆ, ತ್ರಿಕೋಣದ ಚಿತ್ರವನ್ನು ಬರೆಯಲು ಬಾರದಿದ್ದರೆ, ಆ ಮಗುವಿಗೆ ಇನ್ನೂ ಶಿಕ್ಷಣ ಸಾಲದು ಎನ್ನುತ್ತಾಳೆ ತಾಯಿ. ಸಂಗೀತ ಬಾರದೆ ಮಕ್ಕಳನ್ನು ಬಿಡಲಿಕ್ಕೇ ಇಲ್ಲ. ಸರಿದನಿಯಿಂದ ಒಟ್ಟಾಗಿ

ರಾಷ್ಟ್ರೀಯ ಗೀತೆಗಳನ್ನು ಭಜನೆಯನ್ನು ಹೇಳಲು ಅವರಿಗೆ ಬಾರದಿದ್ದರೆ ಆಕೆಗೆ ಸಹನವಾಗದು. ತಾಳಬದ್ಧವಾಗಿ ಹಾಡಲು ಅವರಿಗೆ ಕಲಿಸಿಕೊಟ್ಟಾಳು. ಸಾಧ್ಯವಿದ್ದರೆ ಅವರ ಕೈಗೆ ಒಂದು ಏಕನಾದವನ್ನು ಕೊಟ್ಟಾಳು, ತಾಳಗಳನ್ನು ಕೊಟ್ಟಾಳು, ಕೋಲಾಟವನ್ನು ಹೇಳಿಕೊಟ್ಟಾಳು. ಅವರ ಮೈಯನ್ನು ಗಟ್ಟಿಮುಟ್ಟಾಗಿಸಲು ಅವರಿಗೆ ವ್ಯಾಯಾಮ ಮಾಡಿಸಿಯಾಳು, ಓಡಿಸಿಯಾಳು, ನೆಗೆಸಿಯಾಳು. ಮಕ್ಕಳಿಗೆ ಸೇವಾಭಾವ ಕಲಿಸಬೇಕು, ಕೈಗಾರಿಕೆ ಕಲಿಸಬೇಕು. ಅದಕ್ಕಾಗಿ ಹತ್ತಿಯನ್ನು ಆರಿಸಿ ಬಿಡಿಸಿ ಕಾಳರೆದು ಅರಳೆಯನ್ನು ಹಿಂಜಿ ನೂಲನ್ನು ತೆಗೆಯುವ ಎಲ್ಲಾ ಕ್ರಿಯೆಗಳನ್ನೂ ಕಲಿಸಿಯಾಳು. ಹುಡುಗರು ಆಡಾಡುತ್ತ ಅರ್ಧ ಗಂಟೆ ನೂತುಬಿಟ್ಟಾರು.

ಈಗ ನಮಗೆ ಸಿಗುವ ಪಾಠ್ಯಪುಸ್ತಕಗಳು ಹೆಚ್ಚಾಗಿ ಈ ಕ್ರಮಕ್ಕೆ ನಿಷ್ಪ್ರಯೋಜಕ. ಪ್ರತಿಯೊಬ್ಬ ತಾಯಿಗೂ ಆಕೆಯ ಪ್ರೇಮವೇ ಹೊಸ ಪುಸ್ತಕವನ್ನು ಕೊಡುತ್ತದೆ. ಹಳ್ಳಿ ಹಳ್ಳಿಯಲ್ಲೂ ಹೊಸ ಇತಿಹಾಸ ಭೂಗೋಳ ಇವೆ. ಗಣಿತದ ಪ್ರಶ್ನೆಗಳೂ ಹೊಸ ಹೊಸವೇ. ಭಾವನಾಪೂರ್ಣ ತಾಯಿ ದಿನವೂ ಸಿದ್ಧತೆ ಮಾಡಿಕೊಂಡು ಕಲಿಸಿಯಾಳು, ತನ್ನ ಪುಸ್ತಕದಲ್ಲಿ ಹೊಸ ಮಾತು ಹೊಸ ಪ್ರಶ್ನೆಗಳನ್ನು ಗುರುತು ಹಾಕಿಕೊಂಡು ಮಕ್ಕಳಿಗೆ ಕಲಿಸಿಯಾಳು.

ಈ ಪಾಠ್ಯಕ್ರಮವನ್ನು ಲಂಬಿಸುವ ಕಾರಣವಿಲ್ಲ. ಇದರಿಂದ ಪ್ರತಿ ಮೂರು ತಿಂಗಳ ಕ್ರಮವನ್ನು ಸಿದ್ಧಗೊಳಿಸಬಹುದು. ಮಕ್ಕಳು ಬೇರೆ ಬೇರೆ ವಾತಾವರಣದಲ್ಲಿ ಬೆಳೆದಿರುತ್ತಾರೆ. ಅವರೆಲ್ಲರಿಗೂ ಒಂದೇ ಕ್ರಮ ಸಾಧ್ಯವಿಲ್ಲ. ಆಗಾಗ ಮಕ್ಕಳು ಎದುರುಕಲಿತು ಬರುತ್ತಾರೆ—ತಪ್ಪನ್ನು. ಅದನ್ನು ಮರೆಯಿಸುವುದು ಮೊದಲನೆ ಕೆಲಸ. ಆರೇಳು ವರ್ಷದ ಹುಡುಗ ಹೇಗೆ ಹೇಗೋ ಅಕ್ಷರ ಬರೆಯುತ್ತಿದ್ದರೆ, ಅರ್ಥ ತಿಳಿಯದಿದ್ದರೂ ಓದುವ ರೂಢಿ ಇದ್ದರೆ, ತಾಯಿ ಅದನ್ನು ಬಿಡಿಸಿಯಾಳು. ಓದಿನಿಂದಲೇ ಮಕ್ಕಳಿಗೆ ಜ್ಞಾನ ಎಂಬ ಭ್ರಮೆ ಆಕೆಯ ಮನಸ್ಸಿನಿಂದ ಹೋಗುವವರೆಗೆ ಆಕೆ ಮುಂಬರಿಯಲಾರಳು. ಜೀವನದಲ್ಲಿ ಅಕ್ಷರ ಜ್ಞಾನವನ್ನೇ ಪಡೆಯದಿದ್ದವರೂ ಕೂಡ ವಿದ್ವಾಂಸರಾಗಬಹುದು ಎಂಬ ಮಾತು ಸುಲಭವಾಗಿ ತಿಳಿಯುತ್ತದೆ.

ಶಿಕ್ಷಿಕೆಯೆಂಬ ಮಾತನ್ನೆ ಇಲ್ಲಿ ನಾನು ಬಳಸಿಲ್ಲ. ಶಿಕ್ಷಿಕೆಯೆಂದರೆ ತಾಯಿ, ತಾಯಿಯ ಸ್ಥಾನವನ್ನು ತೆಗೆದುಕೊಳ್ಳಲಾರದವಳು ಶಿಕ್ಷಿಕೆ ಆಗಲೇ ಆರಳು. ಮಗುವಿಗೆ ತಾನು ಶಿಕ್ಷಣ ಪಡೆಯುತ್ತಿದ್ದೇನೆ ಎನಿಸಬಾರದು. ಯಾವ ಮಗುವಿನ

ಮೇಲೆ ತಾಯಿಯ ಕಣ್ಣು ಇರುತ್ತದೆಯೋ ಅವರು ಇಪ್ಪತ್ನಾಲ್ಕು ಗಂಟೆಯೂ ಶಿಕ್ಷಣ ಪಡೆಯುತ್ತಾರೆ. ಆರಾರು ಗಂಟೆ ಶಾಲೆಯಲ್ಲಿ ಕೂತು ಬರುವ ಹುಡುಗ ಏನೂ ಕಲಿಯದಿರಲೂಬಹುದು. ಈಗಿನ ಅಸ್ತವ್ಯಸ್ತ ಜೀವನದಲ್ಲಿ ಶಿಕ್ಷಿಕೆಯರು ಸಿಗದಿರಬಹುದು. ಸದ್ಯ ಗಂಡಸರ ಮೂಲಕವೇ ಮಕ್ಕಳ ಶಿಕ್ಷಣ ಪಡೆಯಲಿ. ಅವರೇ ಈಗ ತಾಯಿಯ ಸ್ಥಾನವನ್ನು ವಹಿಸಬೇಕು. ಆದರೆ ಕಡೆಯಲ್ಲಿ ತಾಯಂದಿರೇ ಇದಕ್ಕೆ ಸಿದ್ಧರಾಗಬೇಕು. ನನ್ನ ಕಲ್ಪನೆ ಸರಿಯಿದ್ದರೆ, ಯಾವ ತಾಯಿಯಾದರೂ ಸ್ವಲ್ಪ ನೆರವು ದೊರೆತರೆ, ಅಕೆಗೆ ಪ್ರೇಮವಿದ್ದರೆ, ಸಿದ್ಧಳಾಗ ಬಹುದು. ತಾನು ಸ್ವಯಂ ಸಿದ್ಧಳಾಗುತ್ತಾ ಮಕ್ಕಳನ್ನೂ ಸಿದ್ಧಗೊಳಿಸಬಲ್ಲಳು.

೧೪೩

## ಕಾಮವಿಜ್ಞಾನ

ಗುಜರಾತಿನಲ್ಲೇನು ಬೇರೆ ಪ್ರಾಂತಗಳಲ್ಲೇನು, ಕಾಮದೇವ ತನ್ನ ರೂಢಿ ಯಂತೆ ವಿಜಯಯಾತ್ರೆ ಮಾಡುತ್ತಲೇ ಇದಾನೆ. ಇತ್ತೀಚೆಗೆ ಅವನ ವಿಜಯ ದಲ್ಲಿ ಒಂದು ವೈಶಿಷ್ಟ್ಯವಿದೆ. ಅವನನ್ನು ಶರಣು ಹೋಗುವ ಗಂಡಸರು ಹೆಂಗ ಸರು ಹಾಗೆ ಮಾಡುವುದು ತಮ್ಮ ಧರ್ಮವೆಂದು ತಿಳಿದಿದಾರೆ. ಗುಲಾಮ ತನ್ನ ಸಂಕೋಲೆಗಳನ್ನು ಒಡವೆಯೆಂದು ತಿಳಿದು ನಸುನಗುತ್ತಾನೋ ಆಗ ಅವರ ಒಡೆಯನಿಗೆ ಪೂರಾ ಗೆಲವು ಆಯಿತು. ಹೀಗೆ ಕಾಮದೇವ ಗೆಲ್ಲುತ್ತ ಹೋಗು ವುದನ್ನು ನೋಡಿಯೂ ಈ ಗೆಲವು ಕ್ಷಣಿಕ, ತುಚ್ಛ, ಕಟ್ಟಕಡೆಗೆ ಕೊಂಡಿ ಯಿಂದ ಕುಟುಕಿದ ಮೇಲೆ ಚೇಳು ನಿಸ್ತೇಜವಾಗಿ ಬೀಳುವ ಹಾಗೆ ನಿರ್ವೀರ್ಯ ವಾಗುತ್ತದೆ ಎಂದು ನನ್ನ ದೃಢ ವಿಶ್ವಾಸ. ಆದರೆ ಹಾಗೆ ಆಗಬೇಕಾದರೆ ನಮ್ಮ ಪುರುಷಾರ್ಥ, ಪ್ರಯತ್ನ ಅತ್ಯಗತ್ಯ, ಕಾಮದೇವ ಹೇಗೂ ಕಟ್ಟಕಡೆ ಯಲ್ಲಿ ಸೋಲೇ ಸೋಲುತ್ತಾನೆ. ಆದ್ದರಿಂದ ನಾವು ಸುಮ್ಮನೆ ಇದ್ದರಾ ಯಿತು ಎಂಬುದಲ್ಲ ನನ್ನ ಅರ್ಥ. ಕಾಮದೇವನನ್ನು ಗೆಲ್ಲುವುದು ಸ್ತ್ರೀ ಪುರು ಷರ ಪರಮಕರ್ತವ್ಯಗಳಲ್ಲಿ ಒಂದು.

ಹಾಗಾದರೆ ಕಾಮಶಾಸ್ತ್ರಕ್ಕೆ ನಮ್ಮ ಓದಿನಲ್ಲಿ ಸ್ಥಾನವಿದೆಯೆ? ಇದ್ದರೆ ಎಲ್ಲಿದೆ? ಇದು ಪ್ರಶ್ನೆ, ಕಾಮಶಾಸ್ತ್ರ ಎರಡು ಬಗೆ. ಒಂದು ಕಾಮದೇವ ನನ್ನು ಗೆಲ್ಲುವ ಶಾಸ್ತ್ರ. ಅದಕ್ಕೆ ಶಿಕ್ಷಣ ಕ್ರಮದಲ್ಲಿ ಸ್ಥಾನವಿದ್ದೇ ಇರಬೇಕು. ಇನ್ನೊಂದು ಕಾಮವನ್ನು ದೊಡ್ಡ ಶತ್ರುವೆಂದು ತಿಳಿದಿದೆ. ಕ್ರೋಧದ್ದು ಎರಡ ನೆಯ ಸ್ಥಾನ. ಕಾಮದಿಂದಲೇ ಕ್ರೋಧ ಹುಟ್ಟುತ್ತದೆ ಎಂದು ಗೀತೆ ಹೇಳು

ತ್ತದೆ. ಅಲ್ಲಿ ಕಾಮಕ್ಕೆ ವ್ಯಾಪಕ ಅರ್ಥವನ್ನು ಕೊಟ್ಟಿದೆ. ನಮ್ಮ ಚರ್ಚೆಯಲ್ಲಿ ಕಾಮಕ್ಕೆ ಪ್ರಚಲಿತ ಅರ್ಥವನ್ನೆ ಕೊಟ್ಟಿದೆ.

ಹುಡುಗ ಹುಡುಗಿಯರಿಗೆ ಜನನೇಂದ್ರಿಯಗಳ ಬಗ್ಗೆ, ಜನನೇಂದ್ರಿಯ ವ್ಯಾಪಾರದ ಬಗ್ಗೆ ತಿಳಿಸಿಹೇಳಬೇಕೆ, ಬೇಡವೆ? ಒಂದು ಮಿತಿಯವರೆಗೆ ಹೇಳಬೇಕು ಎನಿಸುತ್ತದೆ ನನಗೆ. ಇದು ಅಗತ್ಯ. ಶುದ್ಧ ಜ್ಞಾನ ತಿಳಿಯದುದರಿಂದ ಹುಡುಗ ಹುಡುಗಿಯರು ಅಶುದ್ಧ ಜ್ಞಾನ ಪಡೆದು ತಮ್ಮ ಇಂದ್ರಿಯಗಳನ್ನು ಸಾಕಷ್ಟು ದುರುಪಯೋಗಗೊಳಿಸುವುದನ್ನು ನೋಡುತ್ತೇವೆ. ಕಣ್ಣಿದ್ದೂ ನಾವು ನೋಡದಿದ್ದರೆ ಕಾಮವನ್ನು ಗೆಲ್ಲಲು ಸಾಧ್ಯವಿಲ್ಲ. ಹುಡುಗ ಹುಡುಗಿಯರಿಗೆ ಜನನೇಂದ್ರಿಯದ ಉಪಯೋಗ–ದುರುಪಯೋಗಗಳನ್ನು ತಿಳಿಸಿ ಹೇಳುವುದು ಅಗತ್ಯ ಎಂದು ನಾನು ತಿಳಿದಿದೇನೆ. ನನ್ನ ಕೈಗೆಬಂದ ಹುಡುಗ ಹುಡುಗಿಯರಿಗೆ ಈ ಬಗೆಯ ಅರಿವನ್ನು ಕೊಡಲು ನಾನು ಪ್ರಯತ್ನ ಮಾಡಿದೇನೆ.

ಆದರೆ ಈ ಶಿಕ್ಷಣವನ್ನು ಕೊಡುವ ದೃಷ್ಟಿಯೇ ಬೇರೆ. ಹೀಗೆ ಇಂದ್ರಿಯಗಳ ಜ್ಞಾನವನ್ನು ಮಾಡಿಕೊಡುವಾಗ ಸಂಯಮವನ್ನು ಕಲಿಸುತ್ತಾರೆ, ಕಾಮವನ್ನು ಹೇಗೆ ಗೆಲ್ಲಬೇಕೋ ಕಲಿಸುತ್ತಾರೆ. ಈ ಜ್ಞಾನವನ್ನು ಕೊಡುವಾಗಲೇ ಮನುಷ್ಯನಿಗೂ ಪಶುಗಳಿಗೂ ಇರುವ ಭೇದವನ್ನು ತಿಳಿಸುವುದೂ ಅಗತ್ಯ. ಹೃದಯ - ಬುದ್ಧಿ ಇರುವವನು ಮನುಷ್ಯ. ಇದು ಮನುಷ್ಯ ಶಬ್ದದ ಧಾತ್ವರ್ಥ. ಹೃದಯವನ್ನು ಎಚ್ಚರಿಸುವುದೆಂದರೆ ಆತ್ಮವನ್ನು ಎಚ್ಚರಿಸುವುದು. ಬುದ್ಧಿಯನ್ನು ಜಾಗ್ರತೆ ಗೊಳಿಸುವುದೆಂದರೆ ಸಾರ—ಅಸಾರದ ಭೇದವನ್ನು ತಿಳಿಸುವುದು. ಇದನ್ನು ಕಲಿಸುತ್ತ ಕಾಮದೇವನನ್ನು ಹೇಗೆ ಗೆಲ್ಲಬೇಕೋ ಕಲಿಸಬಹುದು.

ಈ ಒಳ್ಳೆಯ ಶಾಸ್ತ್ರವನ್ನು ಯಾರು ಕಲಿಸಬೇಕು? ಜ್ಯೋತಿಷ್ಯವನ್ನು ಖಗೋಳವನ್ನು ಕಲಿಸುವವನು ಆ ಶಾಸ್ತ್ರಗಳಲ್ಲಿ ಪಾರಂಗತನಾಗಿರಬೇಕು. ಅದೇ ರೀತಿ ಕಾಮಶಾಸ್ತ್ರವನ್ನು ಕಲಿಸುವವನು ಕಾಮವನ್ನು ಗೆದ್ದವನಾಗಬೇಕು. ಅವನ ಭಾಷೆಯಲ್ಲಿ ಸಂಸ್ಕಾರವಿದ್ದೀತು, ಬಲವಿದ್ದೀತು, ಬಾಳು ಇದ್ದೀತು. ಮಾಡದೆ ಆಡುವವನ ಮಾತು. ಮಾತಿನ ಹಿಂದೆ ಅನುಭವ–ಜ್ಞಾನವಿಲ್ಲದವನ ಮಾತು ಬರೀ ಮಣ್ಣು, ಜಡದಂತೆ. ಯಾರಮೇಲೂ ಅದು ಪ್ರಭಾವ ಬೀರಲಾರದು. ಅನುಭವ ಜ್ಞಾನವಿದ್ದವನ ಮಾತಿಗೆ ಮಾತ್ರವೇ ಫಲ.

ಈಗಿನ ನಮ್ಮ ಬಾಹ್ಯವ್ಯವಹಾರವೆಲ್ಲವೂ, ನಮ್ಮ ಓದು, ನಮ್ಮ ವಿಚಾರ ಎಲ್ಲವೂ ಕಾಮದ ಗೆಲವನ್ನೆ ತೋರಿಸುತ್ತಿವೆ. ಈ ತೊಡಕಿನಿಂದ ಬಿಡಿಸಿ ಕೊಳ್ಳುವ ಪ್ರಯತ್ನ ಮಾಡಬೇಕು. ಈ ಕೆಲಸ ಬಹಳ ಪ್ರಯಾಸದ ಕೆಲಸ. ಆದರೆ ಶಿಕ್ಷಣಶಾಸ್ತ್ರದ ಅನುಭವವುಳ್ಳ, ಕಾಮವನ್ನು ಗೆಲ್ಲುವ ಧರ್ಮವನ್ನೆ ಒಪ್ಪಿಕೊಂಡ ಗುಜರಾತಿಗಳು ಒಂದು ಹಿಡಿಯಷ್ಟೇ ಜನ ಆದರೂ, ಅವರ ಶ್ರದ್ಧೆ ಅಚಲವಾದರೆ ಅವರು ಸದಾ ಎಚ್ಚರದಿಂದ ಇದ್ದರೆ, ಸತತವೂ ಪ್ರಯತ್ನ ಮಾಡಿದರೆ, ಗುಜರಾತದ ಹುಡುಗ–ಹುಡುಗಿಯರಿಗೆ ಶುದ್ಧ ಜ್ಞಾನ ಲಭಿಸೀತು. ಅವರು ಕಾಮಜಾಲದಿಂದ ಬಿಡುಗಡೆ ಹೊಂದಿಯಾರು, ಬಲೆಗೆ ಬೀಳದಿದ್ದವರು ಬೀಳದೆ ಉಳಿದು ಕೊಂಡಾರು.೧೪೪

## ವಿಷಯ ವಾಸನೆಯ ವಿಕೃತಿ

ಶಿಕ್ಷಕರು ತಮ್ಮ ವಿದ್ಯಾರ್ಥಿನಿಯರೊಡನೆ ರಹಸ್ಯ ಸಂಬಂಧವನ್ನು ಇಡ ತೊಡಗಿದರೆ, ಆಮೇಲೆ ಅವರಲ್ಲಿ ಕೆಲವರು ಆ ಸಂಬಂಧಕ್ಕೆ ಮದುವೆಯ ರೂಪನ್ನು ಕೊಟ್ಟರೂ, ಅಂಥ ಸಂಬಂಧಗಳು ಪವಿತ್ರವಾಗುವುದಿಲ್ಲ, ಒಡ ಹುಟ್ಟಿದ ಅಣ್ಣ ತಂಗಿಯರಲ್ಲಿ ಗಂಡ–ಹೆಂಡತಿಯ ಸಂಬಂಧ ಹೇಗೆ ಕೂಡದೋ ಶಿಕ್ಷಕ–ಶಿಷ್ಯೆಯರಲ್ಲೂ ಹಾಗೇ ಈ ಸಂಬಂಧ ಕೂಡದು ಎಂದು ನನ್ನ ದೃಢ ಅಭಿಪ್ರಾಯ. ಈ ಸುವರ್ಣ ನಿಯಮವನ್ನು ಪೂರ್ಣವಾಗಿ ಪಾಲಿಸಲಾಗ ದಿದ್ದರೆ ಕಡೆಯಲ್ಲಿ ಆ ಶಿಕ್ಷಣ ಸಂಸ್ಥೆ ಹಾಳಾದೀತು, ಯಾವ ಹುಡುಗಿಯೂ ಶಿಕ್ಷಕರ ಪೀಡೆಯಿಂದ ಸುರಕ್ಷಿತವಾಗಿರಲಾರಳು. ಶಿಕ್ಷಕನ ಪದವಿ ದೊಡ್ಡದು, ಹುಡುಗರು ಹುಡುಗಿಯರು ಯಾವಾಗಲೂ ಅವರ ಪ್ರಭಾವದಲ್ಲಿಯೇ ಇರುತ್ತಾರೆ. ಶಿಕ್ಷಕನ ಮಾತನ್ನು ವೇದವಾಕ್ಯವೆಂದು ತಿಳಿಯುತ್ತಾರೆ. ಆದ್ದರಿಂದ ಶಿಕ್ಷಕ ಸ್ವಲ್ಪ ಮರ್ಯಾದೆ ಮೀರಿದರೂ ಅವರಿಗೆ ಸಂದೇಹ ಹುಟ್ಟದು. ಶರೀರದಿಂದ ಪ್ರತ್ಯೇಕವಾದ ಆತ್ಮಕ್ಕೆ ಎಲ್ಲಿ ಮನ್ನಣೆಯಿದೆಯೋ ಅಲ್ಲಿ ಈ ಬಗೆಯ ಸಂಬಂಧ ಅಸಹ್ಯವೆನಿಸುತ್ತದೆ, ಅಸಹ್ಯವೆನಿಸಬೇಕಾದ್ದೇ.೧೪೫

# ಪ್ರಸ್ತಾವನೆ

‘ ಇಂಡಿಯನ್ ಒಪಿನಿಯನ್ ’ (ದಕ್ಷಿಣ ಆಫ್ರಿಕ) ಓದುಗರಿಗಾಗಿ ‘ ಆರೋಗ್ಯ ಮಾರ್ಗ ’ ಎಂದು ನಾನು ೧೯೦೬ ರಲ್ಲಿ ಕೆಲವು ಲೇಖನಗಳನ್ನು ಬರೆದೆ. ಅದನ್ನು ಪುಸ್ತಕವಾಗಿ ಪ್ರಕಟಿಸಿತು. ಭಾರತದಲ್ಲಿ ಅದರ ಪರಿಚಯವಾಗಿತ್ತು, ಆದರೆ ಇಲ್ಲಿ ಪ್ರತಿಗಳು ಸಿಗುತ್ತಿರಲಿಲ್ಲ. ಸ್ವಾಮಿ ಅಖಂಡಾನಂದರು ಅದನ್ನು ಇಲ್ಲಿ ಪ್ರಕಟಿಸಲು ಅನುಮತಿ ಕೇಳಿದರು. ಆ ಪ್ರಯತ್ನ ಬಹಳ ಜನಪ್ರಿಯವಾಯಿತು. ಅನೇಕ ಭಾಷೆಗಳಿಗೆ ಭಾಷಾಂತರವಾಯಿತು. ಇಂಗ್ಲೀಷ್ ಭಾಷಾಂತರವೂ ಒಂದು ಬಂದಿತು. ಇದು ಪಶ್ಚಿಮ ದೇಶಗಳಿಗೆ ತಲಪಿ, ಅಲ್ಲಿ ನಾನಾ ಭಾಷೆಗಳಿಗೆ ಪರಿವರ್ತಿತವಾಯಿತು. ನನ್ನ ಪುಸ್ತಕಗಳಲ್ಲೆಲ್ಲಾ ಇದೇ ಬಹಳ ಜನಪ್ರಿಯವಾಯಿತು. ಕಾರಣ ನನಗೆ ತಿಳಿಯಲಿಲ್ಲ. ನಾನು ಆ ಲೇಖನಗಳನ್ನು ಬರೆದದ್ದು ಪ್ರಾಸಂಗಿಕವಾಗಿ, ಅಷ್ಟು ಗಮನ ಕೊಟ್ಟಿರಲಿಲ್ಲ, ಸಾಧಾರಣವಾಗಿ ವೈದ್ಯರು ಡಾಕ್ಟರರು ಹೇಳುವ ದೃಷ್ಟಿಯಿಂದಲ್ಲದೆ ನಾನೇ ಒಂದು ಹೊಸ ದೃಷ್ಟಿಯಿಂದ ಆರೋಗ್ಯದ ವಿಷಯವನ್ನು ನೋಡಿದೇನೆ. ಇದೇ, ಬಹುಶಃ, ಅದರ ಜನಪ್ರಿಯತೆಗೆ ಕಾರಣ. ಇದು ಸರಿಯೋ ತಪ್ಪೋ ಇನ್ನೊಂದು ಸಲ ಪುಸ್ತಕವನ್ನು ಹೊಸದಾಗಿ ಪ್ರಕಟಿಸಿ ಎಂದು ಗೆಳೆಯರು ಒತ್ತಾಯ ಮಾಡುತ್ತಿದ್ದಾರೆ. ಮೂಲವನ್ನು ಪರಿಷ್ಕರಿಸಲು ಆಗಿಲ್ಲ ನನಗೆ. ವೇಳೆಯೇ ಇಲ್ಲ. ಈಗ ಬಲವಂತವಾಗಿ ಬಿಡುವು ಕೊಟ್ಟಿದಾರಲ್ಲ, ಅದರ ಲಾಭ ಪಡೆದು ಮಾಡುತ್ತಿದೇನೆ. ಮೂಲಪುಸ್ತಕ ಈಗ ನನ್ನಲ್ಲಿಲ್ಲ. ಆದರೆ ಇಷ್ಟು ವರ್ಷಗಳ ಅನುಭವ ನನ್ನ ವಿಚಾರದ ಮೇಲೆ ತನ್ನ ಅಚ್ಚನ್ನು ಒತ್ತಿದೆ. ಮೊದಲಿನದಕ್ಕೂ ಈ ಪುಸ್ತಕಕ್ಕೂ ಅಂಥ ವ್ಯತ್ಯಾಸವೇನೂ ಕಾಣಬರದು. ನನ್ನ ಮನಸ್ಸು ಸದಾ ಮುಕ್ತ. ಆದ್ದರಿಂದ ಏನಾದರೂ ಭೇದ ಕಂಡರೆ ಅದು ಪ್ರಗತಿ.

ಹೊಸ ಹೆಸರು ಕೊಟ್ಟಿದೇನೆ: ‘ ಆರೋಗ್ಯ ರಹಸ್ಯ’. ಈ ಪುಸ್ತಕದಲ್ಲಿ ಹೇಳಿರುವ ಆರೋಗ್ಯನಿಯಮಗಳನ್ನು ಪಾಲಿಸಿದರೆ ಆರೋಗ್ಯ ಮಂದಿರ ದ್ವಾರಕ್ಕೆ ಬೀಗದ ಕೈ ಸಿಗುತ್ತದೆ. ಅವನು ವೈದ್ಯರ ಮನೆ ಬಾಗಿಲು ತಟ್ಟಬೇಕಾಗಿಲ್ಲ.

ಆಗಾಖಾನ್ ಅರಮನೆ, ಎರವಡಾ ೨೭-೮-೪೨ — ಮೋ. ಕ. ಗಾಂಧೀ.

# ೧

# ಮನುಷ್ಯ ಶರೀರ

ಮನುಷ್ಯನ ಶರೀರದ ವರ್ಣನೆಗೆ ತೊಡಗುವ ಮೊದಲು, "ಆರೋಗ್ಯ" ಶಬ್ದದ ಅರ್ಥವನ್ನು ಅರಿಯಬೇಕಾದುದು ಅಗತ್ಯ. ಆರೋಗ್ಯವೆಂದರೆ ದೇಹ ಸೌಖ್ಯ. ಮೈಯಲ್ಲಿ ಯಾವ ರೋಗವೂ ಇಲ್ಲದೆ, (ದೇಹ ಎಲ್ಲ ರೋಗಗಳಿಂದ ದೂರವಾಗಿದ್ದು) ದಿನಗಟ್ಟಲೆಯ ಸಾಮಾನ್ಯ ಕೆಲಸಗಳನ್ನು ಅನಾಯಾಸವಾಗಿ ನಡೆಸಬಲ್ಲವನೇ ಆರೋಗ್ಯಶಾಲಿ. ಅಂಥ ಮನುಷ್ಯ ದಿನಕ್ಕೆ ಹತ್ತು ಹನ್ನೆರಡು ಮೈಲಿ ಸರಾಗವಾಗಿ ನಡೆಯುವ ಹಾಗಿರಬೇಕು. ಸಾಧಾರಣ ಶರೀರಶ್ರಮದ ಕಾರ್ಯಗಳನ್ನು ಆಯಾಸವಿಲ್ಲದೆ ಮಾಡುವಂತಿರಬೇಕು. ಸಾಮಾನ್ಯವಾದ ಸರಳ ಆಹಾರವನ್ನು ಆತ ಅರಗಿಸಿಕೊಳ್ಳಬಲ್ಲ. ಆತನ ಮನಸ್ಸೂ ಇಂದ್ರಿಯಗಳೂ ಸಮರಸವಾಗಿ ಸಮುಚಿತ್ತವಾಗಿರುತ್ತವೆ. ಈ ಲಕ್ಷಣ ನಿರೂಪಣೆಯಲ್ಲಿ ಪಂದ್ಯಗಳಲ್ಲಿ ಸ್ಪರ್ಧಿಸುವವರೂ ಬೇರೆ ಅಂತಹವರೂ ಸೇರುವುದಿಲ್ಲ. ಅಸಾಧಾರಣ ದೇಹ ಬಲವುಳ್ಳವನು ಆರೋಗ್ಯವಾಗಿದ್ದೇ ಇರುತ್ತಾನೆ ಎಂಬುದೇನಿಲ್ಲ. ಆತ ಬೇರೆ ಮತ್ತಾವುದಕ್ಕೋ ಲೋಪ ತಂದು ಬರೀ ಖಂಡ ಮಾಂಸ, ಮೈ ಮಾತ್ರ ಬೆಳೆಸಿದಾನೆ ; ಅಷ್ಟೇ.

ಮೇಲೆ ಹೇಳಿದ ಈ ಆರೋಗ್ಯದ ಮಟ್ಟವನ್ನು ಮುಟ್ಟಬೇಕು ಮನುಷ್ಯ ಶರೀರ. ಆದುದರಿಂದ ಅದರ ಬಗ್ಗೆ ಸಾಕಷ್ಟು ವಿಷಯ ತಿಳಿದುಕೊಳ್ಳುವುದು ಅಗತ್ಯ.

ಪ್ರಾಚೀನ ಕಾಲದಲ್ಲಿ ಎಂತಹ ಶಿಕ್ಷಣ ರೂಢವಾಗಿತ್ತೆಂಬುದು ದೇವರಿಗೆ ಮಾತ್ರವೇ ಗೊತ್ತು. ಈ ವಿಷಯದ ಸಂಶೋಧಕರು ನಮಗೆ ಸ್ವಲ್ಪ ವಿಷಯ, ಕೇವಲ ಸ್ವಲ್ಪ, ತಿಳಿಸಬಹುದು. ಆದರೆ ನಮಗೆಲ್ಲ ಈ ದೇಶದಲ್ಲಿ ಆಧುನಿಕ ಶಿಕ್ಷಣದ ಅನುಭವ ಕೊಂಚ ಇದೆ. ಅದು ನಮ್ಮ ಜೀವನಕ್ಕೆ ಸ್ವಲ್ಪವೂ ಸಂಬಂಧಿಸಿಲ್ಲ. ಹಾಗಾಗಿ, ನಮ್ಮ ದೇಹದ ಬಗ್ಗೆ ನಮ್ಮನ್ನೇ ಅಜ್ಞಾನಿಗಳನ್ನಾಗಿ ಮಾಡಿದೆ. ನಮ್ಮ ಹಳ್ಳಿಯ, ನಮ್ಮ ಭೂಮಿಯ ಬಗ್ಗೆ ಇರುವ ನಮ್ಮ ಜ್ಞಾನದ ಗತಿಯೂ

ಅಷ್ಟೆ. ನಮ್ಮ ನಿತ್ಯಜೀವನಕ್ಕೆ ಸಂಬಂಧಿಸದ ವಿಷಯಗಳನ್ನು ನಾವು ಕಲಿಯುತ್ತೇವೆ. ಈ ಬಗೆಯ ಜ್ಞಾನ ಯಾವ ಉಪಯೋಗಕ್ಕೂ ಬಾರದೆಂದಲ್ಲ. ಆದರೆ ಪ್ರತಿಯೊಂದಕ್ಕೂ ಒಂದೊಂದು ಸ್ಥಾನವಿದೆ. ಎಲ್ಲಕ್ಕೂ ಮೊದಲು, ಮಿಕ್ಕ ಎಲ್ಲಕ್ಕೂ ಮೊದಲಾಗಿ, ನಾವು ನಮ್ಮ ದೇಹ, ನಮ್ಮ ಮನೆ, ನಮ್ಮ ಹಳ್ಳಿ ಮತ್ತು ಸುತ್ತಲ ಪ್ರದೇಶಗಳು, ಅದರ ಬೆಳೆಗಳು ಮತ್ತು ಅಲ್ಲಿನ ಇತಿಹಾಸ, ಇವುಗಳ ಬಗ್ಗೆ ನಾಕಷ್ಟು ತಿಳಿದುಕೊಳ್ಳಬೇಕು. ಈ ಪ್ರಾಥಮಿಕ ಜ್ಞಾನದ ಆಧಾರವುಳ್ಳ ಸಮಗ್ರ ಜ್ಞಾನವೇ ನಮ್ಮ ಬಾಳನ್ನು ಅರಳಿಸಬಲ್ಲದು.

ಪುರಾತನ ದಾರ್ಶನಿಕರು ವರ್ಣಿಸಿರುವಂತೆ, ಮನುಷ್ಯ ಶರೀರ ಪಂಚಭೂತಗಳಿಂದಾಗಿದೆ. ಅವು–ಭೂಮಿ, ನೀರು, ಆಕಾಶ, ಬೆಳಕು, ಗಾಳಿ.

ಮಾನವನ ಎಲ್ಲ ಕಾರ್ಯಗಳೂ ಹತ್ತು ಇಂದ್ರಿಯಗಳ ಸಹಾಯದಿಂದ ಮನಸ್ಸಿನ ಮೂಲಕ ನಡೆಯುತ್ತವೆ. ಇವು, ಐದು ಕರ್ಮೇಂದ್ರಿಯಗಳು—ಕೈ, ಕಾಲು, ಬಾಯಿ, ಆಸನ, ಜನನಾಂಗ ; ಐದು ಜ್ಞಾನೇಂದ್ರಿಯಗಳು–ಚರ್ಮದ ಮೂಲಕ ಸ್ಪರ್ಶಾನುಭವ, ಮೂಗಿನ ಮೂಲಕವಾಗಿ ವಾಸನೆಯ ಅನುಭವ, ನಾಲಗೆಯಿಂದ ರುಚಿಯ ಅನುಭವ, ಕಣ್ಣುಗಳಿಂದ ದೃಶ್ಯಾನುಭವ, ಕಿವಿಗಳ ಮೂಲಕವಾಗಿ ಶ್ರವಣಾನುಭವ. ಆಲೋಚನೆ ಮನಸ್ಸಿನ ಕಾರ್ಯ. ಕೆಲವರು ಅದನ್ನು ಹನ್ನೊಂದನೆ ಇಂದ್ರಿಯವೆಂದಿದಾರೆ. ಆರೋಗ್ಯದಲ್ಲಿರುವಾಗ ಎಲ್ಲ ಇಂದ್ರಿಯಗಳೂ ಮನಸ್ಸೂ ಸಂಪೂರ್ಣ ಅನ್ಯೋನ್ಯತೆಯಿಂದ ಕೆಲಸ ಮಾಡಬೇಕು.

ಮನುಷ್ಯಯಂತ್ರದ ಒಳಗಡೆ ನಡೆಯುವ ಕೆಲಸ ವಿಚಿತ್ರವಾದುದು. ಮನುಷ್ಯನ ಶರೀರ ಬ್ರಹ್ಮಾಂಡದ ಸೂಕ್ಷ್ಮ ಪ್ರತಿರೂಪ. ದೇಹದಲ್ಲಿ ಇಲ್ಲದುದು ಬ್ರಹ್ಮಾಂಡದಲ್ಲಿ ಇಲ್ಲ. ಅದಕ್ಕೇ ತತ್ವಜ್ಞಾನಿಗಳು "ಯಥಾ ಪಿಂಡೇ ತಥಾ ಬ್ರಹ್ಮಾಂಡೇ"–ಒಳಗಣ ಲೋಕ ಹೊರಗಿನ ಪ್ರಪಂಚವನ್ನು ಪ್ರತಿಬಿಂಬಿಸುತ್ತದೆ ಎಂದರು. ಆದ್ದರಿಂದ ನಮ್ಮ ಶರೀರಜ್ಞಾನ ನಮಗೆ ಪರಿಪೂರ್ಣವಾಗಿದ್ದಿತೆಂದರೆ, ಇಡೀ ಬ್ರಹ್ಮಾಂಡದ ಜ್ಞಾನವೇ ನಮಗೆ ಆದಂತೆ. ಆದರೆ, ಅತ್ಯುತ್ತಮ ಡಾಕ್ಟರುಗಳು ಹಕೀಮರು, ವೈದ್ಯರು ಕೂಡ ಈ ಜ್ಞಾನ ಪಡೆಯಲಾಗಲಿಲ್ಲ, ಒಬ್ಬ ಸಾಧಾರಣ ವ್ಯಕ್ತಿ ಇದಕ್ಕೆ ಹಂಬಲಿಸುವುದು ಧಾರ್ಷ್ಟ್ಯದ ಮಾತು. ಮನುಷ್ಯನ ಮನಸ್ಸಿನ ವಿಷಯವನ್ನು ಏನೊಂದೂ ತಿಳಿಸುವ ಯಾವ ಯಂತ್ರವನ್ನೂ ಇನ್ನೂ ಯಾರೂ ಕಂಡುಹಿಡಿದಿಲ್ಲ. ವಿಜ್ಞಾನಿಗಳು, ದೇಹದ ಒಳಗೂ

ಹೊರಗೂ ನಡೆಯುವ ಕಾರ್ಯಗಳ ಬಗ್ಗೆ ಮನೋಹರವಾಗಿ ವರ್ಣಿಸಿದಾರೆ. ಆದರೆ ಒಂದು ಗಾಲಿ ಉರುಳುವುದು ಹೇಗೆ ಎಂದು ಯಾರೂ ಹೇಳಲಾರರು. ನಾವು ಏಕೆ, ಹೇಗೆ, ಯಾವಾಗ ಬರುತ್ತದೆ ಎಂಬುದನ್ನು ಯಾರು ವಿವರಿಸ ಬಲ್ಲರು? ಒಟ್ಟಿನಲ್ಲಿ, ಅಪರಿಮಿತ ಓದುಬರೆಹಗಳಾದ ಮೇಲೆ, ಅಪರಿಮಿತ ಅನುಭವವಾದ ಮೇಲೆ, ತನಗೆ ತಿಳಿದಿರುವುದೆಷ್ಟು ಅಲ್ಪ ಎಂದು ತಿಳಿಯುವ ಸ್ಥಿತಿಗೆ ಮನುಷ್ಯ ಬಂದಿದಾನೆ.

ಮಾನವ ಯಂತ್ರ ಸರಾಗವಾಗಿ ಕೆಲಸ ಮಾಡಲು, ವಿವಿಧ ಅಂಗಗಳು ಹೊಂದಿಕೊಂಡು ಕೆಲಸ ಮಾಡಬೇಕು. ಇವೆಲ್ಲ ಸರಿಯಾದ ರೀತಿಯಲ್ಲಿ ನಡೆ ದರೆ, ಯಂತ್ರ ಸರಾಗವಾಗಿ ಓಡುತ್ತದೆ. ಯಾವುದಾದರೂ ಒಂದು ಮುಖ್ಯ ಭಾಗ ಕ್ರಮ ತಪ್ಪಿದರೆ, ಯಂತ್ರ ನಿಂತುಹೋಗುತ್ತದೆ. ಉದಾಹರಣೆಗೆ, ಸರಿಯಾಗಿ ಜೀರ್ಣವಾಗದಿದ್ದರೆ, ಇಡೀ ದೇಹವೇ ಆಲಸ್ಯಗೊಳ್ಳುತ್ತದೆ. ಆದ್ದರಿಂದ, ಅಜೀರ್ಣ ಮಲಬದ್ಧತೆಗಳನ್ನು ಯಾರು ಹಗುರಾಗಿ ತಿಳಿದುಕೊಳ್ಳು ವರೋ ಅವರಿಗೆ ಆರೋಗ್ಯ ನಿಯಮಗಳ ಓನಾಮಗಳೇ ಗೊತ್ತಿಲ್ಲ. ಇವೆರಡೂ ಅಸಂಖ್ಯಾತ ಕಾಯಿಲೆಗಳ ಮೂಲ ಕಾರಣಗಳು.

ಅನಂತರ ನಮ್ಮ ಗಮನ ಸೆಳೆಯುವ ಪ್ರಶ್ನೆ, ಈ ಮಾನವ ದೇಹದ ಉಪ ಯೋಗವೇನು? ಎಂಬುದು. ಪ್ರಪಂಚದಲ್ಲಿ ಪ್ರತಿಯೊಂದನ್ನೂ ಉಪಯೋ ಗಿಸಬಹುದು, ದುರುಪಯೋಗಿಸಲೂ ಬಹುದು. ಇದು ದೇಹಕ್ಕೂ ಅನ್ವಯಿ ಸುತ್ತದೆ. ನಾವು ಅದನ್ನು ಸ್ವಾರ್ಥಕ್ಕಾಗಿಯೋ ವಿಷಯಲೋಲುಪತೆ ಗಾಗಿಯೋ ಅಥವ ಪರಪೀಡೆಗಾಗಿಯೋ ಬಳಸಿದರೆ, ಅದನ್ನು ದುರುಪಯೋಗ ಪಡಿಸುತ್ತೇವೆ. ಆತ್ಮ ಸಂಯಮಮಾಡಿ ನಾವು ಇಡೀ ಪ್ರಪಂಚದ ಸೇವೆಗೆ ನಮ್ಮನ್ನು ಅರ್ಪಿಸಿಕೊಂಡಾಗ, ದೇಹದ ಸರಿಯಾದ ಉಪಯೋಗ ಪಡೆದಂತಾ ಗುತ್ತದೆ. ಮನುಷ್ಯನ ಆತ್ಮ ವಿಶ್ವಾತ್ಮದ ಅಥವ ದೈವದ ಒಂದು ಅಂಶ. ನಮ್ಮ ಎಲ್ಲ ಕೆಲಸಗಳೂ ಈ ಸಂಬಂಧವನ್ನು ಅರಿಯುವುದಕ್ಕಾದರೆ ಆಗ ನಮ್ಮ ದೇಹ ಆತ್ಮದ ಆವಾಸಕ್ಕೆ ಯೋಗ್ಯವಾದ ಮಂದಿರವಾಗುತ್ತದೆ.

ದೇಹ ಕಶ್ಮಲದ ಗಣಿಯೆಂದು ವರ್ಣಿತವಾಗಿದೆ. ನಿಜವಾಗಿ ನೋಡಿದರೆ ಒಂದು ರೀತಿಯಲ್ಲಿ ಈ ಮಾತು ಉತ್ಪ್ರೇಕ್ಷೆಯೇನಲ್ಲ. ಈ ದೇಹವಿಷ್ಟೇ ಆಗಿದ್ದಿದ್ದರೆ, ಮತ್ತೇನೂ ಇಲ್ಲದಿದ್ದರೆ, ದೇಹದ ಬಗ್ಗೆ ಅಷ್ಟು ತೊಂದರೆ ತೆಗೆದುಕೊಳ್ಳುವುದರಲ್ಲಿ ಹುರುಳಿಲ್ಲ. ಆದರೆ ಈ ಕಶ್ಮಲದ ಗಣಿಯೆನಿಸಿಕೊಂಡ

ಈ ದೇಹವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಬೇಕೆಂದರೆ, ಆಗ ಇದನ್ನು ಪರಿಶುದ್ಧವಾಗಿ ಯೋಗ್ಯರೀತಿಯಲ್ಲಿಟ್ಟುಕೊಳ್ಳುವುದು ನಮ್ಮ ಮೊಟ್ಟ ಮೊದಲನೆಯ ಕರ್ತವ್ಯವಾಗುತ್ತದೆ. ಚಿನ್ನದ, ವಜ್ರದ ಗಣಿಗಳೂ ಮೇಲು ಗಡೆ ಮಣ್ಣಿನಂತೆಯೇ ತೋರುತ್ತವೆ. ಭೂಗರ್ಭದಲ್ಲಿ ಚಿನ್ನ ವಜ್ರಗಳಿರುವ ವಿಷಯ, ವಿಜ್ಞಾನಿಗಳನೇಕರನ್ನು ಉಪಯೋಗಿಸಿ ಗಣಿಗಳಲ್ಲಿರುವುದನ್ನು ಪಡೆಯಲು ಲಕ್ಷಾಂತರ ಹಣವೆಚ್ಚ ಮಾಡಲು ಮನುಷ್ಯನನ್ನು, ಪ್ರೇರೇಪಿಸುತ್ತದೆ. ಅದರಂತೆಯೆ, ನಾವು ಆತ್ಮದ ಮಂದಿರವಾದ ಮನುಷ್ಯಶರೀರವನ್ನು ಯೋಗ್ಯ ರೀತಿಯಲ್ಲಿಟ್ಟುಕೊಳ್ಳಲು ಎಷ್ಟು ತೊಂದರೆ ತೆಗೆದುಕೊಂಡರೂ ಸಾಲದು.

ಮನುಷ್ಯ, ಪ್ರಪಂಚಕ್ಕೆ ಬಂದುದು ಅದರ ಋಣ ತೀರಿಸುವುದಕ್ಕೆ. ಎಂದರೆ ದೇವರ ಸೇವೆಮಾಡುವುದಕ್ಕೆ. ದೈವಸೃಷ್ಟಿಯ ಸೇವೆಯಮೂಲಕ ದೇವರ ಸೇವೆಮಾಡುವುದಕ್ಕೆ. ಈ ದೃಷ್ಟಿಯನ್ನಿಟ್ಟುಕೊಂಡರೆ ಮನುಷ್ಯ ತನ್ನ ಶರೀರದ ರಕ್ಷಕನಂತೆ ನಡೆದುಕೊಳ್ಳುತ್ತಾನೆ. ಸೇವೆಯ ಧ್ಯೇಯವನ್ನು ಶಕ್ತಿ ಮೀರಿ ಸಾಧಿಸಲು ಸಾಧ್ಯವಾಗುವಂತೆ ದೇಹದ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅವನ ಕರ್ತವ್ಯವಾಗುತ್ತದೆ.

## ೨

## ಗಾಳಿ

ನೀರಿಲ್ಲದೆ ಕೆಲವು ದಿನ, ಆಹಾರವಿಲ್ಲದೆ ಇನ್ನೂ ಕೆಲವು ದಿನ, ಇರಬಹುದು. ಆದರೆ ಗಾಳಿಯಿಲ್ಲದೆ ಯಾರೂ ಬದುಕಲಾಗುವುದಿಲ್ಲ. ಆದ್ದರಿಂದಲೇ ನಮ್ಮ ಪ್ರಯತ್ನ ಲವಲೇಶವೂ ಇಲ್ಲದೆಯೆ ನಮಗೆ ಗಾಳಿ ಸಿಗುವಂತೆ ನಿಸರ್ಗ ನಮ್ಮ ಸುತ್ತ ಎತ್ತೆತ್ತಲೂ ಗಾಳಿಯನ್ನು ತುಂಬಿದೆ.

ಮೂಗಿನ ಮೂಲಕ ನಾವು ಶ್ವಾಸಕೋಶದೊಳಕ್ಕೆ ಗಾಳಿಯನ್ನು ತೆಗೆದು ಕೊಳ್ಳುತ್ತೇವೆ. ಶ್ವಾಸಕೋಶಗಳು ಒಂದು ಬಗೆಯ ತಿದಿಗಳಂತೆ ಕೆಲಸ ಮಾಡುತ್ತವೆ. ನಾವು ಒಳಗೆ ತೆಗೆದುಕೊಳ್ಳುವ ವಾಯುಮಂಡಲದ ಗಾಳಿಯಲ್ಲಿ ಆಮ್ಲಜನಕ ಎಂಬ ಒಂದು ಜೀವದಾಯಕ ವಸ್ತುವಿದೆ. ನಾವು ಹೊರಗೆ ಬಿಡುವ ಉಸಿರಿನಲ್ಲಿ ಅನೇಕ ವಿಷ ಅನಿಲಗಳಿವೆ. ಉಸಿರು ಹೊರಗೆ ಬಂದೊಡನೆಯೆ ಅವು ಹೊರಗಣ ಗಾಳಿಯಲ್ಲಿ ಹರಡಿ ಬೆರೆತು ತಮ್ಮ ಶಕ್ತಿಯನ್ನು ಕಳೆದು

ಕೊಳ್ಳುತ್ತವೆ. ಹಾಗಿರದಿದ್ದರೆ ಆ ಅನಿಲಗಳು ನಮ್ಮನ್ನು ಕೊಂದುಬಿಡಬಹುದು. ಆದುದರಿಂದಲೇ ಸರಿಯಾದ ವಾಯುಸಂಚಾರ ಆವಶ್ಯಕ.

ಶ್ವಾಸಕೋಶದಲ್ಲಿ ಗಾಳಿ ರಕ್ತದೊಡನೆ ನಿಕಟವಾಗಿ ಬೆರೆತು ರಕ್ತವನ್ನು ಶುದ್ಧಗೊಳಿಸುತ್ತದೆ. ಅನೇಕರಿಗೆ ಉಸಿರಾಡುವ ಕಲೆಯೇ ತಿಳಿಯದು. ಈ ನ್ಯೂನತೆ ಅವರ ರಕ್ತದ ಪೂರ್ಣ ಶುದ್ಧೀಕರಣಕ್ಕೆ ಅಡ್ಡಿಯಾಗುತ್ತದೆ. ಕೆಲವು ಜನ ಮೂಗಿನ ಬದಲು ಬಾಯಿಯ ಮೂಲಕ ಉಸಿರಾಡುತ್ತಾರೆ. ಇದು ದುರಭ್ಯಾಸ. ಒಳಗೆ ಹೋಗುವ ಗಾಳಿಯನ್ನು ಸೋಸಿ, ಬಿಸಿಮಾಡಲು ಅನುಕೂಲಿಸುವಂತೆ ಪ್ರಕೃತಿ ನಮ್ಮ ಮೂಗನ್ನು ರಚಿಸಿದೆ. ಬಾಯಿಯ ಮೂಲಕ ಉಸಿರಾಡಿದರೆ ವಾಯುಮಂಡಲದ ಗಾಳಿ ಹೀಗೆ ಶೋಧಿಸಲ್ಪಡದೆ ಬಿಸಿಯಾಗದೆಯೆ ಶ್ವಾಸಕೋಶವನ್ನು ಸೇರುತ್ತದೆ. ಉಸಿರಾಡುವ ವ್ಯಾಯಾಮವನ್ನು ಮಾಡಬೇಕೆಂದಾಯಿತು. ಈ ವ್ಯಾಯಾಮಗಳು ಎಷ್ಟು ಉಪಯುಕ್ತವೋ ಕಲಿಯಲು ಅಷ್ಟೇ ಸುಲಭ. ವಿವಿಧ ಯೋಗಾಸನಗಳ ಬಗ್ಗೆ ನಾನು ಇಲ್ಲಿ ಚರ್ಚೆ ಮಾಡುವುದಿಲ್ಲ. ಅವು ಮುಖ್ಯವಲ್ಲ, ಉಪಯುಕ್ತವಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಆಸನಾದಿ ವ್ಯಾಯಾಮಗಳ ಅಭ್ಯಾಸಕ್ಕಿಂತ ಒಂದು ನಿಯಮಬದ್ಧ ಕ್ರಮಜೀವನದ ಪ್ರಯೋಜನ ಹೆಚ್ಚು ಎಂದು ಒತ್ತಿ ಹೇಳಲು ಬಯಸುತ್ತೇನೆ. ಮೂಗಿನ ಮೂಲಕ ಉಸಿರಾಡಲಿಕ್ಕೂ, ನಿರಾತಂಕವಾಗಿ ಎದೆ ಹಿಗ್ಗಲಿಕ್ಕೂ ಅನುಕೂಲವಾದ ಯಾವ ಆಸನವಾದರೂ ಸರಿಯೆ, ನಮ್ಮ ಉದ್ದೇಶ್ಯಕ್ಕೆ ಸಾಕು.

ನಾವು ಗಟ್ಟಿಯಾಗಿ ಬಾಯಿ ಮುಚ್ಚಿಕೊಂಡಿದ್ದರೆ, ಮೂಗಿನಿಂದಲೇ ಉಸಿರಾಡಬೇಕಲ್ಲವೆ? ದಿನವೂ ಬೆಳಿಗ್ಗೆ ಬಾಯಿ ತೊಳೆಯುವಂತೆ ಮೂಗನ್ನೂ ಸಹ ಶುದ್ಧಿಮಾಡಬೇಕು. ಶುದ್ಧವಾದ ನೀರು, ತಣ್ಣನೆಯದೋ ಅಥವಾ ಉಗುರುಬೆಚ್ಚನೆಯದೋ ಈ ಕೆಲಸಕ್ಕೆ ಅತ್ಯುತ್ತಮ ಸಾಧನ. ನೀರನ್ನು ಲೋಟಾದಲ್ಲಾಗಲಿ, ಅಂಗೈಯಲ್ಲಾಗಲಿ ತೆಗೆದುಕೊಂಡು ಮೂಗಿನ ಹೊಳ್ಳೆಗಳಿಂದ ಒಳಕ್ಕೆ ಎಳೆದುಕೊಳ್ಳಬೇಕು. ಒಂದು ಹೊಳ್ಳೆಯನ್ನು ಮುಚ್ಚಿ, ಇನ್ನೊಂದರಿಂದ ನೀರೆಳೆದುಕೊಂಡು ಆಮೇಲೆ ಅದನ್ನು ಮುಚ್ಚಿ ಮೊದಲು ಮುಚ್ಚಿದ್ದ ಹೊಳ್ಳೆಯ ಮೂಲಕ ನೀರನ್ನು ಹೊರಗೆ ಬಿಡಬೇಕು. ಸ್ವಲ್ಪವೂ ಬಾಧೆಯಾಗದಂತೆ ಈ ಕ್ರಿಯೆಯನ್ನು ಮೃದುವಾಗಿ ನಡೆಸಬೇಕು. ಮೂಗಿನ ಹಿಂಭಾಗವನ್ನು ಶುದ್ಧಿಗೊಳಿಸಲು ಹೀಗೆ ಎಳೆದುಕೊಂಡ ನೀರನ್ನು ಬಾಯಿಯ ಮೂಲಕ ಹೊರಗೆ ಬಿಡಬೇಕು. ನೀರನ್ನು ಕುಡಿಯಲೂ ಬಹುದು.

ನಾವು ಉಸಿರಾಡುವ ಗಾಳಿ ಸ್ವಚ್ಛವಾಗಿರಬೇಕು. ನಕ್ಷತ್ರಗಳ ಅಡಿ ಬಯಲಿನಲ್ಲಿ ಮಲಗುವುದನ್ನು ಅಭ್ಯಾಸಮಾಡುವುದು ಉತ್ತಮ. ಶೀತವಾಗುವುದೆಂಬ ಹೆದರಿಕೆಯನ್ನು ಮನಸ್ಸಿನಿಂದ ದೂರಮಾಡಬೇಕು. ಯಥೇಷ್ಟವಾದ ಹೊದಿಕೆಗಳಿಂದ ಚಳಿಯನ್ನು ತಡೆಯಬಹುದು. ಕುತ್ತಿಗೆಯಿಂದ ಮೇಲೆ ಹೊದೆದುಕೊಳ್ಳಬಾರದು. ತಲೆಗೆ ಚಳಿಯಾದರೆ, ಬೇರೆ ಒಂದು ಬಟ್ಟೆಯನ್ನು ತಲೆಗೆ ಸುತ್ತಿಕೊಳ್ಳಬಹುದು. ಶ್ವಾಸದ್ವಾರವಾದ ಮೂಗನ್ನು ಎಂದಿಗೂ ಮುಚ್ಚಬಾರದು.

ಮಲಗುವ ಮುನ್ನ ಹಗಲು ಧರಿಸಿದ್ದ ಉಡುಪನ್ನು ಕಳೆದು ಸಡಿಲವಾದ ಉಡುಪನ್ನು ಉಪಯೋಗಿಸಬೇಕು. ರಾತ್ರಿ ದುಪ್ಪಟ್ಟಿ ಹೊದ್ದು ಮಲಗಿದಾಗ ನಿಜವಾಗಿ ಯಾವ ಉಡುಪೂ ಅಗತ್ಯವಲ್ಲ. ಹಗಲೂ ಸಹ ಬಿಗಿಯಾದ ಉಡುಪನ್ನು ಉಡಬಾರದು. ನಮ್ಮ ಸುತ್ತಣ ವಾತಾವರಣದ ಗಾಳಿ ಯಾವಾಗಲೂ ಶುದ್ಧವಾಗಿರುವುದಿಲ್ಲ. ಎಲ್ಲ ದೇಶಗಳಲ್ಲಿಯೂ ಒಂದೇ ಬಗೆ ಇರುವುದಿಲ್ಲ. ಇಂಥ ದೇಶದಲ್ಲಿ ಇರಬೇಕು ಎಂದು ಆರಿಸಿಕೊಳ್ಳುವುದು ಸಾಮಾನ್ಯವಾಗಿ ನಮ್ಮ ಕೈಯಲ್ಲಿಲ್ಲ. ಆದರೆ ಒಳ್ಳೆಯ ಪ್ರದೇಶದಲ್ಲಿ, ಒಳ್ಳೆಯ ಮನೆಯನ್ನು ಆರಿಸಿಕೊಳ್ಳುವುದು ಸ್ವಲ್ಪಮಟ್ಟಿಗೆ ನಮ್ಮ ಕೈಲಿದೆ. ತುಂಬಾ ನಿಬಿಡವಲ್ಲದ ಪ್ರದೇಶದಲ್ಲಿ, ಗಾಳಿ ಬೆಳಕು ಧಾರಾಳವಾಗಿರುವ ಮನೆಯಲ್ಲಿ, ವಾಸಿಸುವುದು ಸಾಧಾರಣ ನಿಯಮವಾಗಿರಬೇಕು.

## ೩

## ನೀರು

ಗಾಳಿಯ ತರುವಾಯ ನೀರು ಜೀವನದ ಅಗತ್ಯಗಳಲ್ಲಿ ಇನ್ನೊಂದು. ಗಾಳಿಯಿಲ್ಲದೆ ಹೇಗೆ ಕೆಲವು ನಿಮಿಷಗಳಿಗಿಂತ ಹೆಚ್ಚು ಬದುಕಲಾರೆವೋ ಹಾಗೆಯೆ ನೀರಿಲ್ಲದೆ ಕೆಲವು ದಿನಕ್ಕಿಂತ ಹೆಚ್ಚು ಇರಲಾರೆವು. ಆದ್ದರಿಂದ ಗಾಳಿಯ ಹಾಗೆಯೆ ನೀರನ್ನೂ ಸಹ ಪ್ರಕೃತಿ ನಮಗೆ ಯಥೇಚ್ಛವಾಗಿ ಒದಗಿಸಿದೆ. ನೀರೇ ಇಲ್ಲದ ಮರುಭೂಮಿಯಲ್ಲಿ ಮನುಷ್ಯ ಇರಲಾರ. ಆದುದರಿಂದಲೆ ವಿಸ್ತಾರವಾದ ಮರಳುಗಾಡುಗಳು ನಿರ್ಜನ ಪ್ರದೇಶಗಳಾಗಿಯೇ ಉಳಿದಿವೆ.

ಆರೋಗ್ಯವಾಗಿರಬೇಕಾದರೆ ಪ್ರತಿಯೊಬ್ಬನೂ ೨೪ ಗಂಟೆಗಳಲ್ಲಿ ೫ ಪೌಂಡು ನೀರನ್ನಾಗಲಿ ಬೇರೆ ದ್ರವಾಹಾರವನ್ನಾಗಲಿ ತೆಗೆದುಕೊಳ್ಳಬೇಕು.

ಕುಡಿಯುವ ನೀರು ಶುದ್ಧವಾಗಿರಬೇಕು. ಅನೇಕ ಸ್ಥಳಗಳಲ್ಲಿ ಶುದ್ಧವಾದ ನೀರು ಸಿಗುವುದೇ ಕಷ್ಟ. ಭಾವಿಯ ನೀರನ್ನು ಕುಡಿಯುವುದರಲ್ಲಿ ಯಾವಾಗಲೂ ಅಪಾಯವಿದೆ. ಆಳವಿಲ್ಲದ ಭಾವಿಗಳೂ ಇಳಿಯುವ ಭಾವಿಗಳೂ ನೀರು ಕುಡಿಯಲು ತೀರಾ ಅಯೋಗ್ಯ. ನೀರಿನ ಬಣ್ಣ, ರೂಪು, ರುಚಿ ಯಾವುದರಿಂದಲೂ ಅದರ ಪರಿಶುದ್ಧತೆ ತಿಳಿಯುವದಿಲ್ಲ; ಅದೇ ತೊಂದರೆ. ಕಣ್ಣಿನಿಂದ ನೋಡುವುದಕ್ಕೂ ರುಚಿಗೂ ಏನೂ ಅಪಾಯವಿಲ್ಲವೆಂದು ತೋರುವ ನೀರು ವಿಷವೇ ಆಗಿರಬಹುದು. ಅರಿಯದ ಭಾವಿಯ ನೀರನ್ನೂ ಅಪರಿಚಿತನ ಮನೆಯ ನೀರನ್ನೂ ಕುಡಿಯಬಾರದೆಂಬ ಹಳೆಯ ಸಂಪ್ರದಾಯ ನಿಜವಾಗಿ ಅನುಕರಣೀಯ.

ಬಂಗಾಲದಲ್ಲಿ ಹೆಚ್ಚುಕಡಿಮೆ ಪ್ರತಿ ಮನೆಯಲ್ಲೂ ಒಂದು ನೀರಿನತೊಟ್ಟಿ (ಹೌಜು) ಇರುತ್ತದೆ. ಸಾಮಾನ್ಯವಾಗಿ, ಇವುಗಳ ನೀರು ಕುಡಿಯಲು ಯೋಗ್ಯವಲ್ಲ. ನದಿಯ ನೀರೂ ಅನೇಕ ವೇಳೆ, ಅದರಲ್ಲಿಯೂ ದೋಣಿ – ಹರಿಗೋಲು ನಡೆಸುವ ಸ್ಥಳಗಳಲ್ಲಿ, ಅಥವಾ ದೊಡ್ಡ ನಗರದ ಬಳಿ ಹರಿಯುತ್ತ ಊರಿನ ಬಚ್ಚಲು ನೀರೂ ಕಕ್ಕಸು ನೀರೂ ನದಿಗೆ ಸೇರುವ ಕಡೆ, ಸರ್ವಥಾ ಕುಡಿಯಲು ಯೋಗ್ಯವಲ್ಲ.

ಇಷ್ಟೆಲ್ಲ ನಾನು ಹೇಳಿದರೂ, ಅಶುದ್ಧವೆಂದು ಮೇಲೆ ವರ್ಣಿಸಿದಂಥ ನೀರನ್ನೇ ಕುಡಿಯಬೇಕಾಗಿರುವ ಲಕ್ಷಾಂತರ ಜನರಿರುವುದನ್ನು ನಾ ಬಲ್ಲೆ. ಅವರ ಉದಾಹರಣೆ ಅನುಕರಣೀಯವೆಂದು ಅರ್ಥವಲ್ಲ. ಪ್ರಕೃತಿ ನಮಗೆ ಸಾಕಷ್ಟು ಶಕ್ತಿಸಂಗ್ರಹವನ್ನು ಕೊಟ್ಟಿದೆ. ಅದಿಲ್ಲದೆ ಹೋಗಿದ್ದರೆ ಮನುಷ್ಯ ತಾನು ಮಾಡಿದ ತಪ್ಪುಗಳಿಂದಲೂ, ಆರೋಗ್ಯ ನಿಯಮಗಳ ಉಲ್ಲಂಘನೆಯಿಂದಲೂ ಎಂದೋ ನಾಶವಾಗಿ ಈ ಭೂಮಿಯಿಂದ ಮಾಯವಾಗಬೇಕಾಗಿತ್ತು.

ಪ್ರಕೃತ, ಆರೋಗ್ಯಕ್ಕೆ ಸಂಬಂಧಿಸಿದ ಹಾಗೆ ನೀರಿನ ಪಾತ್ರವೇನು ಎಂಬುದು ನಮ್ಮ ವಿಷಯ. ನೀರು ಸ್ವಚ್ಛವೆ ಅಲ್ಲವೆ ಎಂಬ ಸಂದೇಹವಿರುವಲ್ಲಿ ಕುಡಿಯುವ ಮುನ್ನ ನೀರನ್ನು ಕಾಯಿಸಬೇಕು. ಎಂದರೆ, ವಾಡಿಕೆಯಾಗಿ ಪ್ರತಿಯೊಬ್ಬನೂ ತಾನು ಕುಡಿಯುವ ನೀರನ್ನು ತನ್ನ ಸಂಗಡಲೇ ಇಟ್ಟುಕೊಂಡಿರಬೇಕು ಎಂದಾಯಿತು. ಭಾರತದಲ್ಲಿ ಅನೇಕ ಸನಾತನಿ ಹಿಂದೂಗಳು, ಸಾಂಪ್ರದಾಯಿಕ ಭಾವನೆಗಳ ದೆಸೆಯಿಂದ ಪ್ರಯಾಣ ಕಾಲದಲ್ಲಿ ಮತದ ಹೆಸರಿನಲ್ಲಿ ಮಾಡುವ ಕೆಲಸವನ್ನು, ಅರಿತವರು ಆರೋಗ್ಯಕ್ಕಾಗಿ ಖಂಡಿತವಾಗಿಯೂ ಮಾಡಬಹುದು.

## ೪

## ಆಹಾರ

ಗಾಳಿ ನೀರು ಇಲ್ಲವೆ ಮನುಷ್ಯ ಬದುಕಲಾರ ; ನಿಜ. ಆದರೆ ಈ ದೇಹ ವನ್ನು ಪೋಷಿಸುವುದು ಆಹಾರ. ಅದಕ್ಕೇ, ಅನ್ನವೇ ಪ್ರಾಣ ಎಂಬ ಗಾದೆ ಬಂದಿರುವುದು.

ಆಹಾರ ಮೂರು ತೆರನಾಗಿರಬಹುದು ; ಶಾಕಾಹಾರ, ಮಾಂಸಾಹಾರ, ಮಿಶ್ರಾಹಾರ. ಮಾಂಸಾಹಾರದಲ್ಲಿ ಕೋಳಿ, ಮೀನು ಸೇರಿವೆ. ಹಾಲೂ ಪ್ರಾಣಿಜನ್ಯ ಪದಾರ್ಥವೇ. ಕಟ್ಟುನಿಟ್ಟಿನ ಶಾಕಾಹಾರದಲ್ಲಿ ಅದನ್ನು ಸೇರಿಸಲಾಗು ವುದಿಲ್ಲ. ಅದು ಬಹಳ ಮಟ್ಟಿಗೆ ಮಾಂಸದ ಕೆಲಸವನ್ನೇ ಮಾಡುತ್ತದೆ. ವೈದ್ಯ ಕೀಯ ಭಾಷೆಯಲ್ಲಿ ಅದನ್ನು ಪ್ರಾಣಿಸಂಬಂಧದ ಆಹಾರವೆಂದೇ ಪರಿಗಣಿ ಸಿದಾರೆ. ಆದರೆ ಸಾಧಾರಣ ಮನುಷ್ಯ, ಹಾಗೆ ತಿಳಿಯುವುದಿಲ್ಲ. ಮೊಟ್ಟೆಗಳನ್ನು ಮಾತ್ರ ಮಾಂಸಾಹಾರವೆಂದು ತಿಳಿಯುತ್ತಾನೆ. ನಿಜವಾಗಿ ಹಾಗಲ್ಲ. ಈಗಿನ ಕಾಲದಲ್ಲಿ ಗೊಡ್ಡು ಮೊಟ್ಟೆಗಳು ತಯಾರಾಗುತ್ತವೆ. ಹುಂಜವನ್ನೇ ನೋಡ ದೆಯೆ ಕೋಳಿ ಮೊಟ್ಟೆಯಿಡುತ್ತದೆ. ಗೊಡ್ಡು ಮೊಟ್ಟೆಗಳು ಮರಿಯಾಗುವುದಿಲ್ಲ. ಆದ್ದರಿಂದ ಹಾಲು ಕುಡಿಯುವವರು ಇಂಥ ಮೊಟ್ಟೆ ತಿನ್ನಲು ಆಕ್ಷೇಪಿಸಬಾರದು.

ಮನುಷ್ಯ ಶಾಕಾಹಾರಿಯಾಗಿರಬೇಕು ಎನ್ನಲು, ಅಂಗವಿಜ್ಞಾನ, ಶರೀರ ಶಾಸ್ತ್ರಗಳ ಆಧಾರ ಬೇಕಾದಷ್ಟಿದೆ ಎನ್ನುವ ದೃಢಾಭಿಪ್ರಾಯ ಹೆಚ್ಚಾಗಿ ಬೆಳೆ ದಿದ್ದರೂ, ವೈದ್ಯಕೀಯ ಅಭಿಪ್ರಾಯವೇನೋ ಮಿಶ್ರಾಹಾರದ ಪರವಾಗಿಯೆ ಇದೆ. ಮನುಷ್ಯನ ಹಲ್ಲು, ಹೊಟ್ಟೆ, ಕರುಳು ಇತ್ಯಾದಿಗಳೆಲ್ಲ, ಮನುಷ್ಯನನ್ನು ಶಾಕಾಹಾರಿಯಾಗಬೇಕೆಂದೇ ನಿಸರ್ಗ ರಚಿಸಿದೆ ಎನ್ನುವುದನ್ನು ಸಮರ್ಥಿಸುತ್ತವೆ.

ಶಾಕಾಹಾರದಲ್ಲಿ ಧಾನ್ಯ, ಬೇಳೆ, ಬಾಯಿಗೆ ರುಚಿಯಾದ (ಕಂದಮೂಲ ಫಲ) ಬೇರು, ಗೆಡ್ಡೆ, ಸೊಪ್ಪು ಇವೇ ಅಲ್ಲದೆ, ಹೊಸದೂ ಒಣಗಿಸಿಟ್ಟಿದ್ದೂ ಹಣ್ಣುಗಳೂ ಸೇರಿವೆ. ಒಣ ಹಣ್ಣುಗಳಲ್ಲಿ ಬಾದಾಮಿ, ಪಿಸ್ತಾಬೀಜ, ಅಕ್ರೋಡ ಇತ್ಯಾದಿ ಬೀಜಗಳೂ ಉಂಟು.

ನಾನು ಯಾವಾಗಲೂ ಪೂರ್ಣ ಶಾಕಾಹಾರವಾದಿ. ಆದರೆ, ಸಂಪೂರ್ಣ ಆರೋಗ್ಯಕ್ಕೆ ಶಾಕಾಹಾರದಲ್ಲಿ ಹಾಲು, ಮೊಸರು, ಬೆಣ್ಣೆ ತುಪ್ಪ ಇರಲೇ ಬೇಕೆಂದು ನನ್ನ ಅನುಭವ ನನಗೆ ತೋರಿಸಿಕೊಟ್ಟಿದೆ. ನನ್ನ ಮೂಲ ಭಾವನೆಗೆ

ಇದು ಬಹಳ ಮುಖ್ಯ ವ್ಯತ್ಯಾಸ. ಆರು ವರ್ಷಗಳ ಕಾಲ ನಾನು ಆಹಾರದಲ್ಲಿ ಹಾಲನ್ನು ಬಳಸಲಿಲ್ಲ. ಆಗ, ಅದರಿಂದ ನನಗೇನು ಕೆಡುಕಾಗಿ ಕಾಣಲಿಲ್ಲ. ಆದರೆ ೧೯೧೭ರಲ್ಲಿ ನನ್ನ ಅಜ್ಞಾನದಿಂದಲೇ, ನನಗೆ ಬಲವಾದ ಆಮಶಂಕೆಯಾಯಿತು. ಬರೀ ಅಸ್ಥಿಪಂಜರವಾಗಿ ಹೋದೆ. ಆದರೂ ಯಾವ ಔಷಧಿಯನ್ನೂ ನಾನು ತೆಗೆದುಕೊಳ್ಳಲಿಲ್ಲ, ತೀವ್ರವಾಗಿ ನಿರಾಕರಿಸಿದೆ. ಅಷ್ಟೇ ದೃಢವಾಗಿ ಹಾಲು ಮಜ್ಜಿಗೆಯ ಸೇವನೆಯನ್ನೂ ವಿರೋಧಿಸಿದೆ. ನನ್ನ ಶರೀರ ಪುಷ್ಟಿಗೊಳ್ಳಲಿಲ್ಲ, ಹಾಸಿಗೆ ಬಿಟ್ಟು ಏಳುವಷ್ಟು ಶಕ್ತಿಯೂ ಬರಲಿಲ್ಲ. ಅದಕ್ಕೆ ಮೊದಲೇ ಹಾಲು ಕುಡಿಯಬಾರದೆಂಬ ವ್ರತ ತೊಟ್ಟಿದ್ದೆ. ಆ ವ್ರತ ಹಿಡಿದಾಗ ಹಸುವಿನ ಅಥವಾ ಎಮ್ಮೆಯ ಹಾಲನ್ನು ಬಿಟ್ಟದ್ದು? ಮೇಕೆಯ ಹಾಲನ್ನು ತೆಗೆದುಕೊಳ್ಳಲು ಆ ವ್ರತದ್ದೇನು ಅಡ್ಡಿ ಎಂದು ಒಬ್ಬ ವೈದ್ಯಮಿತ್ರ ಸೂಚಿಸಿದ. ನನ್ನ ಹೆಂಡತಿ ಅವನಿಗೆ ಬೆಂಬಲವಿತ್ತಳು. ನಾನು ಸಡಿಲಬಿಟ್ಟೆ. ನಿಜವಾಗಿಯೂ ಹಾಲನ್ನು ಬಿಟ್ಟವನಿಗೆ, ವ್ರತ ಹಿಡಿದಾಗ ಹಸುವಿನ, ಎಮ್ಮೆಯ ಹಾಲು ಮಾತ್ರವೇ ಮನಸ್ಸಿನಲ್ಲಿದ್ದರೂ ಎಲ್ಲಾ ಹಾಲೂ ನಿಷಿದ್ಧವೇ. ಎಲ್ಲಾ ಪ್ರಾಣಿಗಳ ಹಾಲೂ ಒಂದೇ. ಅವುಗಳಲ್ಲಿ ವಿವಿಧ ಅಂಶಗಳ ಪ್ರಮಾಣ ಹೆಚ್ಚುಕಡಮೆಯಿರಬಹುದು, ಅಷ್ಟೇ. ಆದ್ದರಿಂದ ನಾನು ನನ್ನ ವ್ರತವನ್ನು ಕೇವಲ ಅಕ್ಷರಶಃ ಪಾಲಿಸಿದೆನೇ ವಿನಾ, ತತ್ವಶಃ ಅಲ್ಲ ಎನ್ನಬಹುದು. ಅದು ಹೇಗೋ, ಅಂತೂ ಕೂಡಲೆ ಮೇಕೆಯ ಹಾಲನ್ನು ತಂದರು. ನಾನೂ ಕುಡಿದೆ. ನನಗೆ ಅದರಿಂದ ಹೊಸ ಜೀವ ಬಂದಂತಾಯಿತು. ಬೇಗ ಚೇತರಿಸಿಕೊಂಡೆ. ತ್ವರೆಯಾಗಿ ಹಾಸಿಗೆ ಬಿಟ್ಟೇಳುವಷ್ಟು ಶಕ್ತನಾದೆ. ಇದರಿಂದಲೂ ಇಂಥ ಅನೇಕ ಅನುಭವಗಳಿಂದಲೂ ಪೂರ್ಣ ಶಾಕಾಹಾರದಲ್ಲಿ ಹಾಲನ್ನೂ ಸೇರಿಸಬೇಕೆಂದು ನಾನು ಒಪ್ಪಿಕೊಳ್ಳುವಂತಾಗಿದೆ. ಆದರೂ ಈ ಹಾಲು, ಮಾಂಸಗಳಿಂದ ನಮಗೆ ಸಿಗುವ ಎಲ್ಲಾ ಅಗತ್ಯ ವಸ್ತುಗಳನ್ನೂ ಒದಗಿಸುವಂಥ ಯಾವುದೋ ಒಂದು ಪದಾರ್ಥ ವಿಶಾಲ ಸಸ್ಯ ಸಾಮ್ರಾಜ್ಯದಲ್ಲಿ ಇರಲೇಬೇಕು; ಅದರಲ್ಲಿ ಹಾಲು ಮಾಂಸಗಳ ನ್ಯೂನತೆಗಳು–ನೈತಿಕ ಹಾಗೂ ಇತರ–ಇಲ್ಲದೆ ಇರಬೇಕು ಎಂದು ನನ್ನ ಖಚಿತವಾದ ಭಾವನೆ.

ನನ್ನ ಅಭಿಪ್ರಾಯದಲ್ಲಿ ಹಾಲು–ಮಾಂಸಗಳ ಸೇವನೆಯಲ್ಲಿ ಖಂಡಿತವಾಗಿ ಕುಂದುಗಳಿವೆ. ಮಾಂಸಕ್ಕಾಗಿ ಪ್ರಾಣಿಗಳನ್ನು ಕೊಲ್ಲುವುದು ಅಗತ್ಯ. ಎಳೆತನದಲ್ಲಿ, ತಾಯಿಯ ಹಾಲನ್ನುಳಿದು ಬೇರೆ ಹಾಲು ಪಡೆಯಲು ನಮಗೇನು ಅಧಿ

ಕಾರ? ನೈತಿಕ ದೋಷವಂತೂ ಸರಿ, ಕೇವಲ ಆರೋಗ್ಯ ದೃಷ್ಟಿಯಿಂದಲೂ ಇತರ ಕೊರತೆಗಳಿವೆ. ಹಾಲು ಮಾಂಸಗಳೆರಡರಲ್ಲೂ, ಅವನ್ನು ಕೊಡುವ ಪ್ರಾಣಿಗಳ ದೋಷಗಳಿದ್ದೇ ಇರುತ್ತವೆ. ಸಾಕಿದ ಹಸುಗಳು ಪೂರ್ಣವಾಗಿ ಆರೋಗ್ಯವಾಗಿರುವುದು ತುಂಬಾ ಅಪರೂಪ. ಮನುಷ್ಯನಂತೆಯೇ ಹಸುಗಳೂ ಲೆಕ್ಕವಿಲ್ಲದಷ್ಟು ಕಾಯಿಲೆಗಳಿಂದ ನರಳುತ್ತವೆ. ಹಸುಗಳ ವೈದ್ಯಕೀಯ ಪರೀಕ್ಷೆ ನಡೆಯುವಾಗಲೂ, ಇವುಗಳಲ್ಲಿ ಅನೇಕ ಕಾಯಿಲೆ ಗಮನಕ್ಕೆ ಬರುವುದೇ ಇಲ್ಲ. ಅಲ್ಲದೆ ಭಾರತ ದೇಶದ ಎಲ್ಲಾ ದನಕರುಗಳ ವೈದ್ಯ ಪರೀಕ್ಷೆ ಸದ್ಯಕ್ಕಂತೂ ಅಸಾಧ್ಯ ಸಾಹಸ. ಸೇವಾಗ್ರಾಮದ ಆಶ್ರಮದಲ್ಲಿ ನಾನು ಗೋಶಾಲೆ ನಡೆಸುತ್ತಿದ್ದೇನೆ. ವೈದ್ಯರ ಸಹಾಯ ಸಿಗುವುದು ನನಗೆ ಸುಲಭ. ಆದರೂ ಸೇವಾಗ್ರಾಮದ ಗೋಶಾಲೆಯ ಎಲ್ಲಾ ಹಸು ಕರುಗಳೂ ಆರೋಗ್ಯವಾಗಿವೆಯೆಂದು ಖಂಡಿತವಾಗಿ ಹೇಳಲಾರೆ. ಎಲ್ಲರೂ ಆರೋಗ್ಯವಾಗಿದೆ ಎನ್ನುತ್ತಿದ್ದ ಒಂದು ಹಸು ಕ್ಷಯರೋಗ ಪೀಡಿತವಾಗಿದ್ದುದು ತಿಳಿದುಬಂದಿತು. ಈ ರೋಗ ನಿದಾನಕ್ಕೆ ಮೊದಲು ಆ ಹಸುವಿನ ಹಾಲನ್ನು ಆಶ್ರಮದಲ್ಲಿ ನಿತ್ಯವೂ ಉಪಯೋಗಿಸುತ್ತಿದ್ದರು. ಅಕ್ಕಪಕ್ಕದ ಹಳ್ಳಿಗಳ ರೈತರಿಂದಲೂ ಆಶ್ರಮ ಹಾಲು ತೆಗೆದುಕೊಳ್ಳುತ್ತದೆ. ಅವರ ಹಸುಗಳು ವೈದ್ಯಪರೀಕ್ಷೆಗೊಳಗಾಗಿಲ್ಲ. ಈ ಹಾಲು ಉಪಯೋಗಿಸಲು ಯೋಗ್ಯವೆ ಅಲ್ಲವೆ ಎಂದು ನಿರ್ಧರಿಸುವುದು ಕಷ್ಟ. ಹಾಲನ್ನು ಕಾಯಿಸಿದರೆ ಎಷ್ಟು ಮಟ್ಟಿಗೆ ಕ್ಷೇಮವೋ ಅಷ್ಟರಿಂದಲೇ ನಾವು ತೃಪ್ತರಾಗಬೇಕು. ತನ್ನ ಹಸುಗಳ ಪೂರ್ಣ ವೈದ್ಯಪರೀಕ್ಷೆಯ ಬಗ್ಗೆ ಆಶ್ರಮವೇ ಹೆಮ್ಮೆಪಡುವಂತಿಲ್ಲ. ತನ್ನ ಹಾಲು ಮೊಸರು ತುಪ್ಪಗಳೂ ಶುದ್ಧವೆಂದು ಖಂಡಿತವಾಗಿ ಹೇಳುವಂತಿಲ್ಲ. ಹೀಗಿರುವಾಗ ಉಳಿದ ಕಡೆ ಪರಿಸ್ಥಿತಿ ಇದಕ್ಕಿಂತ ಉತ್ತಮವಾಗಿರಲಾರದು. ಹಸುಗಳ ಬಗ್ಗೆ ಹೇಳಿರುವುದೆಲ್ಲ, ಮಾಂಸಕ್ಕಾಗಿ ಕೊಲ್ಲುವ ಇತರ ಪ್ರಾಣಿಗಳಿಗೆ ಇನ್ನೂ ಹೆಚ್ಚಿಗೆ ಅನ್ವಯಿಸುತ್ತದೆ. ಸಾಮಾನ್ಯವಾಗಿ, ಮನುಷ್ಯನಿಗೆ ಈ ಅಪಾಯುಗಳು ಬಾರದಿದ್ದರೆ ಅವನ ಅದೃಷ್ಟವೇ ಅದಕ್ಕೆ ಕಾರಣ. ತನ್ನ ಆರೋಗ್ಯದ ಬಗ್ಗೆ ಹೆಚ್ಚು ಚಿಂತೆ ಮಾಡುವಂತೆ ತೋರುವುದೇ ಇಲ್ಲ ಮನುಷ್ಯ. ಡಾಕ್ಟರರ, ವೈದ್ಯರ, ಹಕೀಮರದೊಂದು ವೈದ್ಯಕೀಯ ಕೋಟೆ ಕಟ್ಟಿ ಸುರಕ್ಷಿತವಾಗಿದ್ದೇನೆ ಎಂದು ತಿಳಿದಿದ್ದಾನೆ. ಅವನಿಗಿರುವ ಮುಖ್ಯ ಚಿಂತೆ–ಆಸಕ್ತಿ, ಐಶ್ವರ್ಯವನ್ನೂ ಸಮಾಜದಲ್ಲಿ ಸ್ಥಾನವನ್ನೂ ಗಳಿಸುವುದೊಂದೇ. ಈ ಚಿಂತೆ ಉಳಿದವೆಲ್ಲವನ್ನೂ ಮರೆಯಿಸುತ್ತದೆ. ಆದ್ದರಿಂದ, ಯಾವನಾದರೂ ಒಬ

ನಿಸ್ವಾರ್ಥಿ ವಿಜ್ಞಾನಿ, ಸಹನೆಯಿಂದ ಸಂಶೋಧನೆ ಮಾಡಿ, ಹಾಲು ಮಾಂಸ ಗಳಿಗೆ ಬದಲು ಒಂದು ಸಸ್ಯಪದಾರ್ಥವನ್ನು ಕಂಡುಹಿಡಿಯುವ ತನಕ ಮನುಷ್ಯ ಹಾಲು ಮಾಂಸಗಳನ್ನು ಸೇವಿಸುತ್ತಲೇ ಇರುತ್ತಾನೆ.

ಮಿಶ್ರಾಹಾರವನ್ನು ನೋಡೋಣ. ಮನುಷ್ಯನ ದೇಹ ದಿನವೂ ಸವೆಯು ತ್ತದೆ. ಆದ್ದರಿಂದ ಒಳಗಿನ ಅಂಗಸತ್ವಗಳನ್ನು ಸ್ನಾಯುಗಳನ್ನು ದಿನವೂ ವೃದ್ಧಿ ಗೊಳಿಸುವಂಥ ಆಹಾರ ಮನುಷ್ಯನಿಗೆ ಬೇಕು. ಇದಲ್ಲದೆ ಮೈಗೆ ಶಕ್ತಿಯನ್ನೂ ಜಿಡ್ಡನ್ನೂ ಕೆಲವು ಲವಣಗಳನ್ನೂ ಒಳಗಿನ ಮಲ ಪದಾರ್ಥಗಳನ್ನು ಹೊರ ದೂಡುವ ನಾರು ತವುಡನ್ನೂ ನೀಡುವ ವಸ್ತುಗಳು ಬೇಕು. ಅಂಗಸತ್ವವನ್ನು ಬೆಳೆಸುವ ವಸ್ತುಗಳಿಗೆ ಸಸಾರಜನಕಗಳೆಂದು ಹೆಸರು. ಹಾಲು, ಮಾಂಸ, ಮೊಟ್ಟೆ, ದ್ವಿದಳಧಾನ್ಯ, ಕಾಯಿ ಬೀಜಗಳಿಂದ ಸಸಾರಜನಕ ಲಭಿಸುತ್ತದೆ. ಹಾಲು ಮಾಂಸಗಳಿಂದ ಸಿಗುವ ಸಸಾರಜನಕ ಅಥವಾ ಪ್ರಾಣಿಸಂಬಂಧ ವಾದ ಸಸಾರಜನಕವನ್ನು ಹೆಚ್ಚು ಸುಲಭವಾಗಿ ಅರಗಿಸಿ ರಕ್ತಗತ ಮಾಡಿ ಕೊಳ್ಳಬಹುದು. ಆದ್ದರಿಂದ ಇವುಗಳ ಬೆಲೆ ಸಸಾರಜನಕ ಸಸ್ಯಪದಾರ್ಥ ಗಳಿಗಿಂತ ಹೆಚ್ಚು. ಮಾಂಸಕ್ಕಿಂತ ಹಾಲು ಶ್ರೇಷ್ಠ. ಮಾಂಸ ಅರಗದಿರುವಾಗ ಸಹ ಹಾಲು ಸುಲಭವಾಗಿ ಅರಗುತ್ತದೆ ಎಂದು ವೈದ್ಯರು ಹೇಳುತ್ತಾರೆ. ಸಸ್ಯಾ ಹಾರಿಗಳಿಗೆ ಹಾಲು ಒಂದೇ ಪ್ರಾಣಿಸಂಬಂಧ ಸಸಾರಜನಕ ವಸ್ತುವಾದ್ದರಿಂದ, ಅವರಿಗೆ ಅದು ಆಹಾರದ ಮುಖ್ಯಾಂಶ. ಹೊಸ ಮೊಟ್ಟೆಗಳ ಸಸಾರಜನಕ ಅತ್ಯಂತ ಸುಲಭವಾಗಿ ಜೀರ್ಣವಾಗುವುದೆಂದು ಪರಿಗಣಿಸಲ್ಪಟ್ಟಿದೆ.

ಆದರೆ ಎಲ್ಲರೂ ಹಾಲು ತೆಗೆದುಕೊಳ್ಳಲು ಆಗುವುದಿಲ್ಲ. ಎಲ್ಲಾ ಸ್ಥಳ ಗಳಲ್ಲೂ ಹಾಲು ಸಿಗುವುದಿಲ್ಲ. ಇಲ್ಲಿ ಹಾಲಿನ ವಿಷಯದಲ್ಲಿ ಒಂದು ಮುಖ್ಯವಾದ ಮಾತನ್ನು ಹೇಳಬಯಸುತ್ತೇನೆ. ಸಾಧಾರಣ ನಂಬಿಕೆಗೆ ವಿರೋಧವಾದರೂ ಕೆನೆ ತೆಗೆದ ಹಾಲು ಉತ್ತಮವಾದ ಆಹಾರ. ಹಾಲಿಗಿಂತಲೂ ಅದೇ ಹೆಚ್ಚು ಉಪಯುಕ್ತವಾದ ಸಂದರ್ಭಗಳೂ ಉಂಟು. ಅಂಗಸತ್ವಗಳನ್ನು ಬೆಳೆಸುವುದು, ಅವುಗಳನ್ನು ಸರಿ ಮಾಡುವುದು, ಹಾಲಿನ ಮುಖ್ಯ ಕೆಲಸ. ಕೆನೆ ತೆಗೆಯುವುದ ರಿಂದ ಕೊಬ್ಬು ಹೋಗುತ್ತದೆಯೇ ಹೊರತು, ಸಸಾರಜನಕಗಳು ಹೋಗುವುದಿಲ್ಲ. ಅಲ್ಲದೆ, ಈಗಿರುವ ಕೆನೆ ತೆಗೆಯುವ ಸಾಧನಗಳು ಕೊಬ್ಬನ್ನು ಪೂರ್ಣವಾಗಿ ತೆಗೆಯಲಾರವು. ಅಂಥ ಸಾಧನವನ್ನು ರಚಿಸುವ ಸಂಭವವೂ ಇಲ್ಲ.

ಕೆನೆ ತೆಗೆದ ಹಾಲೋ ಕೆನೆ ತೆಗೆಯದ ಹಾಲೋ ಅಲ್ಲದೆ, ದೇಹಕ್ಕೆ ಇತರ

ವಸ್ತುಗಳೂ ಅಗತ್ಯ. ಗೋಧಿ, ಅಕ್ಕಿ, ಜೋಳ, ಸಜ್ಜೆ ಮುಂತಾದ ಧಾನ್ಯಗಳಿಗೆ ನಾನು ಎರಡನೆ ಸ್ಥಾನ ಕೊಡುತ್ತೇನೆ. ಇವು ಪ್ರಧಾನ ಆಹಾರ ಪದಾರ್ಥಗಳಾಗಿ ಉಪಯೋಗಿಸಲ್ಪಡುತ್ತಿವೆ. ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಧಾನ್ಯಗಳನ್ನು ಮುಖ್ಯಾಹಾರವಾಗಿ ಉಪಯೋಗಿಸುತ್ತಾರೆ. ಅನೇಕ ಕಡೆಗಳಲ್ಲಿ ಬೇರೆ ಬೇರೆ ಬಗೆಯ ಧಾನ್ಯಗಳನ್ನು ಒಟ್ಟಿಗೇ ಉಪಯೋಗಿಸುತ್ತಾರೆ. ಉದಾಹರಣೆಗೆ: ಸ್ವಲ್ಪ ಗೋಧಿ, ಸ್ವಲ್ಪ ಅಕ್ಕಿ, ಸ್ವಲ್ಪ ಸಜ್ಜೆ, ಮೂರನ್ನೂ ಒಟ್ಟಿಗೆ ಬಡಿಸುತ್ತಾರೆ. ಈ ಮಿಶ್ರಣ ನಮ್ಮ ದೇಹಪೋಷಣೆಗೆ ಅಗತ್ಯವಲ್ಲ. ಇದರಿಂದ ಆಹಾರ ಸೇವನೆಯ ಪ್ರಮಾಣವನ್ನು ಗೊತ್ತುಮಾಡುವುದು ಕಷ್ಟವಾಗಿ, ಜೀರ್ಣಿಸಿಕೊಳ್ಳಲು ಹೆಚ್ಚು ಶ್ರಮವಾಗುತ್ತದೆ. ಇವೆಲ್ಲವೂ ಪಿಷ್ಟವನ್ನು ಮಾತ್ರ ಒದಗಿಸುವಂಥವೇ. ಒಂದೊಂದನ್ನೇ ಒಂದೊಂದು ಸಲ ಉಪಯೋಗಿಸಿದರೆ ಒಳ್ಳೆಯದು. ಗೋಧಿಯೆ ಧಾನ್ಯಗಳಲ್ಲಿ ರಾಜ ಎನ್ನಬಹುದು. ಜಗತ್ತಿನ ನಕ್ಷೆಯನ್ನು ನೋಡಿದರೆ ಗೋಧಿಯ ಅಗ್ರಸ್ಥಾನ ಕಾಣಬರುತ್ತದೆ. ಆರೋಗ್ಯದ ದೃಷ್ಟಿಯಿಂದ ಗೋಧಿಯಿದ್ದರೆ ಅಕ್ಕಿಯಾಗಲಿ ಇತರ ಧಾನ್ಯಗಳಾಗಲಿ ಅನಾವಶ್ಯಕ. ಗೋಧಿ ಸಿಗದಿದ್ದರೆ ಜೋಳ ತಿನ್ನುವ ರೂಢಿಯಿಲ್ಲದಿದ್ದಾಗ, ಅಕ್ಕಿಯನ್ನೇ ಆಶ್ರಯಿಸಬೇಕು.

ಧಾನ್ಯಗಳನ್ನು ಚೆನ್ನಾಗಿ ಶುದ್ಧಿಮಾಡಿ, ಕಲ್ಲಿನಲ್ಲಿ ಬೀಸಿ ಬಂದ ಹಿಟ್ಟನ್ನು ಜರಡಿಯಾಡಬಾರದು. ಇದರಿಂದ ಭೂಣಾ ಅಥವಾ ಬೀಜಕೋಶ ನಷ್ಟವಾಗುತ್ತದೆ. ದೇಹಪೋಷಣೆಗೆ ಅಗತ್ಯವಾದ ಲವಣಗಳು, ಅನ್ನಾಂಗಗಳು ಇರುವುದು ಅದರಲ್ಲಿಯೇ. ಕರುಳಿನ ಕೆಲಸಕ್ಕೆ ಸಹಾಯವಾದ ನಾರನ್ನೂ ಇದು ಕೊಡುತ್ತದೆ. ಅಕ್ಕಿಯ ಕಾಳು ಬಹು ಸೂಕ್ಷ್ಮವಾದುದರಿಂದ, ನಿಸರ್ಗ ಅದರ ಸುತ್ತಲೂ ಹೊದಿಕೆಯ ಹಾಗೆ ಹೊಟ್ಟನ್ನು ಕೊಟ್ಟಿದೆ. ಇದನ್ನು ತಿನ್ನಲಾಗುವುದಿಲ್ಲ. ಈ ತಿನ್ನಲಾಗದ ಭಾಗವನ್ನು ತೆಗೆಯಲು ಭತ್ತವನ್ನು ಕುಟ್ಟಬೇಕು. ಹೊಟ್ಟು ಕಳಚುವಷ್ಟು ಮಾತ್ರ ಕುಟ್ಟಬೇಕು. ಯಂತ್ರಗಳಲ್ಲಿ ಕುಟ್ಟಿಸುವುದರಿಂದ, ಹೊಟ್ಟಿನ ಜೊತೆಗೆ ತವುಡೂ ಸವೆದು ಹೋಗಿ ಅಕ್ಕಿ ನಯವಾಗುತ್ತದೆ. ನಯಮಾಡಿದ ಅಕ್ಕಿಯ ಜನಪ್ರಿಯತೆಗೆ ಕಾರಣ, ಅದನ್ನು ಹೆಚ್ಚುದಿನ ಇಡಬಹುದೆಂಬುದೇ. ತವುಡು ಸಿಹಿ. ಅದನ್ನು ತೆಗೆಯದೆ ಇದ್ದರೆ ಅಕ್ಕಿಗೆ ಬೇಗ ಹುಳು ಹಿಡಿಯುತ್ತದೆ. ನಯ ಮಾಡಿದ ಅಕ್ಕಿ, ಹೊಟ್ಟು ಇಲ್ಲದ ಗೋಧಿ, ನಮಗೆ ಬರೀ ಪಿಷ್ಟವನ್ನು ಒದಗಿಸುತ್ತವೆ. ಜೀವಕೋಶವನ್ನು ಕಳೆದರೆ, ಧಾನ್ಯದಲ್ಲಿ ಮುಖ್ಯ

ಅಂಶವೇ ನಷ್ಟವಾಯಿತು. ಅಕ್ಕಿಯ ತವುಡನ್ನು ಪ್ರತ್ಯೇಕವಾಗಿ ಮಾರುತ್ತಾರೆ. ಅಕ್ಕಿಯ ತವುಡನ್ನೂ ಗೋಧಿಯ ಹೊಟ್ಟನ್ನೂ ಬೇಯಿಸಿ ತಿನ್ನಬಹುದು. ಇವುಗಳಿಂದ ಚಪಾತಿ, ರೊಟ್ಟಿಗಳನ್ನು ಮಾಡಬಹುದು. ಹೆಚ್ಚಾಗಿ ಕುಟ್ಟಿದ ಅಕ್ಕಿಗಿಂತ ಅಕ್ಕಿಹಿಟ್ಟಿನ ಚಪಾತಿಯೇ ಸುಲಭವಾಗಿ ಜೀರ್ಣವಾಗಬಹುದು. ಹಾಗೆ ಬಳಸಿದಾಗ ಸ್ವಲ್ಪ ತಿಂದರೂ ಹೊಟ್ಟೆ ತುಂಬೀತು.

ಚಪಾತಿಯ ಚೂರನ್ನು ಕಾಯಿಪಲ್ಯದಲ್ಲೋ ಬೇಳೆಯ ಸಾರಿನಲ್ಲೋ ಅದ್ದಿ ತಿನ್ನುವುದು ನಮಗೆ ವಾಡಿಕೆ. ಇದರಿಂದಾಗಿ ಅನೇಕರು ಸರಿಯಾಗಿ ಅಗಿಯದೆಯೆ ಆಹಾರವನ್ನು ನುಂಗುತ್ತಾರೆ. ಆಹಾರ ಪಚನದಲ್ಲಿ, ಅದರಲ್ಲೂ ಪಿಷ್ಟಪದಾರ್ಥಗಳ ಪಚನದಲ್ಲಿ, ಅಗಿಯುವುದು ಮುಖ್ಯಕಾರ್ಯ. ಪಿಷ್ಟ ಜೀರ್ಣಿಸುವುದು ಬಾಯಿಯಲ್ಲಿ ಜೊಲ್ಲುರಸವೊಡನೆ ಬೆರೆತಾಗಲೇ ಆರಂಭ. ಅಗಿಯುವುದರಿಂದ ಆಹಾರ ಜೊಲ್ಲಿನೊಡನೆ ಚೆನ್ನಾಗಿ ಬೆರೆಯುತ್ತದೆ. ಆದುದರಿಂದ ಪಿಷ್ಟಪದಾರ್ಥಗಳನ್ನು ಸ್ವಲ್ಪ ಗಟ್ಟಿಯಾಗಿಯೆ, ಒಣಕಲಾಗಿಯೇ ತಿನ್ನಬೇಕು. ಇದರಿಂದ ಜೊಲ್ಲಿನರಸ ಹೆಚ್ಚಿಗೆ ಉತ್ಪತ್ತಿಯಾಗಿ, ಪದಾರ್ಥವನ್ನು ಚೆನ್ನಾಗಿ ಅಗಿಯಲೇ ಬೇಕಾಗುತ್ತದೆ.

ಪಿಷ್ಟವನ್ನು ಒದಗಿಸುವ ಧಾನ್ಯಗಳನಂತರ ಸಸಾರಜನಕಗಳನ್ನೊದಗಿಸುವ ಬೇಳೆಗಳು ಬರುತ್ತವೆ—ಹುರುಳಿ, ಅವರೆ ಇತ್ಯಾದಿ. ಸಾಮಾನ್ಯವಾಗಿ ಪ್ರತಿಯೊಬ್ಬನೂ ಬೇಳೆಗಳು ಆಹಾರದ ಮುಖ್ಯಾಂಶವೆಂದು ಭಾವಿಸುತ್ತಾನೆ. ಮಾಂಸಾಹಾರಿಗಳಿಗೂ ಬೇಳೆ ಬೇಕು. ಕಷ್ಟವಾದ ದೇಹಶ್ರಮ ಮಾಡುವವರಿಗೆ, ಹಾಲು ತೆಗೆದುಕೊಳ್ಳಲಾಗದವರಿಗೆ, ಬೇಳೆಯಿಲ್ಲದಿದ್ದರೆ ಸಾಧ್ಯವಿಲ್ಲ ಎಂದರೆ ಸುಲಭವಾಗಿ ಒಪ್ಪಬಹುದು. ಆದರೆ ಗುಮಾಸ್ತರು, ವ್ಯಾಪಾರಿಗಳು, ವಕೀಲರು, ವೈದ್ಯರು, ಉಪಾಧ್ಯಾಯರು ಮುಂತಾದ ಕುಳಿತಲ್ಲಿಯೇ ಕೆಲಸ ಮಾಡುವವರಿಗೆ, ಹಾಲನ್ನು ಕೊಳ್ಳಲಾರದಷ್ಟು ಬಡವರಾದವರಿಗೆ, ಬೇಳೆಗಳು ಅಗತ್ಯವಲ್ಲವೆಂದು ನಿಸ್ಸಂದೇಹವಾಗಿ ನಾನು ಹೇಳಬಲ್ಲೆ. ಬೇಳೆ ಜೀರ್ಣವಾಗುವುದು ಕಷ್ಟವೆಂದು ಹೇಳುತ್ತಾರೆ. ಧಾನ್ಯಗಳಿಗಿಂತ ಬೇಳೆಯ ಉಪಯೋಗ ಕಡಮೆ. ಬೇಳೆಗಳಲ್ಲಿ ಬಟಾಣಿ, ಕಡಲೆ, ಹುರುಳಿ ಜೀರ್ಣಿಸಿಕೊಳ್ಳಲು ಅತಿ ಕಷ್ಟವೆಂದು ಹೆಸರು. ಅವರೆ ಅತಿ ಸುಲಭವೆಂದೂ ಪರಿಗಣಿತವಾಗಿದೆ.

ಕಾಯಿಪಲ್ಯ ಹಣ್ಣುಗಳಿಗೆ ನಮ್ಮ ಪಟ್ಟಿಯಲ್ಲಿ ಮೂರನೆಯ ಸ್ಥಾನ. ಭಾರತದಲ್ಲಿ ಇವು ಅಗ್ಗವಾಗಿ ಧಾರಾಳವಾಗಿ ಸಿಗುತ್ತವೆ ಎನ್ನಬಹುದು. ವಸ್ತುಸ್ಥಿತಿ ಹಾಗಿಲ್ಲ. ಇವು ಪಟ್ಟಣಿಗರಿಗೆ ಮಾತ್ರವೇ ಮೀಸಲು ಎಂದು ಭಾವಿ

ಸಲ್ಪಟ್ಟವೆ. ಹಳ್ಳಿಗಳಲ್ಲಿ ಕಾಯಿಪಲ್ಯ ಅಪರೂಪ, ಅನೇಕ ಕಡೆ ಹಣ್ಣು ಸಿಗುವುದೇ ಇಲ್ಲ. ಈ ಕಾಯಿಪಲ್ಯ ಹಣ್ಣುಗಳ ಕೊರತೆ ಭಾರತದ ಆಡಳಿತಕ್ಕೆ ಒಂದು ಕಳಂಕ. ಹಳ್ಳಿಯ ಜನರು ಇಷ್ಟಪಟ್ಟರೆ ಬೇಕಾದಷ್ಟು ಕಾಯಿಪಲ್ಯ ಸೊಪ್ಪನ್ನು ಬೆಳೆಯಬಹುದು. ಹಣ್ಣಿನ ಮಾತು ಅಷ್ಟು ಸುಲಭವಲ್ಲ. ಹಳ್ಳಿಗರ ದೃಷ್ಟಿಯಿಂದ ಈಗಿರುವ ಭೂ-ಶಾಸನ ಸರಿಯಲ್ಲ. ಆದರೆ ಇದು ವಿಷಯಾಂತರವಾಯಿತು.

ಕಾಯಿಪಲ್ಯಗಳಲ್ಲಿ, ದಿನವೂ ಅಲ್ಪ ಸ್ವಲ್ಪ ಸೊಪ್ಪನ್ನು ತೆಗೆದುಕೊಳ್ಳಬೇಕು. ಪಿಷ್ಟವನ್ನೆ ಹೆಚ್ಚಿಗೆ ಒದಗಿಸುವ ಆಲೂಗೆಡ್ಡೆ, ಗೆಣಸು ಇತ್ಯಾದಿಗಳನ್ನು ನಾನು ತರಕಾರಿಯಲ್ಲಿ ಸೇರಿಸುವುದಿಲ್ಲ. ಪಿಷ್ಟ ಒದಗಿಸುವ ಧಾನ್ಯಗಳ ಗುಂಪಿಗೇ ಅವನ್ನು ಸೇರಿಸಬೇಕು. ತಕ್ಕಮಟ್ಟಿಗೆ, ಸಾಮಾನ್ಯವಾದ ಹೊಸ ತರಕಾರಿ ಒಳ್ಳೆಯದು. ಸೌತೆ ಟೊಮ್ಯಾಟೋಗಳನ್ನು ಕೆಲವು ಮೆದುವಾದ ಸೊಪ್ಪುಗಳನ್ನೂ ಬೇಯಿಸಬೇಕಾಗಿಯೆ ಇಲ್ಲ. ಚೆನ್ನಾಗಿ ತೊಳೆದು ಹಾಗೆಯೇ ಸ್ವಲ್ಪ ಸ್ವಲ್ಪವಾಗಿ ತಿನ್ನಬೇಕು.

ಹಣ್ಣುಗಳ ಬಗ್ಗೆ : ನಮ್ಮ ದಿನದ ಆಹಾರದಲ್ಲಿ ಆಯಾ ಕಾಲದಲ್ಲಿ ಸಿಗುವ ಹಣ್ಣುಗಳಿರಬೇಕು. ಉದಾಹರಣೆಗೆ : ಮಾವು, ನೇರಿಳೆ, ಸೀಬೆ, ದ್ರಾಕ್ಷೆ, ಪರಂಗಿ, ಸೀನಿಂಬೆ ಅಥವಾ ಹುಳಿನಿಂಬೆ, ಕಿತ್ತಳೆ, ಮೂಸಂಬಿ ಮುಂತಾದುವುಗಳನ್ನು ಆಯಾಯಾ ಕಾಲದಲ್ಲಿ ಉಪಯೋಗಿಸಬೇಕು. ಹಣ್ಣುಗಳನ್ನು ತಿನ್ನಲು ಉತ್ತಮ ವೇಳೆ ಮುಂಜಾನೆ. ಬೆಳಗ್ಗೆ ಹಾಲು–ಹಣ್ಣಿನ ಉಪಾಹಾರವಾದರೆ ಪೂರ್ಣ ತೃಪ್ತಿ ಕೊಡಬೇಕು. ಮುಂಜಾನೆ ಬೇಗ ಉಪಹಾರ ತೆಗೆದುಕೊಳ್ಳುವವರಿಗೆ ಬರೀ ಹಣ್ಣೇ ಸಾಕು.

ಬಾಳೆಹಣ್ಣು ಒಳ್ಳೆಯದು. ಅದರಲ್ಲಿ ಪಿಷ್ಟ ಹೆಚ್ಚು. ಆದ್ದರಿಂದ ಅದಕ್ಕೆ ರೊಟ್ಟಿಯ ಸ್ಥಾನ. ಹಾಲು, ಬಾಳೆಯ ಹಣ್ಣು ಆದರೆ ಪೂರ್ಣ ಭೋಜನವಾದಂತೆ.

ಸ್ವಲ್ಪ ಜಿಡ್ಡಿನ ಪದಾರ್ಥವೂ ಅಗತ್ಯ. ತುಪ್ಪ ಅಥವಾ ಎಣ್ಣೆ ಇದನ್ನು ಕೊಡುತ್ತವೆ. ತುಪ್ಪ ಇದ್ದರೆ ಎಣ್ಣೆ ಅನಾವಶ್ಯಕ. ಎಣ್ಣೆ ಜೀರ್ಣಿಸುವುದು ಕಷ್ಟ; ಅಲ್ಲದೆ, ತುಪ್ಪದಷ್ಟು ದೇಹಪೋಷಕವೂ ಅಲ್ಲ. ದೇಹದ ಅಗತ್ಯವನ್ನು ಪೂರೈಸಲು ದಿನಕ್ಕೆ ಒಬ್ಬರಿಗೆ ಒಂದೂವರೆ ಔನ್ಸು ತುಪ್ಪ ಸಾಕು. ತುಪ್ಪಕ್ಕೆ ಆಧಾರ ಹಾಲು. ತುಪ್ಪವನ್ನು ಬಳಸಲು ಸಾಧ್ಯವಿಲ್ಲದವರು ಜಿಡ್ಡಿನ ಅಗತ್ಯವನ್ನು ಪೂರೈಸುವಷ್ಟು ಎಣ್ಣೆಯನ್ನು ಸೇವಿಸಬೇಕು. ಎಣ್ಣೆಗಳಲ್ಲಿ ಒಳ್ಳೆಣ್ಣೆ,

ಕಡಲೆಕಾಯಿ ಎಣ್ಣೆ, ಕೊಬ್ಬರಿ ಎಣ್ಣೆಗಳಿಗೆ ಹೆಚ್ಚು ಮಾನ್ಯತೆ. ಎಣ್ಣೆ ಹೊಸದಿರಬೇಕು. ಸಿಗುವುದಾದರೆ ಗಾಣದ ಎಣ್ಣೆಯನ್ನೇ ಉಪಯೋಗಿಸಬೇಕು. ಪೇಟೆಯಲ್ಲಿ ಮಾರುವ ಎಣ್ಣೆ ತುಪ್ಪ ಕೆಲಸಕ್ಕೆ ಬಾರದುದು. ಇದು ದುಃಖದ, ಅವಮಾನದ ಸಂಗತಿ! ಆದರೆ ಶಾಸನದಿಂದಲೋ, ಶಿಕ್ಷಣದಿಂದಲೋ, ವ್ಯಾಪಾರದಲ್ಲಿ ಪ್ರಾಮಾಣಿಕತೆ ಬಾರದಿರುವವರೆಗೂ ತಾಳ್ಮೆಯಿಂದ ಎಚ್ಚರಿಕೆಯಿಂದ ಪರಿಶುದ್ಧ ಪದಾರ್ಥವನ್ನು ನಾವು ಪಡೆಯಬೇಕು. ಪದಾರ್ಥದ ಗುಣವನ್ನು ನೋಡದೆಯೇ ಕೈಗೆ ಸಿಕ್ಕ ವಸ್ತುವನ್ನೇ ಎಂದಿಗೂ ಕೊಳ್ಳಬಾರದು. ಕಮಟು ನಾತದ ಎಣ್ಣೆ, ಬೆರಕೆ ತುಪ್ಪಗಳನ್ನು ತಿನ್ನುವುದಕ್ಕಿಂತ ಎಣ್ಣೆ ತುಪ್ಪಗಳನ್ನು ಬಿಟ್ಟು ಬಿಡುವುದೇ ಎಷ್ಟೋ ಲೇಸು. ಜಿಡ್ಡಿನ ಹಾಗೆ, ಮೈಗೆ ಸ್ವಲ್ಪ ಸಕ್ಕರೆಯೂ ಬೇಕು. ಸಿಹಿ ಹಣ್ಣುಗಳು ಬೇಕಾದಷ್ಟು ಸಕ್ಕರೆಯನ್ನು ಒದಗಿಸಿದರೂ ದಿನಕ್ಕೆ ಒಂದು ಒಂದೂವರೆ ಔನ್ಸು ಕೆಂಪುದೊ ಬಿಳಿಯದೊ ಸಕ್ಕರೆ ತಿಂದರೆ ಹಾನಿಯೇನಿಲ್ಲ. ಸಿಹಿ ಹಣ್ಣು ಸಿಗದಿದ್ದರೆ ಸಕ್ಕರೆ ಅಗತ್ಯವಾಗಬಹುದು. ಆದರೆ ಈಗ ಸಿಹಿ ಪದಾರ್ಥಗಳಿಗೆ ಕೊಡುತ್ತಿರುವ ಅತಿ ಪ್ರಾಮುಖ್ಯತೆ ತಪ್ಪು. ಪಟ್ಟಣದ ಜನ ಸಿಹಿ ಪದಾರ್ಥಗಳನ್ನು ಹೆಚ್ಚಾಗಿ ತಿನ್ನುತ್ತಾರೆ. ಹಾಲುಖೋವ, ಹಾಲಿನ ಸಿಹಿ ತಿಂಡಿಗಳು, ಇತರ ಸಿಹಿ ತಿಂಡಿಗಳನ್ನು ತುಂಬಾ ಬಳಸುತ್ತಾರೆ. ಇವೆಲ್ಲವೂ ಅನಾವಶ್ಯಕ. ಅತಿ ಸ್ವಲ್ಪವಾಗಿ ಅಲ್ಲದಿದ್ದರೆ ಹಾನಿಕರ. ಲಕ್ಷಾಂತರ ಜನರಿಗೆ ಸಾಧಾರಣ ಊಟವೂ ಲಭಿಸದೆ ಇರುವ ದೇಶದಲ್ಲಿ, ಸಿಹಿ ತಿಂಡಿಗಳನ್ನೂ ರಸ ಭಕ್ಷ್ಯಗಳನ್ನೂ ತಿನ್ನುವುದು ದರೋಡೆಗೆ ಸಮವೆಂದು ಯಾವ ಉತ್ಪ್ರೇಕ್ಷೆಯ ಅಂಜಿಕೆಯೂ ಇಲ್ಲದೆ ಹೇಳಬಹುದು.

ಸಿಹಿ ತಿಂಡಿ ಬಗ್ಗೆ ಹೇಳಿದುದೆಲ್ಲ, ಅಷ್ಟೇ ಮಟ್ಟಿಗೆ, ಎಣ್ಣೆ ತುಪ್ಪಗಳಿಗೂ ಅನ್ವಯಿಸುತ್ತದೆ. ತುಪ್ಪ ಅಥವಾ ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು ತಿನ್ನುವ ಅಗತ್ಯವೇ ಇಲ್ಲ. ಪೂರಿ, ಲಡ್ಡು ಮಾಡಲು ತುಪ್ಪವನ್ನು ಉಪಯೋಗಿಸುವುದು ವಿಚಾರಹೀನವಾದ ದುಂದುಗಾರಿಕೆ. ಅಭ್ಯಾಸವಿಲ್ಲದವರು ಈ ತಿಂಡಿಗಳನ್ನು ತಿನ್ನಲು ಸಾಧ್ಯವೇ ಇಲ್ಲ. ಉದಾಹರಣೆ: ಇಂಗ್ಲೀಷಿನವರು ನಮ್ಮ ದೇಶಕ್ಕೆ ಮೊದಲು ಬಂದಾಗ, ನಮ್ಮ ಸಿಹಿಪದಾರ್ಥಗಳನ್ನಾಗಲಿ ಕರಿದ ತಿಂಡಿಗಳನ್ನಾಗಲಿ ತಿನ್ನಲಾಗುವುದಿಲ್ಲ. ಹಾಗೂ ತಿಂದವರು ಕಾಯಿಲೆ ಬೀಳುವುದನ್ನು ಕಂಡಿದೇನೆ. ರುಚಿ ನಮ್ಮ ಹುಟ್ಟು ಗುಣವಲ್ಲ, ಕಲಿತ ಗುಣ. ಹಸಿದಾಗ ಮಾಡಿದ ಊಟದ ರುಚಿಗೆ ಪ್ರಪಂಚದ ಸಮಸ್ತ ರಸಭಕ್ಷ್ಯಗಳೂ ಸಾಟಿಯಲ್ಲ. ಹಸಿದವನು ಒಂದು

ಚೂರು ಒಣಕಲು ರೊಟ್ಟಿಯನ್ನೇ ತುಂಬಾ ಇಷ್ಟವಾಗಿ ರುಚಿಯಿಂದ ತಿನ್ನುತ್ತಾನೆ ಅದೇ ಹಸಿವಿಲ್ಲದವನಿಗೆ ಅತ್ಯುತ್ತಮ ಸಿಹಿ ತಿಂಡಿಯೂ ಬೇಡವಾಗುತ್ತದೆ.

ಎಷ್ಟು ಬಾರಿ, ಎಷ್ಟು ಪ್ರಮಾಣ ಊಟ ಮಾಡಬೇಕೋ ಈಗ ವಿಚಾರ ಮಾಡೋಣ. ಔಷಧ ಸೇವನೆಯ ಹಾಗೆ ದೇಹಪೋಷಣೆ ಒಂದು ಕರ್ತವ್ಯ ಎಂದು ಆಹಾರ ಸೇವನೆ ಮಾಡಬೇಕು, ಬಾಯಿಯ ರುಚಿಗಾಗಿ ಎಂದಿಗೂ ಅಲ್ಲ. ನಿಜವಾಗಿ ಹಸಿವಾದಾಗ ಹೊಟ್ಟೆ ತುಂಬಿದರೆ ಸಂತೋಷದ ಭಾವನೆ ಹುಟ್ಟುತ್ತದೆ ಆದ್ದರಿಂದ ಹಸಿದಿದ್ದರೆ ರುಚಿ, ಇಲ್ಲದಿದ್ದರೆ ಇಲ್ಲ ಎನ್ನಬಹುದು. ನಮ್ಮ ದುರಭ್ಯಾಸ ಗಳಿಂದ, ಕೃತಕ ಜೀವನಮಾರ್ಗದಿಂದ, ನಮ್ಮ ದೇಹಕ್ಕೆ ಏನು ಬೇಕೋ ಅದನ್ನು ಅರಿತವರೇ ಕಡಮೆ. ನಮ್ಮನ್ನು ಈ ಪ್ರಪಂಚಕ್ಕೆ ಕರೆತರುವ ನಮ್ಮ ತಂದೆ ತಾಯಿಗಳೇ ಆತ್ಮನಿಗ್ರಹವನ್ನು ಅನುಸರಿಸರು. ಅವರ ಅಭ್ಯಾಸಗಳು, ಅವರ ಜೀವನದ ರೀತಿ, ಕೊಂಚಮಟ್ಟಿಗೆ ಅವರ ಮಕ್ಕಳ ಮೇಲೂ ಪ್ರಭಾವ ಬೀರುತ್ತದೆ. ಗರ್ಭಿಣಿಯಾಗಿದ್ದಾಗ ಸೇವಿಸಿದ ಆಹಾರ ಮಗುವಿನ ಮೇಲೆ ಖಚಿತವಾಗಿ ಪರಿಣಾಮ ಮಾಡುತ್ತದೆ. ಅನಂತರ ಬಾಲ್ಯದಲ್ಲಿ, ತಾಯಿ ಎಲ್ಲ ಬಗೆಯ ರುಚಿ ರುಚಿ ತಿಂಡಿಗಳನ್ನು ಕೊಟ್ಟು ಅತಿ ಲಾಲನೆ ಮಾಡುತ್ತಾಳೆ. ತಾನು ತಿನ್ನುವುದ ರಲ್ಲೆಲ್ಲ ಒಂದೊಂದು ಚೂರನ್ನು ಮಗುವಿಗೂ ಕೊಡುತ್ತಾಳೆ. ಹೀಗಾಗಿ, ಬಾಲ್ಯ ದಿಂದಲೇ ಮಗುವಿನ ಜೀರ್ಣಕ್ರಮಕ್ಕೆ ಕೆಟ್ಟ ರೂಢಿಯೇ ಅಭ್ಯಾಸವಾಗುತ್ತದೆ. ಅಭ್ಯಾಸಗಳನ್ನು ಒಮ್ಮೆ ಅಂಟಿಸಿಕೊಂಡರೆ ಬಿಡುವುದು ಕಷ್ಟ. ಅವುಗಳನ್ನು ಬಿಟ್ಟು ಮುಕ್ತರಾದವರು ತೀರಾ ಕಡಮೆ. ಆದರೆ ತಾನೇ ತನ್ನ ಅಂಗರಕ್ಷಕ, ತನ್ನ ದೇಹ ಲೋಕಸೇವೆಗೆ ಮೀಸಲು ಎಂಬ ಅರಿವು ಮನುಷ್ಯನಿಗೆ ಉಂಟಾದಾಗ, ತನ್ನ ಶರೀರವನ್ನು ಯೋಗ್ಯ ರೀತಿಯಲ್ಲಿಟ್ಟುಕೊಳ್ಳುವ ನಿಯಮಗಳನ್ನು ತಿಳಿಯಲು ಅವನಿಗೆ ಆಸಕ್ತಿ ಹುಟ್ಟುತ್ತದೆ. ಆಗ ಅವನ್ನು ಪಾಲಿಸಲು ಕಷ್ಟಪಡುತ್ತಾನೆ.

ಈಗ ನಾವು ಒಂದು ಘಟ್ಟಕ್ಕೆ ಬಂದಿದೇವೆ. ಸಾಧಾರಣವಾಗಿ, ಕುಳಿತು ಕೆಲಸಮಾಡುವವರಿಗೆ ಬೇಕಾಗುವ – ಈ ಪುಟಗಳನ್ನು ಓದುವ ಸ್ತ್ರೀಪುರುಷರಲ್ಲಿ ಅವರೇ ಹೆಚ್ಚು – ವಿವಿಧ ಆಹಾರದ ಪ್ರಮಾಣಗಳನ್ನು ಇಲ್ಲಿ ಸೂಚಿಸಬಹುದು.

| | |
|---|---|
| ಹಸುವಿನ ಹಾಲು | ೨ ಪೌಂಡು |
| ಧಾನ್ಯಗಳು (ಗೋಧಿ, ಅಕ್ಕಿ, ಸಜ್ಜೆ ಇತ್ಯಾದಿ) | ೬ ಔನ್ಸು |
| ಕಾಯಿಪಲ್ಯ, ಸೊಪ್ಪು | ೩ ,, |
| ಇತರ | ೫ ,, |

| | |
|---|---|
| ಹಸಿಯಾಗಿ ತಿನ್ನುವುದು | ೧॥ ಔನ್ಸು |
| ತುಪ್ಪ | ೧॥ ,, |
| ಬೆಣ್ಣೆ | ೨ ,, |
| ಬೆಲ್ಲ ಅಥವ ಬಿಳಿಯ ಸಕ್ಕರೆ | ೧॥ ,, |

ಅವರವರ ರುಚಿಯಂತೆ, ದುಡ್ಡಿದ್ದಷ್ಟು ಹಣ್ಣು. ಅಂತೂ ದಿನಕ್ಕೆ ಎರಡು ನಿಂಬೆಹಣ್ಣು ತೆಗೆದುಕೊಳ್ಳುವುದು ಒಳ್ಳೆಯದು. ಹಣ್ಣಿನ ರಸವನ್ನು ಕಾಯಿ ಪಲ್ಯಕ್ಕೋ ಇಲ್ಲವೆ ಬಿಸಿ ಅಥವಾ ತಣ್ಣನೆ ನೀರಿಗೋ ಹಿಂಡಿ ತೆಗೆದುಕೊಳ್ಳಬೇಕು.

ಈ ತೂಕಗಳೆಲ್ಲ ಹಸಿ ಪದಾರ್ಥಗಳದು. ಉಪ್ಪಿನ ಪ್ರಮಾಣ ತಿಳಿಸಿಲ್ಲ. ಅದನ್ನು ರುಚಿಗೆ ತಕ್ಕಂತೆ ಆಮೇಲೆ ಸೇರಿಸಿಕೊಳ್ಳಬಹುದು.

ಎಷ್ಟು ಸಲ ಊಟ ಮಾಡಬೇಕು ? ಅನೇಕರು ದಿನಕ್ಕೆ ಎರಡು ಊಟ ಮಾಡುತ್ತಾರೆ. ಸಾಧಾರಣ ನಿಯಮ, ಮೂರು ಸಲ ಊಟಮಾಡಬೇಕು: ಬೆಳಗ್ಗೆ ಕೆಲಸಕ್ಕೆ ಹೊರಡುವ ಮುನ್ನ ಉಪಾಹಾರ; ಮಧ್ಯಾಹ್ನ ಊಟ; ಸಂಜೆಯಾದ ಮೇಲೆ ಊಟ. ಮೂರಕ್ಕಿಂತ ಹೆಚ್ಚು ಊಟ ಅಗತ್ಯವಲ್ಲ. ಪಟ್ಟಣಗಳಲ್ಲಿ ಜನರು ಸದಾ ಏನಾದರೂ ತಿನ್ನುತ್ತಲೇ ಇರುತ್ತಾರೆ. ಈ ರೂಢಿ ಅಪಾಯಕರ. ನಮ್ಮ ಜೀರ್ಣಾಂಗಗಳಿಗೆ ವಿಶ್ರಾಂತಿ ಬಹಳ ಅಗತ್ಯ.

## ೫

## ಮಸಾಲೆ

ಹಿಂದಿನ ಅಧ್ಯಾಯದಲ್ಲಿ ನಾನು ಮಸಾಲೆ ಪದಾರ್ಥಗಳ ವಿಷಯವನ್ನು ಎತ್ತಲಿಲ್ಲ. ಉಪ್ಪು ಮಸಾಲೆ ದಿನಸುಗಳ ದೊರೆ. ಉಪ್ಪಿಲ್ಲವೆ ಅನೇಕರು ಊಟ ವನ್ನೇ ಮಾಡಲಾರರು. ಈ ದೇಹಕ್ಕೆ ಲವಣಗಳು ಅಗತ್ಯ. ನಾವು ದಿನವೂ ಬಳಸುವ ಉಪ್ಪು ಒಂದು ಲವಣ. ಆಹಾರ ಪದಾರ್ಥಗಳಲ್ಲೆಲ್ಲ ಈ ಲವಣಗಳು ಸಹಜವಾಗಿ ಇರುತ್ತವೆ. ಆದರೆ ಅಶಾಸ್ತ್ರೀಯವಾಗಿ ಅಡುಗೆ ಮಾಡಿದಾಗ, ಉದಾ—ಅಕ್ಕಿಯನ್ನು ಬೇಯಿಸಿ ಗಂಜಿ ಬಸಿದಾಗ, ಆಲೂಗಡ್ಡೆಯನ್ನು ಇತರ ಕಾಯಿಪಲ್ಯಗಳನ್ನು ಬೇಯಿಸಿ ಆ ನೀರನ್ನು ಚೆಲ್ಲಿದಾಗ, ಅವುಗಳಲ್ಲಿದ್ದ ಲವಣ ಕಡಮೆಯಾಗುತ್ತದೆ. ಆಗ ಆಹಾರಕ್ಕೆ ಉಪ್ಪನ್ನು ಸೇರಿಸಿ ಆ ಕೊರತೆಯನ್ನು ಕಳೆಯಬೇಕು. ಉಪ್ಪು ದೇಹಕ್ಕೆ ಅತ್ಯಗತ್ಯವಾದ ಲವಣ. ಆದ್ದರಿಂದ ಅಲ್ಪ ಪ್ರಮಾಣದಲ್ಲಿ ಉಪ್ಪನ್ನು ಬಳಸಬಹುದೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದೇನೆ.

ಆದರೆ ಉಳಿದ ಅನೇಕ ಮಸಾಲೆ ದಿನಸು ದೇಹಕ್ಕೆ ಅಗತ್ಯವಿಲ್ಲ. ಉದಾ: ಒಣ ಮೆಣಸಿನಕಾಯಿ, ಹಸಿ ಮೆಣಸಿನಕಾಯಿ, ಮೆಣಸು, ಅರಿಸಿಣ, ಕೊತ್ತುಂಬರಿ ಬೀಜ, ಸಾಸುವೆ, ಮೆಂತ್ಯ, ಇಂಗು, ಸೋಪು ಇತ್ಯಾದಿ. ಇದನ್ನು ಉಪಯೋಗಿಸುವುದು ನಾಲಗೆಯ ರುಚಿಗೆ. ಈ ಐವತ್ತು ವರ್ಷದ ಸ್ವಂತ ಅನುಭವದಿಂದ ನಾನು ಹೇಳುತ್ತೇನೆ: ಆರೋಗ್ಯವಾಗಿ ಇರಲು ಇವು ಯಾವುದೂ ಅಗತ್ಯವಲ್ಲ. ಜೀರ್ಣಶಕ್ತಿ ಮಂದವಾದವರು ಔಷಧವೆಂದು ಇವನ್ನು ಕೆಲವು ಕಾಲ ಬಳಸಬಹುದು, ಅಗತ್ಯವಿದ್ದರೆ. ಆದರೆ ರುಚಿಗಾಗಿ ಇವನ್ನು ಬಳಸಬಾರದು; ಬಿಡಬೇಕು. ಎಲ್ಲಾ ಮಸಾಲೆ ಪದಾರ್ಥಗಳೂ, ಉಪ್ಪು ಕೂಡ, ಕಾಯಿಪಲ್ಯದ ಧಾನ್ಯದ ಸ್ವಾಭಾವಿಕರುಚಿಯನ್ನು ಕೆಡಿಸುತ್ತವೆ. ಈ ರುಚಿಗಳ ಆಸೆಯಿಂದ ನಾಲಗೆಯನ್ನು ಕೆಡಿಸಿಕೊಳ್ಳದವರಿಗೆ ಉಪ್ಪು ಮುಂತಾದ ಮಸಾಲೆ ಪದಾರ್ಥ ಸೇರಿಸಿ ಮಾಡಿದುದಕ್ಕಿಂತ ಅವನ್ನು ಸೇರಿಸದೆಯೆ ಮಾಡಿದ ಆಹಾರ ಹೆಚ್ಚು ರುಚಿಯಾಗಿರುತ್ತದೆ. ಆದುದರಿಂದ ಬೇಕಾದಾಗ ಉಪ್ಪನ್ನು ಜೊತೆಗೆ ಬಳಸಬಹುದು ಎಂದಿದ್ದೇನೆ. ಮೆಣಸಿನಕಾಯಿ ಬಾಯಿಗೆ ಖಾರ, ಹೊಟ್ಟೆಗೆ ಉರಿ. ಮೆಣಸಿನಕಾಯಿ ತಿನ್ನುವ ರೂಢಿಯಿಲ್ಲದವರಿಗೆ ಮೊದಮೊದಲು ಅದು ಸಹಿಸುವುದೇ ಇಲ್ಲ. ಮೆಣಸಿನಕಾಯಿ ಉಪಯೋಗಿಸಿ ಬಾಯಿ ಹುಣ್ಣು ಮಾಡಿಕೊಂಡ ಹಲವರನ್ನು ನೋಡಿದ್ದೇನೆ. ಒಬ್ಬ ಮನುಷ್ಯ ಇದ್ದ. ಅವನಿಗೆ ಮೆಣಸಿನಕಾಯಿ ಬಲು ಇಷ್ಟ. ಅದನ್ನೆ ಹೆಚ್ಚಾಗಿ ತಿಂದು ಅವನು ಅಕಾಲಮರಣಕ್ಕೆ ತುತ್ತಾದ. ದಕ್ಷಿಣ ಆಫ್ರಿಕಾದ ನೀಗ್ರೋ ಜನರು ಮಸಾಲೆಯನ್ನು ಮುಟ್ಟಲೇ ಮುಟ್ಟರು. ಆಹಾರದಲ್ಲಿ ಅರಿಸಿಣ ಬಣ್ಣವೇ ಬರಕೂಡದು ಅವರಿಗೆ. ಅದೇ ರೀತಿ ಇಂಗ್ಲೀಷರೂ ಮಸಾಲೆ ಪದಾರ್ಥಗಳನ್ನು ಸಹಜವಾಗಿ ಬಳಸರು.

## ೬

## ಚಹಾ ಕಾಫಿ ಕೋಕೋ

ಇವು ಯಾವುದೂ ದೇಹಕ್ಕೆ ಅಗತ್ಯವಲ್ಲ. ಚಹಾದ ರೂಢಿ ಚೀನಾ ದೇಶದಲ್ಲಿ ಮೊದಲಾಯಿತು ಎನ್ನುತ್ತಾರೆ. ಆ ದೇಶದಲ್ಲಿ ಚಹಾಕ್ಕೆ ಒಂದು ವಿಶೇಷ ಉಪಯೋಗವಿದೆ. ಚೀನಾದಲ್ಲಿ ಕುಡಿಯುವ ನೀರು ಶುದ್ಧವೆಂದು ಹೇಳುವಂತೆಯೆ ಇಲ್ಲ. ಆದ್ದರಿಂದ ನೀರನ್ನು ಕಾಯಿಸಿಯೇ ಕುಡಿಯಬೇಕು.

ಯಾರೋ ಒಬ್ಬ ಚೀನೀ ಮನುಷ್ಯ, ನೀರಿನ ಜೊತೆಗೆ ಸೇರಿಸಿ ಕಾಯಿಸಿದರೆ ನೀರಿಗೆ ಒಳ್ಳೆಯ ಬಂಗಾರದ ಬಣ್ಣವನ್ನು ಕೊಡುವ ಒಂದು ಸೊಪ್ಪನ್ನು ಕಂಡು ಹಿಡಿದ. ಅದರ ಹೆಸರು ಚಾ. ನೀರು ಮರಳದೆ ಇದ್ದರೆ ಆ ಬಣ್ಣ ಬರುವುದಿಲ್ಲ. ಹೀಗಾಗಿ ನೀರು ಮರಳಿದೆಯೋ ಇಲ್ಲವೋ ಪರೀಕ್ಷಿಸಲು ಈ ಸೊಪ್ಪು ಒಂದು ಅಮೋಘ ಸಾಧನವಾಯಿತು. ಅದರ ಪರೀಕ್ಷೆ ಹೀಗೆ—ಸೋಸಕದಲ್ಲಿ ಚಾಯೆಲೆಯನ್ನು ಹಾಕಿ ಅದರ ಮೇಲೆ ಮರಳುವ ನೀರನ್ನು ಹನಿಸುವುದು. ನೀರು ಮರಳುತ್ತಿದ್ದರೆ ಸೋಸಕದಿಂದ ಇಳಿದ ನೀರಿಗೆ ಬಂಗಾರದ ಬಣ್ಣವಿರುತ್ತದೆ. ಆ ನೀರಿಗೆ ಒಂದು ಬಗೆಯ ಮೃದು ರುಚಿಯನ್ನು ನೀಡುವುದೂ ಚಾಯೆಲೆಯ ಇನ್ನೊಂದು ಗುಣ.

ಮೇಲೆ ಹೇಳಿದಂತೆ ಮಾಡಿದರೆ ಚಹಾ ಹಾನಿಕರವಲ್ಲ. ಆದರೆ ಸಾಧಾರಣವಾಗಿ ಚಹಾ ಮಾಡುವ ರೀತಿ ಬೇರೆ. ಅದರಲ್ಲಿ ಗುಣವಂತೂ ಇಲ್ಲ, ಹಾನಿಯೋನೋ ಇದೆ. ಚಾಯೆಲೆಯಲ್ಲಿರುವ ಟ್ಯಾನಿನ್ ಮೈಗೆ ವಿಷ. ಚರ್ಮಾಲಯಗಳಲ್ಲಿ ತೊಗಲನ್ನು ಹದಮಾಡುವಾಗ ಅದನ್ನು ಸೆಟೆಸಲು ಟ್ಯಾನಿನ್ನನ್ನು ಬಳಸುತ್ತಾರೆ. ಅದನ್ನು ಹೊಟ್ಟೆಗೆ ತೆಗೆದುಕೊಂಡರೆ ಹೊಟ್ಟೆಯ, ಕರುಳಿನ ಲೋಳೆಯ ಮೆದುಪೊರೆಯನ್ನು ಅದು ಗಡುಸಾಗಿ ಮಾಡುತ್ತದೆ. ಇದರಿಂದ ಜೀರ್ಣಶಕ್ತಿಗೆ ಬಾಧಕವಾಗಿ ಅಗ್ನಿಮಾಂದ್ಯ ಬರುತ್ತದೆ. ಇಂಗ್ಲೆಂಡಿನಲ್ಲಿ ಅನೇಕ ಸ್ತ್ರೀಯರು ಟ್ಯಾನಿನ್ ಇರುವ ಚಹಾ ಕುಡಿಯುವ ರೂಢಿಯಿಂದ ಹಲವಾರು ರೋಗಗಳಿಗೆ ಗುರಿಯಾಗಿದಾರೆ ಎಂದು ಹೇಳುತ್ತಾರೆ. ಚಹಾ ಕುಡಿಯುವ ಚಟವಿದ್ದವರಿಗೆ ಹೊತ್ತಿಗೆ ಸರಿಯಾಗಿ ಒಂದು ಬಟ್ಟಲು ಚಹಾ ಸಿಗದಿದ್ದರೆ ಚಡಪಡಿಸಿಬಿಡುತ್ತಾರೆ. ನನ್ನ ಅಭಿಪ್ರಾಯದಲ್ಲಿ, ಚಹಾದ ಉಪಯೋಗ ಕಿಂಚಿತ್ತಾದರೂ ಇದ್ದರೆ ಅದೊಂದು ಬಿಸಿಬಿಸಿ ಸಿಹಿ ಪಾನೀಯ, ಅದರಲ್ಲಿ ಹಾಲು ಇದೆ ಎಂಬ ಅಂಶದಿಂದ. ಬಿಸಿ ನೀರಿಗೆ ಹಾಲು ಸಕ್ಕರೆ ಸೇರಿಸಿ ಕುಡಿದರೂ ಇದೇ ಲಾಭವಾಗುತ್ತದೆ.

ಚಹಾದ ಬಗ್ಗೆ ಹೇಳಿದುದೆಲ್ಲವೂ ಕಾಫಿಗೂ ಹೆಚ್ಚು ಕಡಿಮೆ ಅನ್ವಯಿಸುತ್ತದೆ. ಕಾಫಿ ಕಫವನ್ನು ಕತ್ತರಿಸುತ್ತದೆ, ವಾಯುಹರ. ಆದರೆ ವೀರ್ಯನಾಶಕಾರಿ, ಶಕ್ತಿಕ್ಷಯಕಾರಿ. ರಕ್ತವನ್ನು ನೀರಾಗಿಸುತ್ತದೆ. 'ಕಾಫಿಯಿಂದ ಮೂರು ನಷ್ಟ, ಎರಡು ಲಾಭ' ಎಂದು ಒಂದು ಹಿಂದುಸ್ತಾನಿ ಗಾದೆಯಿದೆ. ಈ ಗಾದೆ ಸರಿಯೋ ತಪ್ಪೋ, ಎಷ್ಟುಮಟ್ಟಿಗೋ, ನಾನರಿಯೆ.

ಕೋಕೋ ವಿಷಯದಲ್ಲಿಯೂ ನನಗೆ ಇದೇ ಅಭಿಪ್ರಾಯ. ತಿಂದದ್ದನ್ನು ಸಹಜವಾಗಿ ಅರಗಿಸಿಕೊಳ್ಳುವವರಿಗೆ ಚಹಾ, ಕಾಫಿ, ಕೋಕೋ ಯಾವುದರ ಸಹಾಯವೂ ಬೇಡ. ಆರೋಗ್ಯವಂತನಿಗೆ ಸಾಧಾರಣ ಆಹಾರದಿಂದಲೇ ಸಮಸ್ತ ತೃಪ್ತಿಯೂ ಸಿಗುತ್ತದೆ. ಈ ಮೂರನ್ನೂ ನಾನು ಧಾರಾಳವಾಗಿ ಸೇವಿಸಿದೇನೆ. ಅವನ್ನು ಸೇವಿಸುತ್ತಿದ್ದಾಗ ನನಗೆ ಏನೋ ಒಂದು ಕಾಯಿಲೆ ಯಿದ್ದೇ ಇರುತ್ತಿತ್ತು. ಅವನ್ನು ಬಿಟ್ಟುದರಿಂದ ನನಗೆ ಆದ ನಷ್ಟವೇನೂ ಇಲ್ಲ. ಲಾಭವೇ ಬೇಕಾದಷ್ಟು ಆಗಿದೆ. ಚಹಾ ಮೊದಲಾದದ್ದರಿಂದ ಏನು ತೃಪ್ತಿ ಸಿಗುತ್ತಿತ್ತೋ ಕಾಯಿಪಲ್ಯದ ಸಾರಿನಿಂದಲೂ ಅದೇ ತೃಪ್ತಿ ನನಗೆ ಸಿಗುತ್ತದೆ. ಬಿಸಿನೀರಿಗೆ ಜೇನುತುಪ್ಪ, ನಿಂಬೆಯ ರಸಗಳನ್ನು ಬೆರೆಸಿದರೆ ಸೊಗಸಾದ ಆರೋಗ್ಯಕರ, ಪುಷ್ಟಿಕರ ಪಾನೀಯವಾಗುತ್ತದೆ. ಕಾಫಿ ಚಹಾಗಳಿಗೆ ಪ್ರತಿ ಯಾಗಿ ಬಳಸಬಹುದು.

## ೭

## ಮಾದಕ ಪದಾರ್ಥಗಳು

ಹಿಂದುಸ್ತಾನದಲ್ಲಿ ಬಳಕೆಯಲ್ಲಿರುವ ಮಾದಕ ಪದಾರ್ಥಗಳು—ಮದ್ಯ, ಭಂಗಿ, ಗಾಂಜಾ, ಹೊಗೆಸೊಪ್ಪು, ಅಫೀಮು. ಮದ್ಯ ಎಂದರೆ ಈ ದೇಶ ದಲ್ಲಿಯೇ ಆಗುವ ಹೆಂಡ–ಸಾರಾಯಿ, ಪರದೇಶಗಳಿಂದ ಬರುವ ಸಾರಾಯಿ, ಅರಕ ಎಲ್ಲವೂ. ಇವೆಲ್ಲವನ್ನೂ ಕಡ್ಡಾಯವಾಗಿ ವರ್ಜಿಸಬೇಕು. ಮದ್ಯ ಮನುಷ್ಯನನ್ನು ಭ್ರಮರಿಸುತ್ತದೆ. ಅದರ ಅಮಲಿನಲ್ಲಿದ್ದಾಗ ಅವನು ಯಾವ ಉಪಯುಕ್ತ ಕಾರ್ಯವನ್ನೂ ಮಾಡಲಾರ. ಮದ್ಯಪಾನದ ಚಟಕ್ಕೆ ಬಿದ್ದವರು ತಾವೂ ಹಾಳಾಗಿ ತಮ್ಮವರನ್ನೂ ಹಾಳುಮಾಡುತ್ತಾರೆ. ಅವರಿಗೆ ಗಾಂಭೀರ್ಯ, ಔಚಿತ್ಯ ಎಲ್ಲವೂ ಮಾಯವಾಗುತ್ತವೆ.

ಮಿತವಾಗಿ ಮದ್ಯಪಾನಮಾಡಿದರೆ ಒಳ್ಳೆಯದು ಎನ್ನುವ ಒಂದು ವಿಚಾ ರವೂ ಇದೆ. ನನಗೆ ಅವರ ವಾದದಲ್ಲಿ ಸ್ವಲ್ಪವಾದರೂ ಹುರುಳು ಕಂಡಿಲ್ಲ. ಅವರ ವಾದವನ್ನು ಒಂದುವೇಳೆ ಒಪ್ಪಿದರೂ ಈ ಮಾನವವರ್ಗದಲ್ಲಿ ಅಸಂಖ್ಯ ಜನ ಶಿಸ್ತಿಗೆ ಒಳಪಟ್ಟಿರುವವರಲ್ಲ ಎಂಬುದನ್ನು ಗಮನಿಸಲೇಬೇಕಲ್ಲ. ಆದ್ದ ರಿಂದ ಈ ಬಹುಸಂಖ್ಯೆಯ ಜನರ ಹಿತಕ್ಕಾಗಿಯಾದರೂ ಮದ್ಯಪಾನವನ್ನು ನಿಷೇಧಿಸುವುದು ನಮ್ಮ ಕರ್ತವ್ಯ.

ಪಾರಸೀಗಳು ತಾಳೆಹೆಂಡವನ್ನು ಬಹಳವಾಗಿ ಸಮರ್ಥಿಸಿದಾರೆ. ತಾಳೆ ಹೆಂಡ ಮಾದಕವಾದರೂ ಆಹಾರ ಪದಾರ್ಥ, ಜೀರ್ಣಕಾರಿ ಎಂದು ಅವರ ವಾದ. ಈ ವಾದವನ್ನು ಕೂಲಂಕಷವಾಗಿ ಪರಿಶೀಲಿಸಿದೇನೆ. ಇದರ ಬಗ್ಗೆ ಬೇಕಾದಷ್ಟು ಪುಸ್ತಕಗಳನ್ನು ಓದಿದೇನೆ. ಆದರೆ ತಾಳೆಹೆಂಡ ಬಡವರನ್ನು ಯಾವ ಅಧೋಗತಿಗೆ ಇಳಿಸುತ್ತದೆಯೋ ಕಣ್ಣಾರೆ ಕಂಡಿದೇನೆ. ಆದ್ದರಿಂದ ಮನುಷ್ಯನ ಆಹಾರದಲ್ಲಿ ಇದಕ್ಕೆ ಸ್ಥಾನವಿಲ್ಲ ಎಂಬ ತೀರ್ಮಾನಕ್ಕೆ ಬಂದಿದೇನೆ.

ತಾಳೆ ಹೆಂಡದಿಂದ ಬರುತ್ತವೆ ಎಂಬ ಲಾಭಗಳೆಲ್ಲ ಸಮಸ್ತ ಆಹಾರ ಪದಾರ್ಥಗಳಲ್ಲಿಯೂ ಇವೆ. ತಾಳೆ ಹೆಂಡ, ತಾಳೆ ಖರ್ಜೂರದ ಗಿಡಗಳ ರಸ ದಿಂದ ಮಾಡಿದುದು. ಆ ರಸವನ್ನು ನೀರಾ ಎನ್ನುತ್ತಾರೆ. ನೀರಾ ಕುಡಿದು ಅನೇಕರು ಅಜೀರ್ಣವನ್ನು ಹೋಗಲಾಡಿಸಿಕೊಂಡಿದಾರೆ. ನಾನೂ ನೀರಾ ಕುಡಿದು ನೋಡಿದೇನೆ. ಜೀರ್ಣಕಾರಿಯಾಗಿ ಕಾಣದಿದ್ದರೂ ಕಬ್ಬಿನಹಾಲಿನ ಹಾಗೆ ಇದೂ ಒಂದು ಆಹಾರ ಎನಿಸಿತು. ಬೆಳಿಗ್ಗೆ ಚಹಾ ಕುಡಿಯುವ ಬದಲು ಒಂದು ಲೋಟಾ ನೀರಾ ಕುಡಿದರೆ ಮತ್ತೇನೂ ತಿಂಡಿ ಬೇಕಾಗುವುದಿಲ್ಲ. ಕಬ್ಬಿನ ಹಾಲಿನಂತೆ ತಾಳೆಯ ರಸವನ್ನೂ ಕುದಿಸಿ ತಾಳೆಬೆಲ್ಲವನ್ನು ಮಾಡಬಹುದು. ನಮ್ಮ ದೇಶದಲ್ಲಿ ಅನೇಕ ಬಗೆಯ ತಾಳೆ ಗಿಡಗಳು ಸಹಜವಾಗಿ ಬೆಳೆಯುತ್ತವೆ. ಎಲ್ಲದರಲ್ಲೂ ಪಾನಯೋಗ್ಯ ರಸವಿದೆ. ನೀರಾ ಬಹು ಬೇಗನೆ ಹಳಸುತ್ತದೆ. ಆದ್ದರಿಂದ ಒಡನೆಯೆ, ಗಿಡದಿಂದ ಇಳಿಸಿದೊಡನೆಯೆ, ಕುಡಿಯುವುದು ಉತ್ತಮ. ಹೀಗೆ ನೀರಾ ಸೇವನೆ ಮಾಡುವುದು ಎಲ್ಲರಿಗೂ ಸಾಧ್ಯವಿಲ್ಲ. ಆದ್ದರಿಂದ ನೀರಾ ವನ್ನು ಬೆಲ್ಲ ಮಾಡುವುದೇ ಉತ್ತಮ. ಕಬ್ಬಿನ ಬೆಲ್ಲದ ಬದಲು ತಾಳೆ ಬೆಲ್ಲವನ್ನೇ ಬಳಸಬಹುದು. ಕೆಲವರು ಕಬ್ಬಿನ ಬೆಲ್ಲದ ಬದಲು ತಾಳೆ ಬೆಲ್ಲವನ್ನೇ ಬಳಸು ತ್ತಾರೆ. ತಾಳೆ ಬೆಲ್ಲ ಆ ಬೆಲ್ಲಕ್ಕಿಂತ ಕಡಮೆ ಸಿಹಿ. ಆದ್ದರಿಂದ ಹೆಚ್ಚು ತಿನ್ನ ಬಹುದು. ಅಖಿಲ ಭಾರತ ಗ್ರಾಮೋದ್ಯೋಗ ಸಂಘ ತಾಳೆ ಬೆಲ್ಲದ ಪ್ರಚಾರ ವನ್ನು ಸಾಕಷ್ಟು ಮಾಡಿದೆ. ಇನ್ನೂ ಎಷ್ಟೋ ಮಾಡಬೇಕು. ಹೆಂಡಕ್ಕಾಗಿ ಉಪಯೋಗಿಸುವ ಮರಗಳನ್ನು ಬೆಲ್ಲಕ್ಕಾಗಿ ಉಪಯೋಗಿಸಿದರೆ ಹಿಂದುಸ್ತಾನದಲ್ಲಿ ಸಕ್ಕರೆಯ ಅಭಾವವೇ ಇರದು. ಬಡವರಿಗೆ ಅಗ್ಗವಾಗಿ ಬೆಲ್ಲ ಸಿಕ್ಕೀತು. ತಾಳೆ ಬೆಲ್ಲದ ಕಾಕಂಬಿಯನ್ನೂ ಸಕ್ಕರೆಯನ್ನೂ ಮಾಡಬಹುದು. ಆದರೆ ಸಕ್ಕರೆಗಿಂತ ಬೆಲ್ಲವೇ ಗುಣದಲ್ಲಿ ಶ್ರೇಷ್ಠ. ಬೆಲ್ಲದಲ್ಲಿರುವ ಲವಣಗಳು ಸಕ್ಕರೆ ಮಾಡುವಾಗ ಹೋಗುತ್ತವೆ. ಬೆಳ್ಳನೆ ಮೈದಾಹಿಟ್ಟು, ಗಿರಣಿ ಮಾಡಿಸಿದ ಅಕ್ಕಿ ತಮ್ಮ ಆಹಾ

ರದ ಅಂಶಗಳನ್ನು ಕಳೆದುಕೊಳ್ಳುವಂತೆಯೇ ಸಕ್ಕರೆಯಲ್ಲಿಯೂ ಬೆಲ್ಲದ ಪೌಷ್ಟಿಕ ಗುಣ ಕಳೆದುಹೋಗುತ್ತದೆ. ಸಾಧಾರಣವಾಗಿ ಆಹಾರ ಪದಾರ್ಥಗಳನ್ನು ಸಹಜ ರೂಪದಲ್ಲಿ ಸೇವಿಸುವುದೇ ಸರಿ, ಅದೇ ಲಾಭದಾಯಕ.

ತಾಳೆ ಹೆಂಡದ ಪ್ರಸ್ತಾಪದಿಂದ ನೀರಾ, ಅಲ್ಲಿಂದ ಬೆಲ್ಲ, ಹೀಗೆ, ಬಂದೆ. ಮತ್ತೆ ಮದ್ಯದ ವಿಷಯಕ್ಕೇ ಹೋಗೋಣ.

ಮದ್ಯಪಾನದ ದುಷ್ಟ ಪರಿಣಾಮದ ಬಗ್ಗೆ ನನಗಿರುವಷ್ಟು ಅನುಭವ ಸಾರ್ವಜನಿಕ ಕಾರ್ಯಕರ್ತರಿಗೆ ಯಾರಿಗೂ ಇರಲಾರದು. ದಕ್ಷಿಣ ಆಫ್ರಿಕಾದಲ್ಲಿ ಕೆಲಸ ಮಾಡಲು ಬಂದ ಭಾರತೀಯ ಕೂಲಿಗಾರರೆಲ್ಲರೂ ಕುಡುಕರು. ಡಾಕ್ಟರರ ಅನುಮತಿ ಪತ್ರವಿಲ್ಲದೆ ಭಾರತೀಯರು ಮನೆಗಳಿಗೆ ಮದ್ಯವನ್ನು ಒಯ್ಯುವಂತಿರಲಿಲ್ಲ; ಅಲ್ಲಿನ ಕಾನೂನು ಹಾಗಿತ್ತು. ಹೆಂಡದಂಗಡಿಗೆ ಹೋಗಿ ಅಲ್ಲಿ ಮನತಣಿಯೆ ಕುಡಿಯಬಹುದಿತ್ತು. ಹೆಂಗಸರೂ ಸಹ ಈ ದುಷ್ಟ ಚಟಕ್ಕೆ ಬಲಿಯಾಗಿದ್ದರು. ಅತಿ ದಯನೀಯ ಸ್ಥಿತಿಯಲ್ಲಿ ನಾನವರನ್ನು ನೋಡಿದೇನೆ. ಈ ಹೆಂಡದಂಗಡಿಗಳ ಮುಂದಿನ ದೃಶ್ಯಗಳನ್ನು ಕಂಡವರು ಯಾರೂ ಮದ್ಯಪಾನವನ್ನು ಸಮರ್ಥಿಸಲಾರರು.

ಆಫ್ರಿಕಾದ ನೀಗ್ರೋಗಳು ಮೊದಲು ಕುಡಿಯುತ್ತಿರಲಿಲ್ಲ. ಈಗ ಕುಡಿತ ಬಂದು ಅವರು ಹಾಳಾಗಿದಾರೆ. ನೀಗ್ರೋ ಕೆಲಸಗಾರರು ಅನೇಕರು ತಮ್ಮ ಗಳಿಕೆಯನ್ನೆಲ್ಲಾ ಕುಡಿತಕ್ಕೇ ಹಾಳು ಮಾಡಿ, ಅವರ ಬಾಳು ಗಾಂಭೀರ್ಯಗೆಟ್ಟಿದನ್ನು ನೋಡಿದೇನೆ.

ಇಂಗ್ಲೀಷರದಿನ್ನೇನು? ದೊಡ್ಡ ದೊಡ್ಡ ಮನುಷ್ಯರು ಮದ್ಯದ ಅಮಲಿನಿಂದ ಬೀದಿಯಲ್ಲಿ ಬಿದ್ದು ಉರುಳಾಡುತ್ತಿದ್ದುದನ್ನು ನೋಡಿದೇನೆ. ಇದರಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ಯುದ್ಧಕಾಲದಲ್ಲಿ ಅನೇಕ ಇಂಗ್ಲೀಷರು ಟ್ರಾನ್ಸ್ವಾಲನ್ನು ಬಿಡಬೇಕಾಯಿತು. ಕೆಲವರನ್ನು ನಮ್ಮ ಮನೆಯೊಳಗೆ ಸೇರಿಸಬೇಕಾಯಿತು. ಅವರಲ್ಲೊಬ್ಬ ಇಂಜನೀಯರು, ಹೆಂಡದ ಅಮಲು ಇಲ್ಲದಾಗ ಬಹಳ ಒಳ್ಳೆಯ ಮನುಷ್ಯ. ಅವನು ಬ್ರಹ್ಮಜ್ಞಾನದ ಸಮಾಜದವನು. ದೌರ್ಭಾಗ್ಯದಿಂದ ಕುಡಿತವನ್ನು ಕಲಿತಿದ್ದ. ಕುಡಿದಾಗ ಅವನಿಗೆ ಮೈ ಮೇಲೆ ಜ್ಞಾನವೇ ಇರುತ್ತಿರಲಿಲ್ಲ. ಈ ಕೆಟ್ಟ ಚಾಳಿಯನ್ನು ಬಿಡಲು ಅವನು ಬಹಳ ಕಷ್ಟಪಟ್ಟ. ಸಾಧ್ಯವಾಗಲಿಲ್ಲವೆಂದು ಕಾಣುತ್ತದೆ.

ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದಾಗ ಮದ್ಯದ ದುಷ್ಪರಿಣಾಮದ

ಅನುಭವ ಮತ್ತೆ ಆಯಿತು. ರಾಜರು ಹಲವರು ಕುಡಿತದಿಂದ ಹಾಳಾಗುತ್ತಿದಾರೆ. ಅವರ ಹಾಗೇ ಅನೇಕ ಶ್ರೀಮಂತ ತರುಣರು. ಹೆಂಡದ ಪರಿಣಾಮ ಕೂಲಿಗಾರರಲ್ಲಂತೂ ಕರುಣಾಜನಕ. ಇಂಥ ಕಟುತರ ಅನುಭವಗಳಿಂದ ನಾನು ಮದ್ಯಪಾನಕ್ಕೆ ಸಂಪೂರ್ಣ ವಿರೋಧಿಯಾಗಿರುವುದು ಯಾರಿಗೂ ಆಶ್ಚರ್ಯವನ್ನುಂಟು ಮಾಡಲಾರದು.

ಒಂದು ಮಾತಿನಲ್ಲಿ, ಶರೀರ, ನೀತಿ, ಬುದ್ಧಿ, ಭಾಗ್ಯ ಎಲ್ಲ ಬಗೆಯಲ್ಲೂ ಮದ್ಯ ಸರ್ವವಿನಾಶಕಾಗಿ

## ೮

## ಅಫೀಮು

ಮದ್ಯದ ಬಗ್ಗೆ ನಾನು ಮಾಡಿದ ಟೀಕೆ ಸಮಸ್ತವೂ ಅದೇ ರೀತಿ ಅಫೀಮಿಗೂ ಅನ್ವಯಿಸುತ್ತದೆ. ಆದರೆ ಎರಡರ ಗುಣ ಬೇರೆ ಬೇರೆ. ಮದ್ಯವನ್ನು ಸೇವಿಸಿದರೆ ಮನುಷ್ಯ ಪುಂಡನಾಗುತ್ತಾನೆ, ಅಫೀಮನ್ನು ಸೇವಿಸಿದರೆ ಸೋಮಾರಿ, ಮಂದಬುದ್ಧಿ ಆಗುತ್ತಾನೆ. ಯಾವಾಗಲೂ ಅರೆನಿದ್ದೆಯಲ್ಲಿ ಮುಳುಗಿ ಉಪಯುಕ್ತವಾದ ಕೆಲಸ ಯಾವುದನ್ನೂ ಮಾಡಲಾರದವನಾಗುತ್ತಾನೆ. ಮದ್ಯಪಾನದ ದುಷ್ಟ ಪರಿಣಾಮ ಕಣ್ಣಿಗೆ ಎದ್ದು ಕಾಣುತ್ತವೆ. ಅಫೀಮಿನ ಪ್ರಭಾವ ಅಷ್ಟು ಸ್ಪಷ್ಟವಾಗಿ ಕಾಣುವುದಿಲ್ಲ. ಅಫೀಮಿನ ದುಷ್ಟ ಪರಿಣಾಮ ಎಂಥದೋ ನೋಡಬೇಕೆನ್ನುವವರು ಅಸ್ಸಾಮಿಗಾಗಲಿ ಚೀನಾಕ್ಕಾಗಲಿ ಹೋಗಿ ನೋಡಬೇಕು. ಆ ಪ್ರದೇಶಗಳಲ್ಲಿ ಸಾವಿರಾರು ಜನ ಈ ಮಾದಕ ಪದಾರ್ಥಕ್ಕೆ ಬಲಿಯಾಗಿದಾರೆ. ಅವರನ್ನು ನೋಡಿದರೆ ಸಾವನ್ನು ಅಪ್ಪಿಕೊಂಡು ಬದುಕುತ್ತಿದಾರೆ ಈ ಜನ ಎನಿಸುತ್ತದೆ.

ಚೀನಾದಲ್ಲಿ ಅಫೀಮಿನ ಹಾವಳಿ ಹೆಚ್ಚು ಎಂದು ಹೇಳುತ್ತಾರೆ. ಚೀನೀ ಜನರ ಮೈಕಟ್ಟು ಭಾರತೀಯರ ಮೈಕಟ್ಟಿಗಿಂತಲೂ ಉತ್ತಮವಾದುದು. ಆದರೆ ಅಫೀಮಿನ ಚಾಳಿಗೆ ಬಿದ್ದ ಚೀನೀ ಜನ ಬಹಳ ದುರ್ಬಲರಾಗಿ ಜೀವಚ್ಛವಗಳಂತೆ ಕಾಣುತ್ತಾರೆ. ಒಮ್ಮೆ ಅಫೀಮಿನ ಚಟ ಮೊದಲಾದರೆ ಆ ಹೊತ್ತಿಗೆ ಸರಿಯಾಗಿ ಅಫೀಮಿನ ಗುಳಿಗೆಯನ್ನು ಸಂಪಾದಿಸಲು ಮನುಷ್ಯ ಏನು ಬೇಕಾದರೂ ಮಾಡುತ್ತಾನೆ.

ಅನೇಕ ವರ್ಷಗಳ ಹಿಂದೆ ಚೀನಾಕ್ಕು ಇಂಗ್ಲೆಂಡಿಗೂ 'ಅಫೀಮು ಯುದ್ಧ'

ನಡೆಯಿತು. ಚೀನಾಕ್ಕೆ ಭಾರತದಿಂದ ಅಫೀಮನ್ನು ಕೊಳ್ಳುವ ಮನಸ್ಸಿಲ್ಲ. ಇಂಗ್ಲೀಷರಿಗೆ ಅಫೀಮನ್ನು ಚೀನಾಕ್ಕೆ ಹೇಗಾದರೂ ಮಾರಬೇಕೆಂಬ ಆಸೆ. ಭಾರತದ್ದೂ ಸ್ವಲ್ಪ ತಪ್ಪಿತ್ತು. ಕೆಲವರು ಭಾರತೀಯರೂ ಅಫೀಮಿನ ಗುತ್ತಿಗೆ ಹಿಡಿದಿದ್ದರು. ಆ ವ್ಯಾಪಾರ ಲಾಭದಾಯಕವಾಗಿತ್ತು. ಬೊಕ್ಕಸಕ್ಕೆ ಅಫೀಮಿನ ಬಾಬಿನಿಂದ ಕೋಟಿಗಟ್ಟಲೆ ರೂಪಾಯಿ ಬರುತ್ತಿತ್ತು. ನಿಸ್ಸಂದೇಹವಾಗಿ ಈ ವ್ಯಾಪಾರ ದುರ್ನೀತಿಯ ವ್ಯಾಪಾರ. ಆದರೂ ಅಭಿವೃದ್ಧಿಯಾಯಿತು. ಕಟ್ಟಕಡೆಗೆ ಇಂಗ್ಲೆಂಡಿನಲ್ಲಿಯೇ ಬಲವಾದ ಚಳುವಳಿಯಾಗಿ ಈ ವ್ಯಾಪಾರ ನಿಂತು ಹೋಯಿತು. ಜನರನ್ನು ನಾಶಮಾಡುವ ಇಂಥ ವಿಷಯವನ್ನು ಒಂದು ಗಳಿಗೆಯೂ ಸೈರಿಸಬಾರದು.

ಅಫೀಮು ಮಾದಕ ದ್ರವ್ಯ ಎಂದು ಹೇಳಿದೆ. ಆದರೆ ಅಫೀಮು ಔಷಧವೂ ಹೌದು ಎಂಬುದರಲ್ಲಿ ಸಂದೇಹವಿಲ್ಲ. ಔಷಧಕ್ಕೆ ಅಫೀಮಿಲ್ಲದೆ ಅನೇಕ ವೇಳೆ ಸಾಧ್ಯವಿಲ್ಲ. ಆದ ಮಾತ್ರಕ್ಕೆ ಅದನ್ನು ಮಾದಕ ಪದಾರ್ಥವಾಗಿ ಬಳಸುವುದು ಕ್ಷಮ್ಯವಲ್ಲ. ಅಫೀಮು ಹೇಳಿಕೇಳಿ ವಿಷ. ಅದನ್ನು ಸೇವಿಸುವುದನ್ನು ನಿಷೇಧಿಸಲೇ ಬೇಕು.

## ೯

## ಹೊಗೆಸೊಪ್ಪು

ಹೊಗೆಸೊಪ್ಪು ಮನುಷ್ಯ ಜಾತಿಯ ಸರ್ವನಾಶ ಮಾಡಿದೆ. ಅದರ ಸುಳಿಗೆ ಒಮ್ಮೆ ಸಿಕ್ಕರೆ ಬಿಡಿಸಿಕೊಂಡು ಹೊರಗೆ ಬರುವುದೇ ಕಷ್ಟ. ಹೊಗೆಸೊಪ್ಪಿನ ಬಳಕೆ ಲೋಕದಲ್ಲಿ ಎಲ್ಲಾ ಕಡೆಯಲ್ಲಿಯೂ ಒಂದಲ್ಲ ಒಂದು ರೂಪದಲ್ಲಿ ಇದ್ದೇ ಇದೆ. ಮಾದಕಗಳಲ್ಲಿ ಅತ್ಯಂತ ಮಾದಕ ಎಂದಿದಾರೆ ಟಾಲ್‌ಸ್ಟಾಯ್ ಹೊಗೆಸೊಪ್ಪನ್ನು. ಆ ಮಹಾಪುರುಷನ ಈ ತೀರ್ಪು ನಮ್ಮ ಗಮನ–ಗೌರವಗಳಿಗೆ ಪಾತ್ರವಾಗಬೇಕು. ಚಿಕ್ಕಂದಿನಲ್ಲಿ ಟಾಲ್‌ಸ್ಟಾಯ್ ಹೊಗೆಸೊಪ್ಪು, ಮದ್ಯಗಳನ್ನು ಧಾರಾಳವಾಗಿಯೇ ಸೇವಿಸುತ್ತಿದ್ದರು. ಎರಡರ ಕೆಟ್ಟ ಪರಿಣಾಮವೂ ಅವರಿಗೆ ಗೊತ್ತು. ಇಷ್ಟಾದರೂ ಮಧ್ಯ, ಅಫೀಮುಗಳ ಬಗ್ಗೆ ಅಧಿಕಾರಯುತವಾಗಿ ಹೇಳಿದಂತೆ ನಾನು ಹೊಗೆಸೊಪ್ಪಿನ ವಿಷಯದಲ್ಲಿ ಹೇಳಲಾರೆ. ಆದರೆ ಹೊಗೆಸೊಪ್ಪಿನಿಂದ ಕಿಂಚಿತ್ತೂ ಲಾಭವಿಲ್ಲವೆಂಬುದನ್ನು ನಾನು ಖಂಡಿತ ಹೇಳಬಲ್ಲೆ. ಬತ್ತಿ ಸೇದುವುದು ಬರೀ ದುಂದುಗಾರಿಕೆ. ಒಬ್ಬ ಇಂಗ್ಲೀಷರವನು

ತಿಂಗಳಿಗೆ ೭೫ ರೂಪಾಯಿ ಹೊಗೆಸೊಪ್ಪಿಗಾಗಿ ವೆಚ್ಚ ಮಾಡುತ್ತಿದ್ದ. ಅವನಿಗೆ ತಿಂಗಳಿಗೆ ೩೭೫ ರೂ. ವರಮಾನ. ತಿಂಗಳ ವರಮಾನದಲ್ಲಿ ಐದರಲ್ಲೊಂದು ಪಾಲನ್ನೆ ಅವನು ಸೇದಿಬಿಡುತ್ತಿದ್ದ.

ಸಿಗರೇಟು ಬೀಡಿ ಸೇದುವವರು ಪರರ ಭಾವನೆಗಳಿಗೆ ಕಲ್ಲಾಗುತ್ತಾರೆ. ಸಿಗರೇಟು ಸೇದದವರಿಗೆ ಇದರ ಹೊಗೆ ಅಸಹನೀಯವಾಗಿರುತ್ತದೆ. ಆದರೂ ಪಕ್ಕದಲ್ಲಿರುವವರ ಭಾವನೆ ಹೇಗೇ ಇರಲಿ ಅದನ್ನು ಗಮನಿಸದೆ ತಮ್ಮ ಪಾಡಿಗೆ ತಾವು ಸಿಗರೇಟು ಸೇಮುವವರೇ ಹೆಚ್ಚು. ರೈಲಿನಲ್ಲಿ ಬಸ್ಸಿನಲ್ಲಿ ಇದು ಅನುಭವ ವಾಗುತ್ತದೆ.

ಹೊಗೆಸೊಪ್ಪು ಸೇದುವವರ ಬಾಯಿಂದ ಸದಾ ದುರ್ಗಂಧ ಹೊರಡು ತ್ತಿರುತ್ತದೆ. ಬಹುಶಃ ಹೊಗೆಸೊಪ್ಪು ಸೂಕ್ಷ್ಮ ಸುಕುಮಾರ ಭಾವನೆಗಳನ್ನು ಸಾಯಿಸುತ್ತದೆಯೇನೋ. ಅದಕ್ಕಾಗಿಯೇ ಜನರು ಹೊಗೆಸೊಪ್ಪು ಸೇದುತ್ತಾ ರೇನೋ. ಟಾಲ್‌ಸ್ಟಾಯಿಯ ಕತೆಗಳಲ್ಲಿ ಒಂದು ಪಾತ್ರ ಭಯಂಕರ ಕೃತ್ಯ ವೊಂದನ್ನು ಮಾಡಬೇಕಾಗಿತ್ತು. ಅವನು ಮೊದಲು ಹೆಂಡ ಕುಡಿಯುವಂತೆ ಮಾಡುತ್ತಾನೆ ಟಾಲ್‌ಸ್ಟಾಯ್. ಯಾರನ್ನೋ ಅವನು ಕೊಲ್ಲಬೇಕಾಗಿತ್ತು. ಕುಡಿದು ಅಮಲೇರಿದರೂ ಅವನು ಆ ಕೆಲಸ ಮಾಡಲು ಹಿಂಜರಿದ. ಏನೋ ಯೋಚಿಸುತ್ತ ಒಂದು ಸಿಗರೇಟು ಹಚ್ಚಿದ. ಆ ಹೊಗೆ ಸುರುಳಿಯಾಗಿ ಏರು ತ್ತಿರುವುದನ್ನು ನೋಡಿ 'ಎಂಥ ಹೇಡಿ ನಾನು ! ಈ ಕೊಲೆ ಮಾಡುವುದು ನನ್ನ ಕರ್ತವ್ಯ, ನನಗೆ ಮೀನ ಮೇಷವೇಕೆ ? ಏಳು, ಎದ್ದೇಳು, ನಿನ್ನ ಕೆಲಸಮಾಡು' ಎಂದುಕೊಂಡ. ಡೋಲಾಯಮಾನವಾಗಿದ್ದ ಅವನ ಮನಸ್ಸು ಹಾಗೆ ನಿರ್ಧರ ವಾಯಿತು. ಈ ವಾದ ಅಷ್ಟು ಮೊನಚಾಗಿಲ್ಲ. ಸಿಗರೇಟು ಸೇದುವವರೆಲ್ಲರೂ ಕೆಟ್ಟವರಲ್ಲ. ಸಿಗರೇಟು ಸೇದುವ ಕೋಟ್ಯಂತರ ಜನ ಸಾಮಾನ್ಯಜೀವನವನ್ನು ಸರಾಗವಾಗಿ ನಡಸುತ್ತಿದಾರೆ. ಆದರೂ ಮೇಲಿನ ಪ್ರಸಂಗವನ್ನು ವಿಚಾರವಂತರು ಗಮನಿಸಬೇಕು. ಸಿಗರೇಟು ಸೇದುವವನು ಚಿಕ್ಕಪುಟ್ಟ ಅಪರಾಧಗಳನ್ನು ಮಾಡುತ್ತ ಹೋಗುತ್ತಾನೆ, ಯಾರೂ ಗಮನಿಸದಂತೆ, ಎಂದು ಟಾಲ್‌ಸ್ಟಾಯ್ ಅಭಿಪ್ರಾಯವಿರಬಹುದು.

ಹಿಂದುಸ್ಥಾನದಲ್ಲಿ ಜನರು ಹೊಗೆಸೊಪ್ಪನ್ನು ಬೀಡಿ ಸಿಗರೇಟಿಗೆ, ನಶ್ಯಕ್ಕೆ, ಎಲೆಯಡಿಕೆಗೆ ಬಳಸುತ್ತಾರೆ. ನಶ್ಯದಿಂದ ಹಿತವಾಗುತ್ತದೆಂದು ಕೆಲವರು ತಿಳಿದಿದಾರೆ. ಕೆಲವರು ವೈದ್ಯರು ಹಕೀಮರು ಆ ಸಲಹೆ ಕೊಡುತ್ತಾರೆ. ಇದು

ಅನಗತ್ಯವೆಂದು ನಾನು ತಿಳಿದಿದೇನೆ. ಆರೋಗ್ಯವಂತನಿಗೆ ಇವು ಯಾವುದೂ ಬೇಡ.

ಈ ಮೂರರಲ್ಲಿ ಹೊಗೆಸೊಪ್ಪನ್ನು ಅಗಿಯುವುದು ಬಹಳ ಅನಿಷ್ಟ, ಬಹಳ ಕೊಳಕು. ಅದರ ಲಾಭ ಬರೀ ಕಲ್ಪನೆ. ಗುಜರಾತಿನಲ್ಲಿ ಒಂದು ಗಾದೆ ಇದೆ. 'ಬೀಡಿ ಮನೆಯೆನ್ನೆಲ್ಲಾ ಹೊಗೆ ಮಾಡುತ್ತದೆ, ನಶ್ಯ ಬಟ್ಟೆಗಳನ್ನು ಹಾಳು ಮಾಡುತ್ತದೆ, ಕಡ್ಡಿಪುಡಿ ಮನೆಯನ್ನೆಲ್ಲಾ ಕೊಳಕು ಮಾಡುತ್ತದೆ.'

ಜಾಣರಾದವರು ಹೊಗೆಸೊಪ್ಪಿನ ರಸವನ್ನು ಉಗುಳಲು ಒಂದು ಉಗುಳು ಪಾತ್ರೆಯನ್ನು ಬಳಸುತ್ತಾರೆ. ಆದರೆ ಹೆಚ್ಚು ಜನರು ನೆಲದ ಮೇಲೆ, ಗೋಡೆಗಳ ಮೇಲೆ ಉಗುಳುತ್ತಾರೆ ಸ್ವಲ್ಪವೂ ಸಂಕೋಚವಿಲ್ಲದೆ. ಬೀಡಿ ಸೇದುವವನು ಮನೆ ತುಂಬಾ ಹೊಗೆ ಮಾಡುತ್ತಾನೆ, ಮನೆಗೆ ಬೆಂಕಿ ಹತ್ತುವ ಸಂಭವವೂ ಉಂಟು. ನಶ್ಯ ಹಾಕುವವನ ಬಟ್ಟೆ ಹಾಳಾಗುತ್ತವೆ. ಕರವಸ್ತ್ರಗಳನ್ನಿಟ್ಟುಕೊಂಡು ಬಟ್ಟೆ ಕೊಳೆಯಾಗದಂತೆ ಮಾಡಿಕೊಳ್ಳುವವರು ಕೆಲವರಿದಾರೆ. ಆರೋಗ್ಯವನ್ನು ಬಯಸುವವರು ಈ ಕೆಟ್ಟ ಚಟಗಳ ದಾಸರಾದರೆ ಸಂಕಲ್ಪಪೂರ್ವಕ ಅವನ್ನು ಬಿಡಬೇಕು. ಕೆಲವರಿಗೆ ಒಂದು, ಕೆಲವರಿಗೆ ಮೂರೂ ಚಟ ಉಂಟು. ಅವರಿಗೆ ಆ ಚಟ ಅಸಹ್ಯವೆನಿಸುವುದೇ ಇಲ್ಲ. ನಿಧಾನವಾಗಿ ಯೋಚಿಸಿದರೆ ಮೂಗಿನಿಂದ ಹೊಗೆ ಬಿಡುವುದರಲ್ಲಿ, ಹಗಲೆಲ್ಲಾ ಬಾಯೊಳಗೆ ಎಲೆ ಹೊಗೆಸೊಪ್ಪನ್ನು ತುರುಕಿಕೊಂಡಿರುವುದರಲ್ಲಿ, ಗಳಿಗೆಗೊಮ್ಮೆ ನಶ್ಯದ ಡಬ್ಬಿ ತೆರೆದು ನಶ್ಯವನ್ನು ಮೂಗಿಗೇರಿಸುವುದರಲ್ಲಿ ಏನೂ ಗೌರವವಿಲ್ಲ. ಇವು ಮೂರೂ ಬಹಳ ಕೊಳಕು ಅಭ್ಯಾಸಗಳು.

## ೧೦
## ಬ್ರಹ್ಮಚರ್ಯ

ಬ್ರಹ್ಮಚರ್ಯ ಎಂಬ ಶಬ್ದದ ಅರ್ಥ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ನಡೆಸುವ ಜೀವನ ಎಂದು. ಆತ್ಮಸಂಯಮವಿಲ್ಲದೆ ಬ್ರಹ್ಮಸಾಕ್ಷಾತ್ಕಾರ ಸಾಧ್ಯವಲ್ಲ. ಆತ್ಮಸಂಯಮ ಎಂದರೆ ಇಂದ್ರಿಯನಿಗ್ರಹ, ಎಲ್ಲಾ ಇಂದ್ರಿಯಗಳ ಮೇಲೂ ಹಿಡಿತ. ಆದರೆ ಸಾಧಾರಣವಾಗಿ ಬ್ರಹ್ಮಚರ್ಯ ಎಂದರೆ ಜನನೇಂದ್ರಿಯ ನಿಗ್ರಹ, ಕಾಮವೃತ್ತಿ ನಿರೋಧಗಳ ಮೂಲಕ ವೀರ್ಯಪಾತವಾಗದಂತೆ ಮಾಡುವುದು ಬ್ರಹ್ಮಚರ್ಯ ಎಂದು ತಿಳಿಯುತ್ತಾರೆ. ಎಲ್ಲಾ ಇಂದ್ರಿಯಗಳನ್ನೂ ಹಿಡಿತದಲ್ಲಿಟ್ಟುಕೊಂಡವನಿಗೆ

ಇದು ಸಹಜ ಸಾಧ್ಯವಾಗುತ್ತದೆ. ಹಾಗೆ ಬ್ರಹ್ಮಚರ್ಯದ ಸಾಧನೆ ಸಹಜವಾದಾಗಲೇ ಬ್ರಹ್ಮಚಾರಿ(ಣಿ)ಗೆ ಅದರಿಂದ ಉತ್ತಮೋತ್ತಮ ಫಲ. ಅಂಥವನು ಕಾಮ ಕ್ರೋಧಾದಿ ವಿಕಾರಗಳಿಂದ ಮುಕ್ತನಾಗಿರಬೇಕು. ಆದರೆ ನಮ್ಮ ಕಣ್ಣಿಗೆ ಬೀಳುವ ಬ್ರಹ್ಮಚಾರಿಗಳಿಗೆ ಕೋಪವೇ ಬದುಕಿನ ಮುಖ್ಯ ಕಸಬಾಗಿ ಕಾಣುತ್ತದೆ.

ಈ ಜನರ ಗುರಿ ವೀರ್ಯಸ್ಖಲನವಾಗದಂತೆ ತಡೆಯುವುದು. ಬ್ರಹ್ಮಚರ್ಯದ ಸಾಮಾನ್ಯ ನಿಯಮಗಳನ್ನು ಕೂಡ ಪಾಲಿಸದೆಯೆ ಅವರು ಹಾಗೆ ಮಾಡಬಲ್ಲೆವೆಂದು ತಿಳಿಯುತ್ತಾರೆ. ಅದು ಸಾಧ್ಯವಾಗುವುದಿಲ್ಲ. ಅವರಲ್ಲಿ ಕೆಲವರು ಹುಚ್ಚರಾಗುತ್ತಾರೆ, ಕೆಲವರು ರೋಗಿಗಳಂತೆ ಕಾಣುತ್ತಾರೆ. ವೀರ್ಯಪಾತವನ್ನು ತಡೆಯಲು ಅವರಿಗೆ ಸಾಧ್ಯವಲ್ಲ. ಸ್ತ್ರೀಸಂಗ ಮಾಡದಷ್ಟು ನಿಗ್ರಹವಿದ್ದರೆ ತಮ್ಮ ಗುರಿಯನ್ನು ಸಾಧಿಸಿದಂತೆ ಎಂದು ತಿಳಿಯುತ್ತಾರೆ. ಸ್ತ್ರೀ ಸಂಗ ಮಾಡದಿದ್ದ ಮಾತ್ರಕ್ಕೇ ಅದು ಬ್ರಹ್ಮಚರ್ಯವೆನಿಸದು. ಸ್ತ್ರೀ ಸಂಗದ ಆಸೆಯಿರುವವರೆಗೆ ಅವನು ಬ್ರಹ್ಮಚರ್ಯವನ್ನು ಸಾಧಿಸಿಲ್ಲವೆಂದೇ ಹೇಳಬೇಕು. ಕಾಮವಾಸನೆಯನ್ನು ಸಂಪೂರ್ಣವಾಗಿ ಸುಟ್ಟು ಹಾಕಿದವನಿಗೆ ಮಾತ್ರವೇ ಜನನೇಂದ್ರಿಯ ನಿಗ್ರಹ ಸಾಧ್ಯ. ವೀರ್ಯಸ್ಖಲನವಾಗದಿರುವುದು ಬ್ರಹ್ಮಚರ್ಯದ ನೇರಾದ ಫಲ. ಆದರೆ ಅದಿಷ್ಟೇ ಅಲ್ಲ ಫಲ, ಪೂರ್ಣ ಬ್ರಹ್ಮಚಾರಿಯ ವಿಲಕ್ಷಣ ಅಲೌಕಿಕವಾದುದು. ಅವನ ಮಾತು, ಅವನ ವಿಚಾರ, ಅವನ ಕೃತಿ ಎಲ್ಲವೂ ಪ್ರಾಣಶಕ್ತಿಯ ಭಂಡಾರವನ್ನು ಸೂಚಿಸುತ್ತವೆ.

ಅಂಥ ಬ್ರಹ್ಮಚರ್ಯ ಹೆಂಗಸರನ್ನು ಕಂಡರೆ ಬೆದರಿ ಓಡದು. ಬ್ರಹ್ಮಚಾರಿ ಹೆಂಗಸರ ಸಹವಾಸವನ್ನು ಬಯಸುವುದೂ ಇಲ್ಲ, ಸೇವೆಯೆಸಗಬೇಕಾದ ಸಂದರ್ಭದಲ್ಲಿ ಹೆಂಗಸು ಎಂದು ಅಂಜಿ ಓಡಿಹೋಗುವುದೂ ಇಲ್ಲ. ಅವನಿಗೆ ಹೆಣ್ಣು ಗಂಡಿನ ಭೇದವೇ ಅಳಿದುಹೋಗುತ್ತದೆ, ನಾನು ಹೇಳಿದುದನ್ನು ತಮಗೆ ಬೇಕಾದ ಹಾಗೆ ತಿರುಗಿಸಿ ಯಾರೂ ಕಾಮಸಾಧನೆಗಾಗಿ ಉಪಯೋಗಿಸಬಾರದು. ಯಾರು ಕಾಮವಾಸನೆಯನ್ನು ಸುಟ್ಟಿದ್ದಾನೋ ಅವನಿಗೆ ಹೆಣ್ಣು ಗಂಡು ಎಂದು ಭೇದ ಮಾಡುವ ಅಗತ್ಯವಿಲ್ಲ ಎಂದು ನನ್ನ ಅಭಿಪ್ರಾಯ. ಹಾಗೆಯೇ ಆಗಬೇಕು. ಸೌಂದರ್ಯವೆಂದರೆ ಅವನ ಕಲ್ಪನೆಯೇ ಬೇರೆ ಆಗುತ್ತದೆ. ಅವನಿಗೆ ಬಾಹ್ಯರೂಪದ ಕಡೆ, ಮೈಯ ಕಡೆ ಗಮನವಿಲ್ಲ. ಅವನಿಗೆ ಗುಣವೇ ಸೌಂದರ್ಯ. ಗುಣವತಿಯಾದವಳು ಚೆಲುವೆ, ಗುಣವಂತನಾದವನು ಚೆಲುವ. ಆದ್ದರಿಂದ

ಚೆಲುವೆ ಎನಿಸಿಕೊಂಡವಳನ್ನು ನೋಡಿ ಅವನಿಗೆ ಯಾವ ಉದ್ರೇಕವೂ ಆಗದು, ಉದ್ವೇಗವೂ ಹುಟ್ಟದು. ಅವನ ಜನನೇಂದ್ರಿಯವೂ ಬೇರೆ ಬಗೆಯಾಗಿ ಕಂಡೀತು.

ಇಂಥ ವ್ಯಕ್ತಿಯ ನಿಗ್ರಹ-ಸಂಯಮದ ಫಲವಾಗಿ ಅವನಿಗೆ ನಿಮಿರು-ನಿಗುರು ಆಗುವುದಿಲ್ಲ. ಜನನೇಂದ್ರಿಯದ ನರಗಳಲ್ಲಿ ರಸೋತ್ಪತ್ತಿಯಾಗದೆ ಅವನು ನಪುಂಸಕನಾಗುತ್ತಾನೆ ಎಂದಲ್ಲ. ಈ ರಸೋತ್ಪತ್ತಿ ಅವನ ಸರ್ವಾಂಗ ವ್ಯಾಪಿಯಾಗುವ ಪ್ರಾಣಶಕ್ತಿಯಾಗಿ ಪರಿವರ್ತಿತವಾಗುತ್ತದೆ. ನಪುಂಸಕನಿಗೆ ಕಾಮೇಚ್ಛೆ ಇಲ್ಲದಿಲ್ಲ. ನನಗೆ ಪತ್ರ ಬರೆಯುವರು ಕೆಲವರು ಈ ಗುಂಪಿನವರು. ಅವರಿಗೆ ಭೋಗಾಭಿಲಾಷೆಯಿದೆ, ಆದರೆ ಇಂದ್ರಿಯಪಟುತ್ವವಿಲ್ಲ. ಪುಳಕ-ನಿಗುರು ಆಗುವುದಿಲ್ಲ. ವೀರ್ಯಸ್ಖಲನವಾಗುತ್ತಿರುತ್ತದೆ. ಇಂಥವರು ವೀರ್ಯೋತ್ಪತ್ತಿ ಸಾಲದೆ ನಪುಂಸಕರಾಗುತ್ತಾರೆ. ಇದು ದಯನೀಯ ಸ್ಥಿತಿ. ಆದರೆ ಕಾಮೇಚ್ಛೆಯನ್ನು ಸುಟ್ಟುಹಾಕಿ ವೀರ್ಯವನ್ನು ಪ್ರಾಣಶಕ್ತಿಯಾಗಿ ಪರಿವರ್ತಿಸಿ ಇಚ್ಛಾ-ನಪುಂಸಕನಾದವನ ಮಾತೇ ಬೇರೆ. ಅಂಥ ಸ್ಥಿತಿಗಾಗಿ ಎಲ್ಲರೂ ಬಯಸಬೇಕು. ಅಂಥ ಬ್ರಹ್ಮಚಾರಿ ಬಹಳ ಅಪರೂಪವೆಂಬುದೂ ನಿಜವೇ.

ನಾನು ೧೯೦೬ ರಲ್ಲಿ ಬ್ರಹ್ಮಚರ್ಯ ವ್ರತವನ್ನು ಹಿಡಿದೆ. ಎಂದರೆ, ಪೂರ್ಣ ಬ್ರಹ್ಮಚಾರಿಯಾಗಲು ನಾನು ಪ್ರಯತ್ನಿಸತೊಡಗಿ ೩೬ ವರ್ಷವಾಯಿತು. ಈಗಲೂ ನನ್ನ ಕಲ್ಪನೆಯ ಪ್ರಕಾರ ಪೂರ್ಣ ಬ್ರಹ್ಮಚರ್ಯವನ್ನು ನಾನು ಸಾಧಿಸಿದೇನೆ ಎನ್ನಲಾರೆ. ಆದರೆ ಆ ನಿಟ್ಟಿನಲ್ಲಿ ಸಾಕಷ್ಟು ಮುನ್ನಡೆದಿದೇನೆ. ದೇವರ ದಯೆಯಿದ್ದರೆ ಈ ಜನ್ಮದಲ್ಲಿಯೇ ಪೂರ್ಣತೆಯನ್ನು ಪಡೆದೇನು. ಏನೇ ಆಗಲಿ, ನನ್ನ ಪ್ರಯತ್ನ ಸಡಿಲಾಗದು. ನನಗೆ ನಿರಾಶೆಯೂ ಇಲ್ಲ. ಈ ಪ್ರಯತ್ನಕ್ಕೆ ಮೂವತ್ತಾರು ವರ್ಷವೇನು ದೀರ್ಘ ಕಾಲವೆಂದು ನನಗನಿಸದು. ಫಲ ಶ್ರೇಷ್ಠವಾದರೆ ಪ್ರಯತ್ನವೂ ಶ್ರೇಷ್ಠವಾಗಬೇಕು. ಅಂತೂ ಈ ನಡುವೆ ಬ್ರಹ್ಮಚರ್ಯ-ಅತ್ಯಗತ್ಯ ಎಂಬ ಅಭಿಪ್ರಾಯ ನನ್ನಲ್ಲಿ ಬಲಗೊಳ್ಳುತ್ತಿದೆ. ಜನತೆಯ ಇದಿರಿಗೆ ಇಟ್ಟರೆ ಲಾಭವಾದೀತೆಂಬ ಸ್ಥಿತಿಗೆ ಇನ್ನೂ ನನ್ನ ಪ್ರಯೋಗಗಳು ಬಂದಿಲ್ಲ. ನನಗೆ ತೃಪ್ತಿಕರವಾದ ಫಲ ದೊರೆತರೆ ಜನತೆಗೆ ಬಿನ್ನಯಿಸುತ್ತೇನೆ. ಈ ಪ್ರಯೋಗಗಳು ಸಫಲವಾದರೆ ಬ್ರಹ್ಮಚರ್ಯ ಸಿದ್ಧಿ ಸುಲಭವಾದೀತು.

ಈ ಅಧ್ಯಾಯದಲ್ಲಿ ನಾನು ಹೇಳುತ್ತಿರುವ 'ಬ್ರಹ್ಮಚರ್ಯ ಕೇವಲ ವೀರ್ಯನಿಗ್ರಹಕ್ಕೆ ಸಂಬಂಧಿಸಿದ್ದು. ಪೂರ್ಣಬ್ರಹ್ಮಚರ್ಯದ ಶ್ರೇಷ್ಠ ಫಲ ಈ ಪರಿಮಿತ

ಬ್ರಹ್ಮಚರ್ಯ ಸಾಧನೆಯಿಂದ ಸಿಗಲಾರದು. ಆದರೆ ಈ ಪರಿಮಿತ ಸಾಧನೆಯನ್ನೇ ಮಾಡದೆ ಅಖಂಡ, ಪೂರ್ಣ ಬ್ರಹ್ಮಚರ್ಯಕ್ಕೆ ದಾರಿಯೇ ಇಲ್ಲ.

ವೀರ್ಯ ಸಂರಕ್ಷಣೆ ಮಾಡುವ ಬ್ರಹ್ಮಚರ್ಯವನ್ನು ಸಾಧಿಸದೆ ಪೂರ್ಣ ಆರೋಗ್ಯ ಅಸಂಭವ. ಇನ್ನೊಂದು ಮನುಷ್ಯ–ಪ್ರಾಣಿಯನ್ನೆ ಸೃಷ್ಟಿಸಬಲ್ಲ ಶಕ್ತಿಯುಳ್ಳ ವೀರ್ಯವನ್ನು ನಾಶವಾದರೆ ಆಗಲಿ ಎಂಬುದು ಬರೀ ಹೆಡ್ಡತನ, ಅಪಾರ ಅಜ್ಞಾನ. ಪ್ರಜೋತ್ಪತ್ತಿಗಾಗಿ ವೀರ್ಯ, ಕಾಮಸಾಧನೆಗಲ್ಲ ಎಂಬ ವಿಚಾರ ಮನದಟ್ಟಾಗಿ, ದೃಢಗೊಂಡರೆ ಕಾಮದ ಪಶುವೃತ್ತಿಯಲ್ಲಿ ಮುಳುಗುವ ಅವಕಾಶವೆ ಇರದು. ಈ ಪ್ರಾಣರಸ ವ್ಯರ್ಥವಾಗಿ ಹಾಳುಮಾಡಲಿಕ್ಕಲ್ಲ ಎಂಬ ಜ್ಞಾನ ಮೂಡಿದರೆ ಗಂಡಸರು ಸಂಭೋಗೇಚ್ಛೆಯಿಂದ ಹುಚ್ಚರಾಗುವುದು ತಪ್ಪೀತು. ಆಗ ಮದುವೆಗೆ ಬೇರೆ ಅರ್ಥ ಹರಡಿ, ಈಗ ಮದುವೆಯೆಂದರೆ ಇರುವ ಅಭಿಪ್ರಾಯ ಅಸಹ್ಯವಾದೀತು. ಮದುವೆ ಇಬ್ಬರು ಸಂಗಾತಿಗಳ ಹೃದಯ ಮಿಲನವಾಗಬೇಕು. ಸಂತಾನೇಚ್ಛೆಯಿದ್ದಾಗ ಮಾತ್ರ ಬೆರೆಯುವ ದಂಪತಿಗಳು ಬ್ರಹ್ಮಚಾರಿಗಳೆನ್ನಲು ಯೋಗ್ಯರು. ಇಬ್ಬರೂ ಬಯಸದೆ ಅಂಥ ಸಂಭೋಗ ಸಾಧ್ಯವಿಲ್ಲ. ಪುತ್ರಕಾಮವಿಲ್ಲದೆ ಬರೀ ಇಂದ್ರಿಯ ಭೋಗಕ್ಕಾಗಿ ಅಂಥವರು ಬೆರೆಯರು. ಕರ್ತವ್ಯ ಬುದ್ಧಿಯಿಂದ ಒಮ್ಮೆ ಹೀಗೆ ಬೆರೆತ ಮೇಲೆ ಮತ್ತೆ ಬೆರೆಯುವ ಆಸೆ ಹುಟ್ಟಲೇ ಬಾರದು.

ನಾನು ಹೇಳುತ್ತಿರುವುದು ಬರೀ ಪುಸ್ತಕ ಪುರಾಣ ಎನ್ನ ಕೂಡದು. ದೀರ್ಘಕಾಲ ಸ್ವಯಂ ಪ್ರಯೋಗಮಾಡಿ ಅನುಭವದಿಂದ ಬರೆಯುತ್ತಿದೇನೆ ಎಂಬುದು ಓದುಗರಿಗೆ ತಿಳಿದಿರಲಿ. ಸಾಮಾನ್ಯ ರೂಢಿಗೆ ಇದು ವಿರುದ್ಧ ಎಂಬುದನ್ನೂ ನಾನು ಬಲ್ಲೆ. ಪ್ರಗತಿ ಪಡೆಯಲು ನಾವು ಸಾಮಾನ್ಯ ಅನುಭವವನ್ನು ಎಷ್ಟೋ ಸಲ ದಾಟಿ ಹೋಗಬೇಕಾಗುತ್ತದೆ. ಸಾಮಾನ್ಯ ಅನುಭವ, ಲೋಕಾಭಿಪ್ರಾಯಗಳನ್ನು ಇದಿರಿಸಿದಾಗಲೇ ದೊಡ್ಡ ದೊಡ್ಡ ಅನ್ವೇಷಣೆ, ಸಂಶೋಧನೆಗಳು ಆದದ್ದು. ಸಾಮಾನ್ಯ ಅನುಭವಕ್ಕೆ ಸವಾಲು ಹಾಕಿತು ಸಾಧಾರಣವಾದ ಬೆಂಕಿಕಡ್ಡಿಯ ನಿರ್ಮಾಣ. ಅಲ್ಲಿಯವರೆಗಿನ ಲೋಕಾಭಿಪ್ರಾಯವನ್ನು ಅಲ್ಲಕಲ್ಲೋಲಮಾಡಿತು ವಿದ್ಯುತ್ತಿನ ಅನ್ವೇಷಣೆ.

ನೈಸರ್ಗಿಕ ಪದಾರ್ಥಗಳಿಗಿದ್ದ ಹಾಗೆಯೆ ಆಧ್ಯಾತ್ಮಿಕ ವಿಷಯಗಳಲ್ಲಿಯೂ ಸಹ. ಆದಿಯಲ್ಲಿ ಮದುವೆಯೆಂಬುದೇ ಇರಲಿಲ್ಲ. ಪಶುಗಳು ಮಾಡುವಂತೆ ಗಂಡಸರು ಮನಬಂದಂತೆ ವಿಹರಿಸಿ ಜೊತೆಗೂಡುತ್ತಿದ್ದರು. ಇಂದ್ರಿಯನಿಗ್ರಹ

ಅವರಿಗೆ ಗೊತ್ತೇ ಇರಲಿಲ್ಲ. ಕೆಲವರು ಮುನ್ನುಗ್ಗಿದ ಜನರು ಸಾಮಾನ್ಯ ಜೀವನದ ಮೇರೆ ದಾಟಿ ಆತ್ಮ ಸಂಯಮದ ನಿಯಮವನ್ನು ಕಂಡುಕೊಂಡರು. ಆತ್ಮಸಂಯಮದ ನಿತ್ಯನಿಯಮದಲ್ಲಿ ಏನೇನು ಸಿದ್ಧಿಗಳು ಅಡಗಿವೆಯೋ ಪರಿಶೀಲಿಸುವುದು ನಮ್ಮ ಕರ್ತವ್ಯ. ಆದ್ದರಿಂದ ವಿವಾಹ–ಜೀವನವನ್ನು ನಾನು ಹೇಳಿದ ಮಟ್ಟಕ್ಕೆ ಒಯ್ಯುವುದು ಪ್ರತಿಯೊಬ್ಬ ಗಂಡಸಿನ, ಹೆಂಗಸಿನ ಕರ್ತವ್ಯ ಎಂದಾಗ ಇದೆಲ್ಲ ಅವ್ಯಾವಹಾರಿಕ ಎಂದು ತಳ್ಳಿಹಾಕಬಾರದು. ಮಾನವ ಜೀವನವನ್ನು ಯಥಾಯೋಗ್ಯವಾಗಿ ರೂಪಿಸಿದರೆ ವೀರ್ಯಸಂಗ್ರಹ ಎಲ್ಲರಿಗೂ ಸಹಜವಾದೀತು.

ಜನನೇಂದ್ರಿಯದ ಗ್ರಂಥಿಗಳು ಸದಾ ವೀರ್ಯೋತ್ಪತ್ತಿಮಾಡುತ್ತಲೇ ಇರುತ್ತವೆ. ಈ ವೀರ್ಯ ಸಂಗ್ರಹವನ್ನು ಮನುಷ್ಯ ತನ್ನ ಮಾನಸಿಕ, ಶಾರೀರಿಕ, ಆಧ್ಯಾತ್ಮಿಕ ಶಕ್ತಿಯನ್ನು ಬಲಗೊಳಿಸಲು ಉಪಯೋಗಿಸಬೇಕು. ವೀರ್ಯವನ್ನು ಹೀಗೆ ಉಪಯೋಗಿಸಲು ಕಲಿತವನಿಗೆ ದೇಹಪೋಷಣೆಗೆ ಬಹಳ ಸ್ವಲ್ಪ ಆಹಾರ ಸಾಕೆಂಬುದು ತಿಳಿದುಬಂದೀತು. ಆಹಾರ ಸ್ವಲ್ಪವಾದರೂ ಎಂಥ ಶರೀರಶ್ರಮದ ಕೆಲಸವನ್ನಾದರೂ ಎಲ್ಲರ ಹಾಗೆ ತಾನೂ ಮಾಡಬಲ್ಲ. ಅವನಿಗೆ ಮಾನಸಿಕ ಶ್ರಮದಿಂದ ಆಯಾಸವಾಗದು ; ಅವನಿಗೆ ಮುಪ್ಪೂ ಬೇಗ ಬಾರದು. ತರಗೆಲೆ, ಕಳಿತ ಹಣ್ಣು, ಸಹಜವಾಗಿ ಉದುರಿ ಬೀಳುವಂತೆ ಅಂಥ ಬ್ರಹ್ಮಚಾರಿ ತನ್ನ ಕಾಲ ಬಂದಾಗ ದೃಢವಾಗಿದ್ದೇ ದಾಟಿಹೋದಾನು. ವಯಸ್ಸಾದಂತೆ ಶರೀರ ಗಳಿತವಾಗಿ ಕಂಡುಬಂದರೂ ಅವನ ಮನಶ್ಶಕ್ತಿ ಕುಗ್ಗುವ ಬದಲು ಹೆಚ್ಚು ನಿಚ್ಚಳವಾದೀತು. ಇದೆಲ್ಲವೂ ನಿಜವಾದರೆ ಆರೋಗ್ಯದ ನಿಜವಾದ ರಹಸ್ಯ ವೀರ್ಯ ಸಂರಕ್ಷಣೆಯೇ.

ಈ ವೀರ್ಯ ಶಕ್ತಿಯ ಸಂರಕ್ಷಣೆಗೆ ನನಗೆ ತಿಳಿದ ಕೆಲವು ನಿಯಮಗಳನ್ನು ಹೇಳುತ್ತೇನೆ.

೧. ಕಾಮೇಚ್ಛೆಯ ಬೇರು ಮನಸ್ಸಿನಲ್ಲಿದೆ. ಆದ್ದರಿಂದ ಸಂಪೂರ್ಣ ಮನೋನಿಗ್ರಹ ಅಥವಾ ವಿಚಾರಸಂಯಮ ಅಗತ್ಯ. ಅದನ್ನು ಸಾಧಿಸುವ ಬಗೆ ಹೀಗೆ–ಮನಸ್ಸನ್ನು ಸೋಮಾರಿಯಾಗಿರಲು ಬಿಡಬೇಡಿ. ಉಪಯುಕ್ತವಾದ ಒಳ್ಳೆಯ ವಿಚಾರಗಳಿಂದ ತುಂಬಿರಲಿ ಮನಸ್ಸು. ಅರ್ಥಾತ್, ನಿಮ್ಮ ಮುಂದಿನ ಕರ್ತವ್ಯವನ್ನು ಕುರಿತು ಯೋಚನೆಮಾಡುತ್ತಿರಿ. ಅದರ ಚಿಂತೆ, ಕಾಳಜಿ ಬೇಡ. ಆ ಕೆಲಸದಲ್ಲಿ ನೀವು ಹೇಗೆ ಪೂರ್ಣ ತಿಳಿದವರಾಗಬಲ್ಲಿರೋ ಯೋಚಿಸಿ. ಅದರಂತೆ ಮಾಡಿ ವಿಚಾರ ವ್ಯರ್ಥವಾಗಬಾರದು, .ಪೋಲಾಗ

ಬಾರದು. ವ್ಯರ್ಥ–ನಿಷ್ಪ್ರಯೋಜಕ ವಿಚಾರ ಮಾಡಿದಾಗ ನಾಮಜಪ ಬಹಳ ಲಾಭಕರ. ದೇವರು ನಿರಾಕಾರನೆಂದು ನಂಬಿಕೆಯಿದ್ದರೆ ಬೇರೆ, ಇಲ್ಲ ದಿದ್ದರೆ ನಿಮಗೆ ಯಾವ ಆಕಾರ ಪ್ರಿಯವ್ರೋ ಆ ಮೂರ್ತಿಯನ್ನೆ ಧ್ಯಾನಿಸಿ. ಜಪ ಮಾಡುವಾಗ ಬೇರೆ ಯಾವ ವಿಚಾರವೂ ಮನಸ್ಸಿನೊಳಗೆ ಬರಬಾರದು. ಅದು ಆದರ್ಶ ಸ್ಥಿತಿ. ಆ ಸ್ಥಿತಿ ಸಾಧ್ಯವಾಗದೆ, ಬೇಡದ ಬಯಸದ ವಿಚಾರ ಗಳೆಲ್ಲ ಮನಸ್ಸಿನಲ್ಲಿ ಎದ್ದರೂ ಅದರಿಂದ ಎದೆಗುಂದಬಾರದು. ಕಟ್ಟಕಡೆಗೆ ಯಶಸ್ಸು ಖಂಡಿತ ಎಂಬ ವಿಶ್ವಾಸದಿಂದ ಶ್ರದ್ಧಾಪೂರ್ವಕ ನಾಮಜಪವನ್ನು ಬಿಡದೆ ಮುಂಬರಿಸಬೇಕು.

೨. ವಿಚಾರದ ಹಾಗೆ ಮಾತು ಓದು, ಎರಡೂ ಶುದ್ಧವಾಗಿರಬೇಕು, ನಿರ್ಮಲವಾಗಿರಬೇಕು. ಶೃಂಗಾರ ಕಾವ್ಯವನ್ನು, ಕಾಮೋದ್ದೀಪಕ ಸಾಹಿತ್ಯ ವನ್ನು ದೂರಮಾಡಬೇಕು. ಪೊಳ್ಳು ಅಶ್ಲೀಲ ಮಾತು ಅಶ್ಲೀಲ ಕೆಲಸಕ್ಕೆ ತಳ್ಳುತ್ತದೆ. ಇಂದ್ರಿಯಾಭಿಲಾಷೆಯನ್ನು, ಕಾಮೇಚ್ಛೆಯನ್ನು ಬೆಳೆಸಿಕೊಳ್ಳಬಾರ ದೆನ್ನುವವನು ಅದನ್ನು ಉದ್ದೀಪನಗೊಳಿಸುವ ಕೆಲಸಗಳನ್ನು ದೂರೀಕರಿಸುತ್ತಾನೆ.

೩. ಮನಸ್ಸಿನಂತೆ ದೇಹವನ್ನೂ ಶುಭ್ರವಾಗಿ ಕರ್ಮನಿರತವಾಗಿ ಇಡ ಬೇಕು. ದಿನದ ದೇಹಾಯಾಸ ರಾತ್ರಿ ನಿಃಸ್ವಪ್ನ ನಿದ್ರೆಯನ್ನು ತರಬೇಕು, ನಿತ್ಯ ನವ್ಯತೆಯನ್ನು ಪ್ರಸಾದಿಸಬೇಕು. ಸಾಧ್ಯವಿದ್ದಷ್ಟೂ ಬಯಲಿನಲ್ಲಿ ಕೆಲಸಮಾಡು ವುದು ಒಳಿತು. ಶರೀರಶ್ರಮದ ಕೆಲಸವನ್ನು ಕಾರಣಾಂತರದಿಂದ ಮಾಡಲಾರ ದವರು ನಿತ್ಯವೂ ವ್ಯಾಯಾಮ ಮಾಡುವ ಪದ್ಧತಿಯಿಟ್ಟುಕೊಳ್ಳಬೇಕು. ಬಯಲಿ ನಲ್ಲಿ ಬಿರುನಾಗಿ ತಿರುಗಾಡಿ ಬರುವುದು ಉತ್ತಮ ವ್ಯಾಯಾಮವೆಂದು ನನ್ನ ಅಭಿ ಪ್ರಾಯ. ತಿರುಗಾಡುವಾಗ ಬಾಯಿಮುಚ್ಚಿ ಮೂಗಿನಿಂದ ಉಸಿರಾಡಬೇಕು. ಕುಳಿತಿರಲಿ ನಡೆಯುತ್ತಿರಲಿ ಮೈ ನೆಟ್ಟಗೆ ಇರಬೇಕು. ನೆಟ್ಟಗೆ ನಿಲ್ಲದಿರುವುದು, ನೆಟ್ಟಗೆ ಕೂಡದಿರುವುದು ಸೋಮಾರಿತನದ ಲಕ್ಷಣ. ಸೋಮಾರಿತನ ಸಂಯ ಮಕ್ಕೆ ಶತ್ರು. ಯೋಗಾಸನಗಳೂ ಉಪಯುಕ್ತವೇ. ನನ್ನ ಸ್ವಾನುಭವದಿಂದ ಇಷ್ಟು ಹೇಳಬಲ್ಲೆ–ಯಾರು ತನ್ನ ಕೈಕಾಲು ಕಣ್ಣು ಕಿವಿಗಳನ್ನು ಒಳ್ಳೆಯ ಕೆಲಸ ದಲ್ಲಿ ನಿರಾಮಯವಾಗಿ ತೊಡಗಿಸಬಲ್ಲನೋ ಅವನಿಗೆ ತನ್ನ ಇಂದ್ರಿಯೇಚ್ಛೆ ಯನ್ನು ಪಾಶವೀಚಪಲವನ್ನು ನಿಗ್ರಹಿಸುವುದು ಸುಲಭ. ಇದನ್ನು ಪ್ರತಿ ಯೊಬ್ಬರೂ ತಾವೇ ಪ್ರಮಾಣಿಸಿ ನೋಡಬಹುದು.

೪. 'ಎಂಥ ಅನ್ನ ತಿಂದರೆ ಅಂಥ ಬುದ್ಧಿ ಬರುತ್ತದೆ' ಎಂದು ಒಂದು

ಸಂಸ್ಕೃತ ಶ್ಲೋಕ ಹೇಳುತ್ತದೆ. ತಿನ್ನುವುದರಲ್ಲಿ ಹಿಡಿತವೇ ಇಲ್ಲದ ತಿಂಡಿಪೋತ ತನ್ನ ಇಂದ್ರಿಯ ವಿಕಾರಗಳಿಗೆ ಅಡಿಯಾಳಾಗುತ್ತಾನೆ. ನಾಲಗೆಯನ್ನು ಬಿಗಿ ಹಿಡಿಯಲಾರದವನು ಉಳಿದ ಇಂದ್ರಿಯಗಳನ್ನು ಏನು ಬಿಗಿಹಿಡಿಯಬಲ್ಲ? ಇದು ನಿಜವಾದರೆ, ಮನುಷ್ಯ ತನ್ನ ದೇಹಪೋಷಣೆಗೆ ಎಷ್ಟು ಬೇಕೋ ಅಷ್ಟೇ ಆಹಾರ ತೆಗೆದುಕೊಳ್ಳಬೇಕು; ಹೆಚ್ಚು ಕೂಡದು. ಆಹಾರ ಆರೋಗ್ಯವರ್ಧಕವೂ ಸಪುಧಾತುವೂ ಆಗಿರಬೇಕು. ನಾಲಗೆ ಬಯಸಿದುದನ್ನೆಲ್ಲ ತುರುಕಲು ಈ ದೇಹವೇನು ಕಸದ ತೊಟ್ಟಿಯೆ? ಆಹಾರ ದೇಹಪೋಷಣೆಗೆ. ಮನುಷ್ಯನಿಗೆ ದೇಹವನ್ನು ಕೊಟ್ಟಿರುವುದು ಆತ್ಮಸಾಧನೆಗೆ. ಆತ್ಮಸಾಧನೆಯೆ ಭಗವಂತನ ಸಾಕ್ಷಾತ್ಕಾರ. ಈ ಸಾಕ್ಷಾತ್ಕಾರ ಯಾರ ಜೀವನದ ಗುರಿಯೋ ಅವರು ಇಂದ್ರಿಯಾಭಿಲಾಷೆಯ ಗುಲಾಮರಾಗುವುದಿಲ್ಲ.

೫. ಪ್ರತಿಯೊಬ್ಬ ಹೆಂಗಸನ್ನೂ ಮನುಷ್ಯ ತನ್ನ ತಾಯಿಯಂತೆಯೋ ತಂಗಿಯಂತೆಯೋ ಮಗಳ ಹಾಗೋ ಕಾಣಬೇಕು. ತನ್ನ ತಾಯಿ ತಂಗಿ ಮಗಳ ವಿಷಯದಲ್ಲಿ ಯಾರೂ ಅಶುದ್ಧಭಾವನೆಯನ್ನು ಬರಗೊಡರು. ಅದೇ ರೀತಿ ಹೆಂಗಸರೂ ಪ್ರತಿಯೊಬ್ಬ ಗಂಡಸನ್ನೂ ತಂದೆಯೋ ಅಣ್ಣನೋ ಮಗನೋ ಆಗಿ ಭಾವಿಸಬೇಕು.

ಬೇರೆ ಬೇರೆ ಕಡೆ ಬರೆಯುವಾಗ ಇನ್ನೂ ಎಷ್ಟೋ ಸೂಚನೆ ಕೊಟ್ಟಿದೇನೆ. ಅವೆಲ್ಲವೂ ಈ ಐದರಲ್ಲಿ ಅಡಕವಾಗಿವೆ. ಇವನ್ನು ಪಾಲಿಸುವವನು ಎಲ್ಲಕ್ಕಿಂತ ಹೆಚ್ಚಿನ ವಿಕಾರವಾದ ಕಾಮವನ್ನು ಸುಲಭವಾಗಿ ಗೆಲ್ಲಬಲ್ಲ. ಬ್ರಹ್ಮಚರ್ಯವನ್ನು ಸಾಧಿಸುವ ಇಚ್ಛೆಯುಳ್ಳವರು ಈ ನಿಯಮಗಳನ್ನು ಪಾಲಿಸುವುದು ಅಸಾಧ್ಯ, ಅಥವಾ ಕೋಟಿಯಲ್ಲಿ ಒಬ್ಬರಿಗೆ ಸಾಧ್ಯ ಎಂದು ಈ ಪ್ರಯತ್ನವನ್ನು ಬಿಡಲಾರರು. ಈ ಪ್ರಯತ್ನವೇ ಒಂದು ಆನಂದ. ಬೇರೆ ರೀತಿಯಲ್ಲಿ ಹೇಳುವುದಾದರೆ, ಪೂರ್ಣ ಆರೋಗ್ಯ ಗುಲಾಮರಿಗೆ ಲಭ್ಯವಿಲ್ಲ. ಪಶುಸ್ವಭಾವದ, ಇಂದ್ರಿಯ ವಿಕಾರದ ಗುಲಾಮಗಿರಿ ಅಧಮಾಧಮವಾದುದು.

ಗರ್ಭನಿರೋಧಕ ಸಾಧನಗಳ ಬಗ್ಗೆ ಒಂದು ಮಾತು ಇಲ್ಲಿ ಅಪ್ರಸ್ತುತವಲ್ಲ. ಕೃತ್ರಿಮೋಪಾಯಗಳಿಂದ ಸಂತತಿ ನಿರೋಧ ಮಾಡುವುದು ಹೊಸದೇನಲ್ಲ. ಹಿಂದೆ ಇದನ್ನು ಗುಟ್ಟಾಗಿಮಾಡುತ್ತಿದ್ದರು. ರೀತಿ ಒರಟಾಗಿತ್ತು. ಆಧುನಿಕ ಸಮಾಜ ಅದಕ್ಕೆ ಮರ್ಯಾದೆ ಕೊಟ್ಟು ಹೊಸ ಸುಧಾರಣೆಗಳನ್ನು ಮಾಡಿದೆ. ಅದಕ್ಕೆ ಉಪಕಾರದ ವೇಷ ತೊಡಿಸಿದಾರೆ. ಈ ಕೃತ್ರಿಮೋಪಾಯ

ಗಳ ಪ್ರಚಾರಕರು ಕಾಮೇಚ್ಛೆ ಸ್ವಾಭಾವಿಕ ವೃತ್ತಿ ಎನ್ನುತ್ತಾರೆ. ಕೆಲವರು ಅದೊಂದು ಶ್ರೇಷ್ಠ ವರ ಎನ್ನುತ್ತಾರೆ. ಆದ್ದರಿಂದ, ಈ ಇಚ್ಛೆಯನ್ನು ಅದುಮಿ ಹಾಕುವುದು ಒಂದುವೇಳೆ ಸಾಧ್ಯವಾದರೂ ಹಾಗೆ ಮಾಡುವುದು ತಪ್ಪು ಎನ್ನುತ್ತಾರೆ. ಆತ್ಮ ಸಂಯಮದಿಂದ ಸಂತತಿ ನಿರೋಧಮಾಡುವುದು ಕಷ್ಟವೆಂದು ಅವರ ಅಭಿಪ್ರಾಯ. ಸಂಯಮಕ್ಕೆ ಬದಲಾಗಿ ಮತ್ತೊಂದನ್ನು ತೋರಿಸದಿದ್ದರೆ, ಪದೇ ಪದೇ ಬಸಿರಾಗಿ ಹೆಂಗಸರು ಬಹಳ ಸಂಕಟಪಡುತ್ತಾರೆ ಎನ್ನುತ್ತಾರೆ. ಇಷ್ಟೇ ಅಲ್ಲ; ಸಂತತಿ ನಿಯಮನಮಾಡದಿದ್ದರೆ ಪ್ರಜಾಸಂಖ್ಯೆ ಬಹಳ ಹೆಚ್ಚುತ್ತದೆ. ಕುಟುಂಬಗಳು ಬಡತನಕ್ಕೆ ತುತ್ತಾಗಿ ಮಕ್ಕಳನ್ನು ಕಾಪಾಡಲಾರದೆ, ಅವರಿಗೆ ಬಟ್ಟೆ–ಶಿಕ್ಷಣ ಒದಗಿಸಲಾರದಾಗುತ್ತಾರೆ. ಆದ್ದರಿಂದ ನಿರಾಪದವಾದ ಪರಿಣಾಮಕಾರಿಯಾದ ಸಂತತಿ ನಿರೋಧಕ ಉಪಾಯಗಳನ್ನು ಕಂಡು ಹಿಡಿಯುವುದು ವಿಜ್ಞಾನಿಗಳ ಕರ್ತವ್ಯ. ಈ ವಾದ ನನಗೆ ಹಿಡಿಸಿಲ್ಲ. ಗರ್ಭನಿರೋಧಕದ ಉಪಯೋಗದಿಂದ ನಮ್ಮ ಊಹೆಗೆ ಮೀರಿದ ಅನಾಹುತಗಳು ಸಂಭವಿಸಲಿವೆ. ಎಲ್ಲಕ್ಕಿಂತ ಹೆಚ್ಚಿನ ಅನಾಹುತ ಈ ಗರ್ಭನಿರೋಧಕಗಳ ಉಪಯೋಗ ಆತ್ಮಸಂಯಮದ ಅಭಿಲಾಷೆಯನ್ನೇ ನಾಶಮಾಡುತ್ತದೆ. ತತ್ಕಾಲಕ್ಕೆ ಆಗಬಹುದಾದ ಯಾವ ಲಾಭಕ್ಕೂ ಇಷ್ಟು ಹೆಚ್ಚಿನ ಬೆಲೆಯನ್ನು ನಾವು ಕೊಡಬಾರದು. ಆದರೆ ನನ್ನ ವಾದಕ್ಕೆ ಇದು ಸ್ಥಳವಲ್ಲ.

ಈ ವಿಷಯವನ್ನು ಇನ್ನೂ ಹೆಚ್ಚು ತಿಳಿಯಬಯಸುವವರು ನನ್ನ 'ಬ್ರಹ್ಮಚರ್ಯವೋ ಕಾಮಸಾಧನೆಯೋ' ಎಂಬ ಪುಸ್ತಕವನ್ನೋದಿ, ಅರಗಿಸಿಕೊಳ್ಳಲಿ. ಆ ಮೇಲೆ ಅವರ ಬುದ್ಧಿ ಹೃದಯ ಹೇಳಿದ ಹಾಗೆ ಮಾಡಲಿ. ಕೈಲಾದಷ್ಟು ಇಂದ್ರಿಯ ನಿಗ್ರಹವನ್ನು ಮಾಡಲಿ. ತಮ್ಮ ಶರೀರ ಮನಸ್ಸುಗಳಿಗೆ ಪೂರ್ಣ ಉದ್ಯೋಗ ಸಿಗುವಂಥ ಕೆಲಸಗಳನ್ನು ಆರಿಸಿಕೊಳ್ಳಲಿ, ತಮ್ಮ ಶಕ್ತಿಗೆ ಹೊರಚಿಮ್ಮಲು ಅವಕಾಶಮಾಡಲಿ. ಶರೀರಶ್ರಮಮಾಡಿ ಬಳಲಿದಾಗ ಯಾವುದಾದರೂ ಆರೋಗ್ಯವರ್ಧಕ ಹವ್ಯಾಸವನ್ನು ಇಟ್ಟುಕೊಳ್ಳಲಿ.

ಒಂದು ಗಳಿಗೆಯಾದರೂ ಸೋಮಾರಿಯಾದರೆ ಸಾಕು ಕಲಿ ಪ್ರವೇಶವಾಯಿತೇ! ಹೀಗೆ ನಿಜವಾದ ದಾಂಪತ್ಯಪ್ರೇಮ ಮೂಡುತ್ತದೆ; ಯೋಗ್ಯ ದಾರಿಯಲ್ಲಿ ಹರಿಯುತ್ತದೆ. ಸಂಗಾತಿಗಳಿಂದ ನೀತಿಯ ಮಟ್ಟವೂ ಉನ್ನತವಾಗುತ್ತದೆ. ಒಮ್ಮೆ ಗೊತ್ತಾದರೆ ಸಾಕು, ತ್ಯಾಗದ ಆನಂದ ಅವರನ್ನು ಪಾಶವೀಭೋಗದ ಕಡೆ ಹೋಗದಂತೆ ತಡೆಯುತ್ತದೆ. ಇದಕ್ಕೆ ಆತ್ಮವಂಚನೆಯೆ ಮುಖ್ಯವಾದ

ಆತಂಕ. ಕಾಮೇಚ್ಛೆಗೆ ತವರಾದ ಮನಸ್ಸನ್ನು ನಿಗ್ರಹಿಸುವ ಬದಲು ವೀರ್ಯ ಸ್ಖಲನವಾಗದಿದ್ದರೆ ಸಾಕು ಎಂದು ಪ್ರಯತ್ನಿಸುತ್ತಾರೆ. ವಿಚಾರ–ಆಚಾರ ಗಳನ್ನು ನಿಗ್ರಹಿಸುವ ಸಂಕಲ್ಪಮಾಡಿದರೆ ಗೆಲವು ಖಂಡಿತ. ಹೆಂಗಸು ಬಾಳಿನ ಸಂಗಾತಿ, ಸಹಕಾರಿ, ಬರೀ ಇಂದ್ರಿಯಭೋಗದ ವಸ್ತುವಲ್ಲ ಎಂಬುದನ್ನು ಮನುಷ್ಯ ಅರಿಯಬೇಕು. ಮಾನವಸೃಷ್ಟಿ ಇಂದ್ರಿಯತೃಪ್ತಿಗಾಗಿಯಲ್ಲ, ಬೇರೊಂದು ಉದ್ದೇಶ್ಯಕ್ಕೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು.

---

## ಎರಡನೆ ಭಾಗ

## ೧

## ಭೂಮಿ

ಈ ಅಧ್ಯಾಯಗಳನ್ನು ಬರೆವ ಉದ್ದೇಶ್ಯ ಪಾಠಕರಿಗೆ ಚಿಕಿತ್ಸಾಶಾಸ್ತ್ರದ ಈ ಮುಖ್ಯ ವಿಭಾಗದ ಪರಿಚಯ ಮಾಡಿಕೊಟ್ಟು, ಈ ಪದ್ಧತಿಯನ್ನು ನಾನು ಹೇಗೆ ನನ್ನ ಬಾಳಿನಲ್ಲಿ ಉಪಯೋಗಿಸಿಕೊಂಡೆನೋ ತಿಳಿಸುವುದು. ಹಿಂದಿನ ಅಧ್ಯಾಯಗಳಲ್ಲಿ ಪ್ರಾಸಂಗಿಕವಾಗಿ ಅಲ್ಲಲ್ಲಿ ಈ ವಿಷಯ ಬಂದಿದೆ. ಇಲ್ಲಿ ಅದನ್ನು ವಿವರಿಸಿ ಹೇಳುತ್ತೇನೆ. ಯಾವ ಪಂಚಭೂತಗಳಿಂದ ಈ ದೇಹ ರಚಿತವಾಗಿದೆಯೋ ಅವೇ ಪಂಚಭೂತಗಳೇ ಪ್ರಕೃತಿ ಚಿಕಿತ್ಸಾ ಶಾಸ್ತ್ರದ ಆಧಾರ. ಪಾಠಕರ ನೆನಪಿಗಾಗಿ–ಭೂಮಿ, ನೀರು, ಆಕಾಶ, ಬಿಸಿಲು–ಬೆಳಕು, ಗಾಳಿ, ಇವೇ ಪಂಚ ಭೂತಗಳು. ಆರೋಗ್ಯಕ್ಕಾಗಿ ಇವನ್ನು ಹೇಗೆ ಬಳಸಬಹುದೆಂಬುದನ್ನು ತೋರಿಸುವ ಪ್ರಯತ್ನ ಇದು..

೧೯೦೧ ರವರೆಗೆ ನಾನು ಕಾಯಿಲೆಯಾದಾಗಲೆಲ್ಲ ವೈದ್ಯರ ಬಳಿಗೆ ಓಡದಿದ್ದರೂ ಅವರ ಔಷಧಿಗಳನ್ನು ಕೆಲಮಟ್ಟಿಗೆ ಉಪಯೋಗಿಸುತ್ತಿದ್ದೆ. ಮಲಬದ್ಧವಾದಾಗ ಫ್ರೂಟ್ ಸಾಲ್ಟನ್ನು-ಫಲಕ್ಷಾರವನ್ನು-ತೆಗೆದುಕೊಳ್ಳುತ್ತಿದ್ದೆ. ಕೀ.ಶೇ.ಡಾ. ಪ್ರಾಣಜೀವನ ಮೆಹತಾ ನೇಟಾಲಿಗೆ ಬಂದಿದ್ದರು. ನನಗೆ ಸಾಧಾರಣವಾಗಿ ಆಗುತ್ತಿದ್ದ ಬಳಲಿಕೆ, ದಣಿವುಗಳನ್ನು ಕಳೆಯಲು ಅವರು ಕೆಲವು ಔಷಧಗಳನ್ನು ಹೇಳಿದರು. ಆ ಕಾರಣದಿಂದ ಔಷಧಗಳ ಬಗ್ಗೆ ಕೆಲವು ಗ್ರಂಥಗಳನ್ನು ಓದಬೇಕಾಯಿತು. ಇದರ ಜೊತೆಗೆ ನೇಟಾಲಿನಲ್ಲಿ ಚಿಕ್ಕ ಆಸ್ಪತ್ರೆಯೊಂದರಲ್ಲಿ ಸ್ವಲ್ಪ ಕೆಲಸಮಾಡಿ ಪಡೆದಿದ್ದ ಅನುಭವ ಬೇರೆ. ಸ್ವಲ್ಪ ಕಾಲ ಆ ಔಷಧ ತೆಗೆದುಕೊಂಡೆ. ಏನೂ ಗುಣವಾಗಲಿಲ್ಲ. ತಲೆನೋವು, ದಣಿವು, ಆರೋಗ್ಯವಿಲ್ಲವೆಂಬ ಭಾವನೆ ತಗ್ಗಲಿಲ್ಲ. ಈ ಸ್ಥಿತಿಯಿಂದ ಬೇಸರ ಹುಟ್ಟಿ ಔಷಧಗಳಲ್ಲಿ ನನಗಿದ್ದ ಅಲ್ಪಸ್ವಲ್ಪ ನಂಬಿಗೆಯೂ ಸಡಿಲವಾಯಿತು.

ಈ ನಡುವೆ ನನ್ನ ಆಹಾರ ಪ್ರಯೋಗಗಳು ನಡೆದೇ ಇದ್ದವು. ನನಗೆ ಪ್ರಕೃತಿ ಚಿಕಿತ್ಸಾ ಪದ್ಧತಿಯಲ್ಲಿ ಬಹಳ ನಂಬಿಗೆ. ಆದರೆ ಆ ವಿಷಯದಲ್ಲಿ

ಪ್ರತ್ಯಕ್ಷ ಮಾರ್ಗದರ್ಶನ ಮಾಡುವವರು ಯಾರೂ ನನಗೆ ಸಿಗಲಿಲ್ಲ. ಪ್ರಕೃತಿ ಚಿಕಿತ್ಸಾ ವಾಙ್ಮಯವನ್ನು ಸ್ವಲ್ಪ ಓದಿದೆ. ಅದರಿಂದ ಲಭಿಸಿದ ಜ್ಞಾನದ ಸಹಾಯದಿಂದ ಆಹಾರ ನಿಯಮಗಳ ಮೂಲಕ ಚಿಕಿತ್ಸೆಯನ್ನು ನಡೆಸಿದೆ. ಬಹಳ ದೂರ ತಿರುಗಾಡಿ ಬರುವ ರೂಢಿ ನನ್ನದು. ಆ ರೂಢಿ ನನಗೆ ಬಹಳ ಸಹಾಯಮಾಡಿತು. ಅದರ ದೆಸೆಯಿಂದ ಹಾಸಿಗೆ ಹಿಡಿದು ಮಲಗುವುದು ತಪ್ಪಿತು. ಅಂತೂ ಹೇಗೋ ಸಾಗಿಸಿಕೊಂಡು ಬರುತ್ತಿದ್ದಾಗ ಪೋಲಕ್ ನನ್ನ ಕೈಗೆ ಜಸ್ಟ್ ಬರೆದ 'ರಿಟರ್ನ್‌ಟು ನೇಚರ್' 'ಪ್ರಕೃತಿಗೆ ಹಿಂತಿರುಗಿ' ಎಂಬ ಪುಸ್ತಕವನ್ನು ಕೊಟ್ಟರು. ಪೋಲಕ್ ಸ್ವಯಂ ಜಸ್ಟ್ ಹೇಳಿದಂತೆ ನಡೆಯುತ್ತಿರಲಿಲ್ಲ. ಜಸ್ಟ್ ಹೇಳಿದ ಪ್ರಕಾರ ಆಹಾರನಿಯಮಗಳನ್ನು ಮಾತ್ರ ಪಾಲಿಸುತ್ತಿದ್ದ. ನನ್ನ ಸ್ವಭಾವ ಆತನಿಗೆ ಗೊತ್ತು. ಆ ಪುಸ್ತಕ ನನಗೆ ರುಚಿಸಬಹುದೆಂದು ಕೊಟ್ಟ.' ಜಸ್ಟ್ ಮಣ್ಣಿನ ಉಪಯೋಗದ ಬಗ್ಗೆ ಬಹಳ ಒತ್ತಿ ಹೇಳಿದಾನೆ. ಅದನ್ನು ಪರೀಕ್ಷಿಸಿ ನೋಡಬೇಕು ಎನಿಸಿತು. ಮಲಬದ್ಧವಾದರೆ ಕೆಳಹೊಟ್ಟೆಯ ಮೇಲೆ ಒದ್ದೆಮಣ್ಣಿನ ಪಟ್ಟೆಯನ್ನು ಹಾಕು ಎನ್ನುತ್ತಾನೆ ಜಸ್ಟ್. ಶುದ್ಧವಾದ ಒಣಮಣ್ಣಿನ ಹುಡಿಯನ್ನು ನೀರಿನಿಂದ ಒದ್ದೆಮಾಡಿ, ತೆಳ್ಳನೆಯ ಬಟ್ಟೆಯ ಮೇಲೆ ಅದನ್ನು ಹರವಿ ರಾತ್ರಿಯಲ್ಲಿ ಕಿಬ್ಬೊಟ್ಟೆಯ ಮೇಲೆ ಇಟ್ಟುಕೊಂಡಿದ್ದೆ. ಪರಿಣಾಮ ಬಹಳ ತೃಪ್ತಿಕರವಾಗಿತ್ತು. ಮಾರನೆ ದಿನ ಬೆಳಿಗ್ಗೆ ಸಹಜವಾಗಿ ಚೆನ್ನಾಗಿ ಭೇದಿಯಾಯಿತು. ಅವೊತ್ತಿನಿಂದ ನಾನು ಫಲಕ್ಷಾರವನ್ನು ಮುಟ್ಟಿಯೇ ಇಲ್ಲವೆನ್ನಬಹುದು. ಯಾವಾಗಲಾದರೊಮ್ಮೆ ಭೇದಿಗೆ ತೆಗೆದುಕೊಳ್ಳಬೇಕೆನಿಸುತ್ತದೆ. ಆಗ ಬೆಳಗಿನ ಜಾವದಲ್ಲಿ ಒಂದು ಚಮಚಾ ಹರಳೆಣ್ಣೆ ಕುಡಿಯುತ್ತೇನೆ ಒದ್ದೆ ಮಣ್ಣಿನ ಪಟ್ಟೆ ೩ ಅಂಗುಲ ಅಗಲ, ಆರು ಅಂಗುಲ ಉದ್ದ, ಅರ್ಧ ಅಂಗಲ ದಪ್ಪ ಇರಬೇಕು. ವಿಷಸರ್ಪದ ಕಡಿತವನ್ನು ಮಣ್ಣಿನ ಪಟ್ಟೆಯಿಂದ ಗುಣಮಾಡಬಹುದು ಎನ್ನುತ್ತಾನೆ ಜಸ್ಟ್. ಮೈಗೆಲ್ಲಾ ಒದ್ದೆಮಣ್ಣಿನ ಪಟ್ಟೆ ಕಟ್ಟಬೇಕು ಎನ್ನುತ್ತಾನೆ. ತಲೆಗೆ'ಮಣ್ಣಿನ ಪಟ್ಟೆ ಕಟ್ಟಿದರೆ ತಲೆನೋವು ಹೋಗುತ್ತದೆ; ನನ್ನ ಅನುಭವ ಇದು. ನೂರಾರು ಪ್ರಸಂಗಗಳಲ್ಲಿ ನಾನು ಪ್ರಯೋಗಿಸಿನೋಡಿದ್ದೇನೆ. ತಲೆನೋವಿಗೆ ಅನೇಕ ಕಾರಣ ಇವೆ. ಯಾವ ಕಾರಣವೇ ಆಗಲಿ, ಸಾಮಾನ್ಯವಾಗಿ ಮಣ್ಣಿನ ಪಟ್ಟೆಯಿಂದ ತತ್ಕಾಲಕ್ಕಾದರೂ ನೋವು ಶಮನವಾಗುತ್ತದೆ.

ಮಣ್ಣಿನ ಪಟ್ಟೆಗೆ ಸಾಮಾನ್ಯವಾದ ಕುರು–ಹುಣ್ಣು ವಾಸಿಯಾಗುತ್ತವೆ.

ಕೀವು ಬರುತ್ತಿದ್ದ ವ್ರಣಗಳಿಗೂ ನಾನು ಮಣ್ಣಿನ ಪಟ್ಟಿಯನ್ನು ಕಟ್ಟಿದೇನೆ. ಮೊದಲು ಒಂದು ಶುಭ್ರವಾದ ಬಟ್ಟೆಯನ್ನು ತೆಗೆದುಕೊಂಡು ಅದನ್ನು (ಪೊಟಾಸಿಯಂ ಪರ್ಮಾಂಗನೇಟ್) ದ್ರಾವಕದಲ್ಲಿ ಅದ್ದಿ, ಅದರ ಮೇಲೆ ಒದ್ದೆಮಣ್ಣನ್ನು ತೆಳ್ಳಗೆ ಹರವಿ ಮೇಲೆ ಬಟ್ಟೆಯನ್ನು ಮುಚ್ಚಿ ಪ್ರೋಲ್ಟೀಸ್ ಮಾಡುವುದು; ಪೊಟಾಸಿಯಂ ಪರ್ಮಾಂಗನೇಟ್ ದ್ರಾವಕದಿಂದ ಆ ಹುಣ್ಣನ್ನು ಸ್ವಚ್ಛವಾಗಿ ತೊಳೆದು ಅದರ ಮೇಲೆ ಈ ಮಣ್ಣಿನ ಕಟ್ಟನ್ನು ಹಾಕುವುದು. ಈ ಚಿಕಿತ್ಸೆಯಿಂದ ಸಾಧಾರಣವಾಗಿ ಗುಣವಾಗಿ ತೀರುತ್ತದೆ. ಗುಣವಾಗದ ಒಂದು ಸಂದರ್ಭವೂ ನನಗೆ ನೆನಪಿಲ್ಲ. ಕಣಜದ ಹುಳ ಕಡಿದರೆ ಮಣ್ಣಿನ ಲೇಪನದಿಂದ ತತ್‌ಕ್ಷಣವೆ ನೋವು ಕಡಿಮೆಯಾಗುತ್ತದೆ. ಚೇಳಿನ ಕಡಿತಕ್ಕೂ ನಾನು ಇದೇ ಚಿಕಿತ್ಸೆ ಮಾಡಿದೇನೆ, ಎಷ್ಟೋ ಸಲ. ಅಷ್ಟು ಗುಣ ಕಾಣಲಿಲ್ಲ. ಸೇವಾಗ್ರಾಮದಲ್ಲಿ ಚೇಳಿನ ಬಾಧೆ ಹೆಚ್ಚು. ಚೇಳಿನ ಕಡಿತಕ್ಕೆ ಏನೇನು ಔಷಧವಿದೆಯೋ ಅವೆಲ್ಲವನ್ನೂ ಮಾಡಿದೇನೆ. ಯಾವುದೂ ಸಿದ್ಧೌಷಧ ಎನಿಸಲಿಲ್ಲ. ಈ ಚಿಕಿತ್ಸೆಗಳಿಗಿಂತ ಫಲತಃ ಮಣ್ಣಿನ ಚಿಕಿತ್ಸೆ ಯಾವ ತೆರದಲ್ಲಿಯೂ ಕಡಮೆಯಲ್ಲ.

ಜ್ವರ ಕಾಯುತ್ತಿರುವಾಗ ತಲೆಯ ಮೇಲೆ, ಹೊಟ್ಟೆಯ ಮೇಲೆ ಮಣ್ಣಿನ ಪಟ್ಟಿ ಹಾಕಿದರೆ ಬಹಳ ಫಲಕಾರಿ. ಜ್ವರ ಕಡಮೆಯಾಗಿಯೆ ಬಿಡದಿದ್ದರೂ ರೋಗಿಗೆ ಶಮನವಾದಂತಾಗಿ ಮೇಲು ಆದಂತೆ ಅನಿಸುತ್ತದೆ. ಈ ಕಟ್ಟು ಹಾಕಿ ಎಂದು ರೋಗಿಗಳೇ ಇಷ್ಟಪಟ್ಟಿದಾರೆ. ವಿಷಮಶೀತ ಜ್ವರದಲ್ಲಿಯೂ ನಾನು ಮಣ್ಣಿನ ಪಟ್ಟಿಯನ್ನು ಉಪಯೋಗಿಸಿದೇನೆ. ಜ್ವರ ಯಥಾಪ್ರಕಾರ ಇದ್ದರೂ ಈ ಮಣ್ಣಿನ ಪಟ್ಟಿಗಳಿಂದ ರೋಗಿಯ ಬಾಧೆ ತಗ್ಗುತ್ತದೆ, ಚಡಪಡಿಕೆ ನಿಲ್ಲುತ್ತದೆ. ಸೇವಾಗ್ರಾಮದಲ್ಲಿ ಹತ್ತು ವಿಷಮಶೀತಜ್ವರದ ಕಾಯಿಲೆ ಬಂದಿತ್ತು. ಎಲ್ಲವೂ ಗುಣವಾದುವು. ' ಈಗ ಆಶ್ರಮವಾಸಿಗಳಿಗೆ ವಿಷಮಶೀತಜ್ವರದ ಅಂಜಿಕೆಯೆ ಇಲ್ಲ. ಈ ಹತ್ತರಲ್ಲೂ ನಾನು ಔಷಧವನ್ನೆ ಕೊಡಲಿಲ್ಲ. ಮಣ್ಣಿನ ಪ್ರೋಲ್ಟೀಸಿನ ಜೊತೆಗೆ ಇತರ ಪ್ರಕೃತಿ ಚಿಕಿತ್ಸೆಯನ್ನೂ ಮಾಡಿದೆ.

ಆಂಟಿಫ್ಲೋಜಿಸ್ಟೀನ್ ಪಟ್ಟಿಗೆ ಬದಲಾಗಿ ಬಿಸಿ ಮಣ್ಣಿನ ಪ್ರೋಲ್ಟೀಸನ್ನು ಸೇವಾಗ್ರಾಮದಲ್ಲಿ ಉಪಯೋಗಿಸಿದೇನೆ. ಮಣ್ಣಿಗೆ ಸ್ವಲ್ಪ ಉಪ್ಪು—ಎಣ್ಣೆ ಸೇರಿಸಿ ಅದು ಕ್ರಿಮಿಶುದ್ಧವಾಗಲು ಎಷ್ಟು ಬೇಕೋ ಅಷ್ಟು ಬೆಚ್ಚಗೆ ಮಾಡಬೇಕು.

ಮಣ್ಣಿನ ಪಟ್ಟಿಗಳಿಗೆ ಎಂಥ ಮಣ್ಣನ್ನು ಉಪಯೋಗಿಸಬೇಕೋ

ನಾನಿನ್ನೂ ಹೇಳಿಲ್ಲ. ಮೊದಮೊದಲು ಸುವಾಸನೆಯುಳ್ಳ ಹೊಸ ಕೆಮ್ಮಣ್ಣನ್ನು ತರುತ್ತಿದ್ದೆ. ಅದರ ಮೇಲೆ ನೀರನ್ನು ಚಿಮುಕಿಸಿದರೆ ಒಂದು ಮೃದು ಪರಿಮಳ ಬರುತ್ತದೆ. ಆದರೆ ಈ ಮಣ್ಣು ಸಿಗುವುದೇ ಕಷ್ಟ. ಜಿಗಟು, ಗಡಸು ಅಲ್ಲದ ಮೆತ್ತನೆ ಜೇಡಿಮಣ್ಣನ್ನು ಉಪಯೋಗಿಸುವುದು ಒಳಿತು. ಗೊಬ್ಬರ ಹಾಕಿದ ನೆಲದಿಂದ ಮಣ್ಣನ್ನು ತೆಗೆದುಕೊಳ್ಳಲೇಕೂಡದು. ತಂದ ಮೇಲೆ ಮಣ್ಣನ್ನು ಒಣಗಿಸಿ, ಕುಟ್ಟಿ, ಸಣ್ಣ ಕಣ್ಣಿನ ಜರಡಿಯಲ್ಲಿ ಜರಡಿ ಹಿಡಿಯಬೇಕು. ಶುದ್ಧವಾಗಿದೆಯೋ ಇಲ್ಲವೋ ಎಂಬ ಸಂಶಯ ಬಂದರೆ ಮಣ್ಣನ್ನು ಬೆಚ್ಚಗೆ ಮಾಡಬೇಕು, ಕ್ರಿಮಿಶುದ್ಧಿ ಮಾಡಬೇಕು. ಶುಭ್ರವಾದ ಸ್ಥಳದಲ್ಲಿ ಒಮ್ಮೆ ಪಟ್ಟಿ ಕಟ್ಟಲು ಉಪಯೋಗಿಸಿದ ಮಣ್ಣನ್ನು ಬಿಸುಡಬೇಕಾಗಿಲ್ಲ. ಅದನ್ನು ಬಿಸಿಲಿನಲ್ಲಿ ಒಣಗಿಸಿಯೋ, ಬೆಂಕಿಯ ಮೇಲೆ ಕಾಯಿಸಿಯೋ ಮತ್ತೆ ಕುಟ್ಟಿ ಜರಡಿಯಾಡಿಸಿ ಉಪಯೋಗಿಸಬಹುದು. ಅದನ್ನೇ ಹಲವು ಬಾರಿ ಪ್ರೋಲ್ಟೀಸು ಮಾಡಿ ಕಟ್ಟಿದರೆ ಆ ಮಣ್ಣಿನ ಪ್ರಭಾವವೇನು ತಗ್ಗದು. ನಾನೇ ಹೀಗೆ ಉಪಯೋಗಿಸಿದೇನೆ. ಪರಿಣಾಮ ಕೊಂಚವೂ ಕಡಿಮೆಯಾಗಲಿಲ್ಲ. ಮಣ್ಣಿನ ಪಟ್ಟಿಗಳನ್ನು ಸದಾ ಉಪಯೋಗಿಸುವ ಗೆಳೆಯರು ಕೆಲವರು ಯಮುನಾ ನದಿಯ ದಡದ ಮಣ್ಣು ಇದಕ್ಕೆ ಬಹಳ ಒಳ್ಳೆಯದೆಂದು ಹೇಳಿದಾರೆ.

## ಮಣ್ಣು ತಿನ್ನುವುದು

ಶುಭ್ರವಾದ ಮಣ್ಣನ್ನು ತಿಂದರೆ ಮಲಬದ್ಧತೆ ಹೋಗುತ್ತದೆ ಎಂದು ಜಸ್ಟ್ ಬರೆದಿದಾನೆ. ಪ್ರಮಾಣ-ಬಹಳ ಹೆಚ್ಚು ಎಂದರೆ ೫ ರಿಂದ ೧೦ ಗ್ರಾಂಗಳಷ್ಟು. ಅದರ ತತ್ವ ಹೀಗೆ: ಮಣ್ಣು ಜೀರ್ಣವಾಗುವುದಿಲ್ಲ. ಅದು ಕರುಳನ್ನು ತೊಳೆಯುತ್ತ ಹೊರಗೆ ಹೋಗಲೇ ಬೇಕು. ಹೀಗೆ ಉತ್ತೇಜಿತವಾದ ಸ್ನಾಯು ಸಂಕೋಚನ ಕ್ರಿಯೆ ಮಲವನ್ನು ಹೊರಗೆ ತಳ್ಳುತ್ತದೆ. ನಾನು ಈ ಪ್ರಯೋಗ ಮಾಡಿಲ್ಲ. ಆದ್ದರಿಂದ ಈ ಪ್ರಯೋಗ ಮಾಡುವವರು ತಾವೇ ಮಾಡಿ ನೋಡಬಹುದು. ಒಂದೆರಡು ಪ್ರಯೋಗ ಮಾಡಿದರೆ ಏನು ಹಾನಿಯಿಲ್ಲ ಎನಿಸುತ್ತದೆ ನನಗೆ.

## ೨

## ನೀರು

ಜಲಚಿಕಿತ್ಸೆ ಬಹಳ ಪ್ರಸಿದ್ಧವಾದ ಪುರಾತನ ಚಿಕಿತ್ಸಾ ಪದ್ಧತಿ. ಈ ವಿಷಯದಲ್ಲಿ ಅನೇಕ ಗ್ರಂಥಗಳಿವೆ. ನನ್ನ ಅಭಿಪ್ರಾಯದಲ್ಲಿ, ಕೂನೆ ಹೇಳಿರುವ ಜಲಚಿಕಿತ್ಸಾ ಪದ್ಧತಿ ಬಹಳ ಸರಳ, ಪರಿಣಾಮಕಾರಿ. ಪ್ರಕೃತಿ ಚಿಕಿತ್ಸೆಯ ಬಗ್ಗೆ ಕೂನೆ ಬರೆದ ಪುಸ್ತಕ ಹಿಂದೂಸ್ತಾನದಲ್ಲಿ ಜನಪ್ರಿಯವಾಗಿದೆ. ಹಲವು ಭಾಷೆಗಳಿಗೆ ಭಾಷಾಂತರವಾಗಿದೆ. ಕೂನೆ ಮಹಾಶಯನ ಶಿಷ್ಯರು ಆಂಧ್ರದಲ್ಲಿ ಹೆಚ್ಚು. ಆಹಾರದ ವಿಷಯವಾಗಿಯೂ ಕೂನೆ ಯಥೇಷ್ಟವಾಗಿ ಬರೆದಿದಾನೆ. ಇಲ್ಲಿ ಆತನ ಜಲಚಿಕಿತ್ಸಾ ಪ್ರಯೋಗಗಳ ಬಗ್ಗೆ ಮಾತ್ರ ಪ್ರಸ್ತಾಪಿಸುತ್ತೇನೆ.

ಜಲಚಿಕಿತ್ಸಾ ಪದ್ಧತಿಗೆ ಕೂನೆ ನೀಡಿದ ವಿಶೇಷ ಕಾಣಿಕೆ - ಕಟಿಸ್ನಾನ, ಸಿಟ್ಜ್ ಸ್ನಾನ. ಇದಕ್ಕಾಗಿ ಆತ ಒಂದು ಪ್ರತ್ಯೇಕ ತೊಟ್ಟಿಯನ್ನೇ ರಚಿಸಿದಾನೆ. ಆ ತೊಟ್ಟಿಯಿಲ್ಲದಿದ್ದರೂ ಬಾಧಕವಿಲ್ಲ. ರೋಗಿಯ ಎತ್ತರಕ್ಕೆ ತಕ್ಕಂತೆ ೩೦-೩೬ ಅಂಗುಲ ಉದ್ದವಾದ ತೊಟ್ಟಿ ಯಾವುದಾದರೂ ಸಾಕು. ಅನುಭವದಿಂದ ತೊಟ್ಟಿ ಎಷ್ಟು ಉದ್ದವಿರಬೇಕೋ ತಿಳಿಯುತ್ತದೆ. ತೊಟ್ಟಿಯ ತುಂಬಾ ಸ್ವಚ್ಛವಾದ ತಣ್ಣೀರನ್ನು ತುಂಬಬೇಕು. ರೋಗಿ ತೊಟ್ಟಿಯಲ್ಲಿ ಕೂತರೆ ನೀರು ತುಳುಕದಷ್ಟು ತುಂಬಬೇಕು. ಬೇಸಿಗೆಯಲ್ಲಿ ನೀರು ತಣ್ಣಗಿಲ್ಲದಿದ್ದರೆ, ರೋಗಿಗೆ ಸ್ವಲ್ಪ ಉತ್ತೇಜನವಾಗುವ ಹಾಗೆ ಕೊಂಚ ಮಂಜಿನಗಡ್ಡೆಯನ್ನು ನೀರಿಗೆ ಸೇರಿಸಬಹುದು. ಮಣ್ಣಿನ ಗಡಿಗೆಗಳಲ್ಲಿ ರಾತ್ರಿ ತುಂಬಿಟ್ಟ ನೀರು ಇದಕ್ಕೆ ಯೋಗ್ಯ. ನೀರಿನ ಮೇಲೆ ಒಂದು ಬಟ್ಟೆಯನ್ನು ಹರಡಿ, ಅದರ ಮೇಲೆ ಬಲವಾಗಿ ಗಾಳಿ ಬೀಸಿದರೂ ನೀರು ತಣ್ಣಗಾಗುತ್ತದೆ. ಬಚ್ಚಲುಮನೆಯ ಗೋಡೆಗೆ ತೊಟ್ಟಿಯನ್ನು ಆನಿಸಬೇಕು. ಅದರಲ್ಲಿ ಬೆನ್ನಿಗೆ ಆನಿಕೆಗಾಗಿ ಒಂದು ಹಲಗೆಯಿರಬೇಕು. ರೋಗಿ ಆ ತೊಟ್ಟಿಯಲ್ಲಿ ಕುಳಿತು ತನ್ನ ಕಾಲನ್ನು ತೊಟ್ಟಿಯ ಹೊರಗಡೆ ಬಿಡಬೇಕು. ನೀರಿನ ಹೊರಗಡೆಯಿರುವ ದೇಹದ ಭಾಗವನ್ನು ಚೆನ್ನಾಗಿ ಹೊದಿಸಬೇಕು. ಇಲ್ಲವಾದರೆ ತಂಡಿಯಾಗಬಹುದು. ರೋಗಿ ತೊಟ್ಟಿಯಲ್ಲಿ ಸುಖಾಸೀನನಾದ ಮೇಲೆ ಅವನ ಹೊಟ್ಟೆಯನ್ನು ಮೆತ್ತನೆ ಟವಲಿನಿಂದ ಮೃದುವಾಗಿ ತಿಕ್ಕಬೇಕು. ಹೀಗೆ ಐದರಿಂದ ಮೂವತ್ತು ನಿಮಿಷ ಈ ಸ್ನಾನ ಮಾಡಬಹದು. ಸ್ನಾನವಾದ ಮೇಲೆ ಮೈಯನ್ನು ತೇವವಿಲ್ಲದಂತೆ ಚೆನ್ನಾಗಿ

ಒರೆಸಿ, ರೋಗಿಯನ್ನು ಹಾಸಿಗೆಯಲ್ಲಿ ಮಲಗಿಸಬೇಕು.

ಜ್ವರ ಏರಿದಾಗ ಕಟಿಸ್ನಾನ ಮಾಡಿಸಿದರೆ ಉಷ್ಣ ಇಳಿಯುತ್ತದೆ. ಮೇಲೆ ಹೇಳಿದ ರೀತಿಯಲ್ಲಿ ಸ್ನಾನಮಾಡಿಸಿದರೆ ಅದರಿಂದ ಬಾಧಕವಾಗುವುದೇ ಇಲ್ಲ, ಹಿತವಾಗುವ ಸಂಭವವುಂಟು. ಮಲಬದ್ಧತೆಯನ್ನು ತೊಲಗಿಸಿ ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ. ರೋಗಿಗೆ ದಣಿವಾರಿ ಹೊಸಶಕ್ತಿ ಬಂದಂತಾಗುತ್ತದೆ. ಮೈಯಲ್ಲಿ ಲವಲವಿಕೆ ಹುಟ್ಟುತ್ತದೆ. ಮಲಬದ್ಧತೆಯ ರೋಗಕ್ಕೆ ಕಟಿಸ್ನಾನವಾದೊಡನೆ ಅರ್ಧಮೈಲಿ ವೇಗವಾಗಿ ನಡೆಯಬೇಕೆಂದು ಕೂನೆ ಸೂಚಿಸುತ್ತಾನೆ. ಊಟ ಮಾಡಿದ ಮೇಲೆ ಈ ಸ್ನಾನ ಮಾಡಿಸಕೂಡದು.

ನಾನು ಕಟಿಸ್ನಾನದ ಪ್ರಯೋಗವನ್ನು ಬಹಳ ಹೆಚ್ಚಾಗಿಯೆ ಮಾಡಿದೇನೆ. ಶೇ. ೭೫ ಪ್ರಸಂಗಗಳಲ್ಲಿ ಅದರಿಂದ ಹಿತಪರಿಣಾಮವಾಗಿದೆ. ರೋಗಿಗೆ ತೊಟ್ಟಿಯಲ್ಲಿ ಕುಳಿತುಕೊಳ್ಳುವಷ್ಟು ತ್ರಾಣವಿದ್ದರೆ ಸ್ನಾನವಾದೊಡನೆಯೆ ಎರಡು ಮೂರು ಅಂಶ ಶಾಖ ಕಡಮೆಯಾಗಿ ತೀರುತ್ತದೆ, ಸನ್ನಿಪಾತ ಬರುವುದು ತಪ್ಪುತ್ತದೆ.

ಕೂನೆ ಅಭಿಪ್ರಾಯದಂತೆ ಕಟಿಸ್ನಾನದ ತತ್ವ ಇದು: ಜ್ವರಕ್ಕೆ ಏನೇ ಕಾರಣವೆಂದು ಕಾಣಲಿ, ಸಾಧಾರಣವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ನಿಜವಾಗಿ ಒಂದೇ ಕಾರಣ – ಹೊಟ್ಟೆಯಲ್ಲಿ, ಕರುಳಿನಲ್ಲಿ ಮಲ ಹೆಚ್ಚಾಗಿ ಸೇರಿಕೊಂಡಿರುವುದು. ಈ ಕಸ ಅಲ್ಲಿ ಕೊಳೆಯುವಾಗ ಶಾಖ ಹುಟ್ಟುತ್ತದೆ. ಆ ಶಾಖ ಜ್ವರವಾಗಿ, ಬೇರೆ ಕಾಯಿಲೆಗಳಾಗಿ ಕಾಣಿಸಿಕೊಳ್ಳುತ್ತದೆ. ಕಟಿಸ್ನಾನದಿಂದ ಒಳಜ್ವರ ಕಡಮೆಯಾಗುತ್ತದೆ. ಒಳಗಡೆ ಜ್ವರ ಕಡಮೆಯಾದರೆ ಮೇಲೆ ಕಾಣಿಸಿಕೊಳ್ಳುವ ಜ್ವರವೋ ಮತ್ತೊಂದೋ ತನಗೆ ತಾನೇ ಕಡಮೆಯಾಗಲೇಬೇಕು. ಈ ವಾದ ಎಷ್ಟು ಮಟ್ಟಿಗೆ ಸರಿಯೋ ನಾನು ಹೇಳಲಾರೆ. ತಜ್ಞರು ಹೇಳಬೇಕಾದುದು ಅದು. ವೈದ್ಯರು ಪ್ರಕೃತಿಚಿಕಿತ್ಸೆಯಿಂದ ಕೆಲವು ವಿಷಯಗಳನ್ನು ತೆಗೆದುಕೊಂಡಿದ್ದರೂ ಒಟ್ಟಾರೆ ಪ್ರಕೃತಿ ಚಿಕಿತ್ಸೆಯೆಂದರೆ ಅವರಿಗೆ ಸೇರದು. ಈ ಪರಿಸ್ಥಿತಿಗೆ ಉಭಯತ್ರರೂ ಕಾರಣವೆಂದು ನನ್ನ ಅಭಿಪ್ರಾಯ. ವೈದ್ಯರು ಕೂಪಸ್ಥ ಕೂರ್ಮಗಳಂತೆ ತಮಗೆ ಹೇಳಿದ ಪಾಠವನ್ನು ದಾಟಿ ಮತ್ತೊಂದಕ್ಕೆ ಕೈಹಾಕುತ್ತಿಲ್ಲ. ತಮ್ಮ ಜಾಡನ್ನು ಬಿಟ್ಟು ಹೊರಗೆ ಏನೇ ಇರಲಿ ಅವರಿಗೆ ಅದನ್ನು ಕಂಡರೆ ತಿರಸ್ಕಾರವಲ್ಲದಿದ್ದರೂ ತಾತ್ಸಾರ. ಪ್ರಕೃತಿ ಚಿಕಿತ್ಸಾವಾದಿಗಳೂ ಅಷ್ಟೇ – ವೈದ್ಯರ ಬಗ್ಗೆ ಅಸಹನೆ ತೋರಿಸುತ್ತಾರೆ. ತಮಗೆ ಇರುವ

ಶಾಸ್ತ್ರೀಯ ಜ್ಞಾನ ಅತ್ಯಲ್ಪವಾದರೂ ಬಹಳ ತಿಳಿದವರಂತೆ ಬಡಾಯಿ ಕೊಚ್ಚುತ್ತಾರೆ. ಅವರಿಗೆ ಸಂಘಟನಾ ಬುದ್ಧಿಯಿಲ್ಲ. ಪ್ರತಿಯೊಬ್ಬನೂ ತನ್ನ ಪಾಡಿಗೆ ತಾನು ತೃಪ್ತನಾಗಿ ಕೆಲಸಮಾಡುತ್ತಾನೆ. ಎಲ್ಲರೂ ಕಲೆತು ತಮ್ಮ ಸರ್ವಶಕ್ತಿಯನ್ನು ವಿನಿಯೋಗಿಸಿ ಆ ಪದ್ಧತಿಯನ್ನು ಮೇಲೆತ್ತಲು ದುಡಿಯರು. ಪ್ರಕೃತಿ ಚಿಕಿತ್ಸಾ ಪದ್ಧತಿಯ ಸಾಧ್ಯಾಸಾಧ್ಯತೆಯನ್ನೂ ಅದರ ವಿವರಗಳನ್ನೂ ಶಾಸ್ತ್ರೀಯವಾಗಿ ಪರಿಶೋಧನೆ ಮಾಡಲು ಯಾರಿಗೂ ಮನಸ್ಸಿಲ್ಲ. ವಿನಯವನ್ನು ಕಲಿಯುವ ಪ್ರಯತ್ನವನ್ನಂತೂ ಯಾರೂ ಮಾಡಲೇ ಮಾಡರು. ವಿನಯವನ್ನು ಕಲಿಯಬಹುದೋ ಇಲ್ಲವೋ !

ಪ್ರಕೃತಿಚಿಕಿತ್ಸಾವಾದಿಗಳನ್ನು ತೆಗಳಲು ಇದನ್ನು ನಾನು ಬರೆದಿಲ್ಲ. ನಾನೂ ಒಬ್ಬ ಜೊತೆಗಾರ. ಇರುವ ವಿಷಯವನ್ನು ಇರುವ ಹಾಗೆ ಅರಿತುಕೊಂಡು ಅವರು ತಿದ್ದಿಕೊಳ್ಳಲಿ ಎಂದು ನನ್ನ ಅಭಿಪ್ರಾಯ. ಪ್ರಕೃತಿ ಚಿಕಿತ್ಸಾವಾದಿಗಳಲ್ಲೇ ಒಬ್ಬ ಸಾಮರ್ಥ್ಯವಂತ ಮುಂದೆ ಬಂದು ಇದರ ಏಳಿಗೆಯೇ ತನ್ನ ಪರಮಾರ್ಥವೆಂದು ಕೆಲಸ ಮಾಡುವವರೆಗೆ ಈ ಸ್ಥಿತಿ ಸುಧಾರಿಸದು, ಈಗಿನ ವೈದ್ಯಶಾಸ್ತ್ರಕ್ಕೆ ತನ್ನದೇ ಒಂದು ಶಾಸ್ತ್ರ, ವೈದ್ಯಸಂಘ, ವಿದ್ಯಾಲಯ ಇದೆ. ಸ್ವಲ್ಪ ಮಟ್ಟಿಗೆ ಯಶಸ್ಸೂ ದೊರೆತಿದೆ. ಇನ್ನೂ ಪೂರ್ಣವಾಗಿ ಪರಿಶೀಲಿಸಲ್ಪಟ್ಟು ಶಾಸ್ತ್ರೀಯವಾಗಿ ಸಿದ್ಧವಾಗಬೇಕಾದುದನ್ನು ಅಂಥ ವೈದ್ಯರ ಗುಂಪು ಈಗಲೇ ನಂಬುವುದು ಕಷ್ಟ.

ಅದೇನೇ ಇರಲಿ, ಪ್ರಕೃತಿ ಚಿಕಿತ್ಸಾ ಪದ್ಧತಿ ಪ್ರಕೃತಿಸಹಜವಾದುದು. ಆದ್ದರಿಂದ ಎಂಥ ಸಾಮಾನ್ಯ ಮನುಷ್ಯನೂ ಅದನ್ನು ಪ್ರಯೋಗಿಸಬಹುದು ಎಂಬುದನ್ನು ಜನರು ಅರಿಯಬೇಕಾದುದು ಅಗತ್ಯ. ತಲೆ ನೋವಿನಿಂದ ನರಳುತ್ತಿರುವ ಮನುಷ್ಯ ತನ್ನ ತಲೆಗೆ ಒಂದು ಒದ್ದೆ ಬಟ್ಟೆಯ ಪಟ್ಟಿ ಕಟ್ಟಿಕೊಂಡರೆ ಅದರಿಂದಾಗುವ ಹಾನಿಯೇನೂ ಇಲ್ಲ. ತಣ್ಣೀರಿಗೆ ಮಣ್ಣನ್ನು ಸೇರಿಸಿ ಪೋಲ್ಟೀಸು ಮಾಡಿ ಕಟ್ಟಿದರೆ ಪಟ್ಟಿಯ ಪ್ರಯೋಜನ ಹೆಚ್ಚಾಗುತ್ತದೆ.

ಈಗ ಸಿಟ್ಜ್ ಸ್ನಾನದ ವಿಷಯ. ಈ ದೇಹದಲ್ಲೆಲ್ಲ ಜನನೇಂದ್ರಿಯವೇ ಬಹಳ ಸೂಕ್ಷ್ಮ, ನಾಜೂಕು. ಲಿಂಗದಲ್ಲಿ, ಅದರ ಮುಂದೊಗಲಿನ ಥಟ್ಟನೆ ಕೆರಳುವ ಅತಿಸೂಕ್ಷ್ಮತೆಯಲ್ಲಿ, ಏನೋ ಒಂದು ಇಂದ್ರಜಾಲವಿದೆ. ಏನೋ ನಾನು ವರ್ಣಿಸಲಾರೆ.

ಕೂನೆ ಈ ಜ್ಞಾನವನ್ನು ಚಿಕಿತ್ಸೆಗೆ ಬಳಸಿಕೊಂಡಿದಾನೆ. ಜನನೇಂದ್ರಿ

ಯದ ಹೊರಭಾಗದ ತುದಿಯ ಮೇಲೆ ತಣ್ಣೀರನ್ನು ಮೇಲಿನಿಂದ ಹನಿಸುತ್ತ, ಮೆತ್ತನೆಯ ಒದ್ದೆ ಬಟ್ಟೆಯಿಂದ ಅದನ್ನು ಮೃದುವಾಗಿ ಒರೆಸಬೇಕೆನ್ನುತ್ತಾನೆ. (ಪುರುಷ) ಲಿಂಗವಾದರೆ ಮುಂದೊಗಲು ಲಿಂಗವನ್ನು ಮುಚ್ಚಿರಬೇಕು. ಆಮೇಲೆಯೆ ಮರ್ದನ. ಕೂನೆ ಹೇಳುವ ರೀತಿ ಇದು. ಒಂದು ತೊಟ್ಟಿಯಲ್ಲಿ ತಣ್ಣೀರು ತುಂಬಿ ಅದರ ನಡುವೆ ಒಂದು ಸ್ಟೂಲನ್ನಿಡಬೇಕು. ಅದರ ಮೇಲೆ ಕುಳಿತರೆ ನೀರಿನ ಮಟ್ಟದ ಮೇಲೆಯೇ ಇರಬೇಕು. ರೋಗಿ ತೊಟ್ಟಿಯ ಹೊರಗಡೆ ಕಾಲು ನೀಡಿ ಕುಳಿತುಕೊಳ್ಳಬೇಕು. ರೋಗಿಯ ಜನನೇಂದ್ರಿಯ ನೀರಿಗೆ ತಾಕುವಂತಿರಬೇಕು. ಆಗ ಅದನ್ನು ಮೃದುವಾಗಿ ಒರೆಸಬೇಕು. ಮರ್ದನದಿಂದ ನೋವಾಗಬಾರದು. ಅದರ ಬದಲು ರೋಗಿಗೆ ಹಿತವಾಗಬೇಕು. ಸ್ನಾನವಾದ ಮೇಲೆ ದಣಿವಾರಿ ಶಾಂತಿಯ ಅನುಭವವಾಗಬೇಕು. ಏನೇ ಕಾಯಿಲೆಯಿರಲಿ, ತೊಟ್ಟಿ ಸ್ನಾನದಿಂದ ಆ ತತ್ಕಾಲಕ್ಕಾದರೂ ರೋಗಿಗೆ ಹಿತವೆನಿಸುತ್ತದೆ. ಕಟಿ ಸ್ನಾನಕ್ಕಿಂತ ಈ ತೊಟ್ಟಿ ಸ್ನಾನವೇ ಉತ್ತಮ ಎನ್ನುತ್ತಾನೆ ಕೂನೆ. ನನಗೆ ಕಟಿ ಸ್ನಾನವೇ ಹೆಚ್ಚು ಅನುಭವ. ನನ್ನದೇ ತಪ್ಪು. ಸ್ವಲ್ಪ ಸೋಮಾರಿಯಾದೆ. ತೊಟ್ಟಿ ಸ್ನಾನ ಮಾಡಿ ಎಂದು ನಾನು ಯಾರಿಗೆ ಹೇಳಿದೆನೋ ಅವರಿಗೆ ಈ ಪ್ರಯೋಗ ಮಾಡುವ ತಾಳ್ಮೆಯಿರಲಿಲ್ಲ. ಈ ಸ್ನಾನದ ಬಗ್ಗೆ ಸ್ವಾನುಭವದಿಂದ ನಾನು ಏನೂ ಹೇಳಲಾರೆ. ಪ್ರತಿಯೊಬ್ಬರಿಗೂ ಇದು ಪ್ರಯತ್ನ– ಯೋಗ್ಯ. ತೊಟ್ಟಿ ಇಲ್ಲದಿದ್ದರೆ ಒಂದು ಲೋಟಾದಿಂದ ನೀರನ್ನು ಹನಿಸುತ್ತ ಈ ಮರ್ದನ– ಸ್ನಾನ ಮಾಡಬಹುದು. ಅದರಿಂದ ರೋಗಿಗೆ ದಣಿವಾರಿ ಶಾಂತಿ ಸಿಗುತ್ತದೆ. ಸಾಮಾನ್ಯವಾಗಿ ಜನರಿಗೆ ಜನನೇಂದ್ರಿಯವನ್ನು ಶುದ್ಧಿ ಮಾಡಿಕೊಳ್ಳುವುದರ ಕಡೆ ಗಮನವೇ ಇಲ್ಲ. ತೊಟ್ಟಿ ಸ್ನಾನದಿಂದ ಜನನೇಂದ್ರಿಯ ಶುದ್ಧಿಯಾಗುತ್ತದೆ. ಮನುಷ್ಯ ಜಾಗರೂಕವಾಗಿರದಿದ್ದರೆ ಲಿಂಗಕ್ಕೂ ಮುಂದೊಗಲಿಗೂ ನಡುವೆ ಕೊಳೆ ಸೇರುತ್ತದೆ. ಈ ಕೊಳೆಯನ್ನು ತೊಳೆಯಲೇ ಬೇಕು. ಜನನೇಂದ್ರಿಯವನ್ನು ಪರಿಶುದ್ಧವಾಗಿಟ್ಟುಕೊಳ್ಳಲೇಬೇಕೆಂಬ ಆಗ್ರಹದಿಂದ ಮೇಲೆ ಹೇಳಿದ ಚಿಕಿತ್ಸೆ ಯನ್ನು ತಾಳ್ಮೆಯಿಂದ ನಡೆಯಿಸುತ್ತ ಬಂದರೆ ಬ್ರಹ್ಮಚರ್ಯ ಪಾಲನೆ ಸುಲಭ ವಾಗುತ್ತದೆ. ನರಗಳ ಸೂಕ್ಷ್ಮತೆ, ಶೀಘ್ರ ಸಂವೇಗ ಕಡಮೆಯಾಗಿ ಅನಪೇಕ್ಷಿತ ವೀರ್ಯಸ್ಖಲನ ನಿಲ್ಲುತ್ತ ಬರುತ್ತದೆ. ಹೆಚ್ಚು ಹೇಳಬೇಕಾಗಿಲ್ಲ: ವೀರ್ಯಸ್ಖಲನ ಗಳಿಗೆ ಅವಕಾಶ ಕೊಡುವುದು ಬಹಳ ಅಶುಚಿ, ಕೊಳಕು ಎಂದರೆ ಸಾಕು. ಶುಚಿಯ ಆಗ್ರಹ ಎಷ್ಟು ಹೆಚ್ಚಾದರೆ ವೀರ್ಯಸ್ಖಲನದ ಬಗ್ಗೆ ತೀರಾ ಅಸಹ್ಯ

ಹುಟ್ಟಿ ಹಾಗಾಗದಂತೆ ಏನೆಲ್ಲ ಮಾಡಬೇಕೋ ಅದೆಲ್ಲವನ್ನೂ ಮಾಡುವ ಎಚ್ಚರಿಕೆ ಹುಟ್ಟುತ್ತದೆ.

ಎರಡು ಕೂನ ಸ್ನಾನಪದ್ಧತಿಗಳ ವಿಷಯ ಹೇಳಿದ ಮೇಲೆ ಒದ್ದೆ ದುಪ್ಪಟಿಯ ಬಗ್ಗೆ ಒಂದೆರಡು ಮಾತು ಹೇಳಿದರೆ ಅಪ್ರಸ್ತುತವಲ್ಲ. ನಿರ್ನಿದ್ರತೆಗೆ, ಜ್ವರಕ್ಕೆ ಇದು ಬಹಳ ಒಳ್ಳೆಯದು. ಒಂದು ಮಂಚದ ಮೇಲೆ ಮೂರು ನಾಲ್ಕು ಕಂಬಳಿಗಳನ್ನು ಹಾಸಿ, ದಪ್ಪನಾದ ಹಚ್ಚಡವನ್ನು ತಣ್ಣೀರಿನಲ್ಲಿ ನೆನೆಯಿಸಿ ನೀರನ್ನು ಹಿಂಡಿ ಆ ಹಚ್ಚಡವನ್ನು ಅದರ ಮೇಲೆ ಹಾಸಿಬಿಡಿ. ಆ ಹಚ್ಚಡದ ಮೇಲೆ ರೋಗಿ ಮಲಗಬೇಕು. ರೋಗಿಯ ತಲೆ ಆ ಹಚ್ಚಡದ ಹೊರಗಡೆ ಬೇರೆ ತಲೆ ದಿಂಬಿನ ಮೇಲೆ ಇರಬೇಕು. ಪಕ್ಕಗಳಲ್ಲಿರುವ ಹಚ್ಚಡ, ಕಂಬಳಿಗಳನ್ನು ರೋಗಿಗೆ ಹೊದಿಸಿ, ಸುತ್ತಿಬಿಡಬೇಕು. ಇದೇ ರೀತಿ ಒಂದು ಅಂಗವಸ್ತ್ರವನ್ನು ನೆನೆಯಿಸಿ ಹಿಂಡಿ ತಲೆಗೆ ಸುತ್ತಬೇಕು. ಹೊರಗಿನ ಗಾಳಿ ರೋಗಿಯ ಮೈಗೆ ತಗಲದಂತೆ ಈ ಒದ್ದೆ ಹಚ್ಚಡ– ಕಂಬಳಿಗಳನ್ನು ಚೆನ್ನಾಗಿ ಸುತ್ತಬೇಕು. ರೋಗಿಗೆ ಮೊದಲು ಕೊಂಚ ಗಾಬರಿಯಾದರೂ ಆಮೇಲೆ ಈ ಚಿಕಿತ್ಸೆ ಹಾಯಾಗಿರುತ್ತದೆ. ಒಂದೆರಡು ನಿಮಿಷದಲ್ಲಿಯೆ ಆವನಿಗೆ ಬೆಚ್ಚಗೆ ಅನಿಸುತ್ತದೆ. ಬಹಳ ಹಳೆಯ ಜ್ವರವಲ್ಲ ದಿದ್ದರೆ ಐದಾರು ನಿಮಿಷಗಳಲ್ಲಿಯೆ ಮೈ ಬೆವರು ಬೆವರಾಗಿ ಜ್ವರ ಇಳಿಯುತ್ತದೆ. ಕೆಲವು ಮೊಂಡು ಪ್ರಸಂಗಗಳಲ್ಲಿ ರೋಗಿಯನ್ನು ಅರ್ಧಗಂಟೆಯವರೆಗೂ ಒದ್ದೆ ಹಚ್ಚಡದಲ್ಲಿಯೆ ನಾನು ಮಲಗಿಸಿದ್ದೇನೆ. ಕಟ್ಟಕಡೆಗೆ ಬೆವರು ಬಂದಿದೆ. ಕೆಲವು ವೇಳೆ ಬೆವರು ಬರುವುದಿಲ್ಲ ; ರೋಗಿ ನಿದ್ದೆ ಹೋಗುತ್ತಾನೆ. ಆಗ ಅವನನ್ನು ಎಚ್ಚರಿಸಬಾರದು. ಆ ನಿದ್ದೆ ಒದ್ದೆಯ ಹಚ್ಚಡ ರೋಗಿಯ ಬಾಧೆಯನ್ನು ತಗ್ಗಿಸುತ್ತಿದೆ, ಅವನಿಗೆ ಹಿತವಾಗಿದೆ ಎಂಬುದರ ಲಕ್ಷಣ. ಈ ಚಿಕಿತ್ಸೆಯಿಂದ ಕನಿಷ್ಠಪಕ್ಷ ಒಂದೆರಡು ಅಂಶವಾದರೂ ಜ್ವರ ತಗ್ಗುತ್ತದೆ.

ಮೂವತ್ತು ವರ್ಷದ ಕೆಳಗೆ ನನ್ನ ಎರಡನೆಯ ಮಗ ಡಬಲ್ ನ್ಯೂಮೋ ನಿಯಾ (ಶ್ವಾಸಕೋಶದ ಉಷ್ಣವಾಯು)ದಿಂದ ಮಲಗಿದ. ಜ್ವರ ಹೆಚ್ಚಿ ಸನ್ನಿ ಹುಟ್ಟಿತು. ನನ್ನ ವೈದ್ಯಮಿತ್ರನೊಬ್ಬ ಅವನನ್ನು ಪರೀಕ್ಷಿಸಿ ಔಷಧ ಹೇಳುತ್ತಲೇ ಇದ್ದ. ನಾನದನ್ನು ಕೊಡಲಿಲ್ಲ. ಅದರ ಬದಲು ಜಲಚಿಕಿತ್ಸೆಯನ್ನು ಮಾಡಿದೆ. ಜ್ವರ ಬಹಳ ಮೇಲೇರಿದಾಗ ಅವನಿಗೆ ಒದ್ದೆ ದುಪ್ಪಟಿ ಚಿಕಿತ್ಸೆಮಾಡುತ್ತಿದ್ದೆ. ಆರೇಳು ದಿನದ ಮೇಲೆ ಜ್ವರ ಇಳಿಯಿತು. ನನಗೆ ನೆನಪಿದ್ದ ಹಾಗೆ ಅವನಿಗೆ ನೀರಲ್ಲದೆ ಬೇರೇನೂ ಕೊಡಲಿಲ್ಲ. ಬಹುಶಃ ಕಿತ್ತಲೆ ಹಣ್ಣಿನ ರಸವನ್ನು

ಕೊಟ್ಟೆನೋ ಏನೋ ! ಮತ್ತೇನೂ ಇಲ್ಲವೇ ಇಲ್ಲ. ಇದರ ಮೇಲೆ ವಿಷಮಶೀತ ಜ್ವರ ಬಂತು. ೪೨ ದಿನ ಇತ್ತು ಜ್ವರ. ಶುಶ್ರೂಷೆ, ಉಪಚಾರ ಹೊರತು ಮತ್ತೇನೂ ಚಿಕಿತ್ಸೆ ಮಾಡಲಿಲ್ಲ. ಹಾಲು, ನೀರು ಆಹಾರ. ದಿನವೂ ಸ್ಪಂಜಿನ ಸ್ನಾನ. ಅವನಿಗೆ ಪೂರ್ಣವಾಗಿ ಗುಣವಾಯಿತು. ಈಗ ನನ್ನ ಮಕ್ಕಳು ನಾಲ್ವರಲ್ಲಿ ಅವನೇ ಹೆಚ್ಚು ಆರೋಗ್ಯವಂತ, ಬಲಶಾಲಿ. ಆ ಉಪಚಾರ–ಜಲ ಚಿಕಿತ್ಸೆಗಳಿಂದ ಅವನಿಗೆ ನಷ್ಟವಾಗಲಿಲ್ಲ ಎಂದಾದರೂ ಹೇಳಬಹುದು, ಕನಿಷ್ಠ ಪಕ್ಷ.

ನಾನಾಬಗೆಯ ಚರ್ಮರೋಗಗಳಿಗೂ ಸಿಡುಬು, ದಡಾರ ಮುಂತಾದ ವಕ್ಕೂ ಒದ್ದೆ ದುಪ್ಪಟಿ ಚಿಕಿತ್ಸೆ ಒಳ್ಳೆಯದು. ಈ ಕಾಯಿಲೆಗಳಿಗೆ ನಾನು ಅನೇಕ ಸಲ ಈ ಚಿಕಿತ್ಸೆ ಮಾಡಿದೇನೆ. ಸಿಡುಬು, ದಡಾರಗಳಲ್ಲಿ ನೀರಿಗೆ ಬಣ್ಣ ಬರುವಂತೆ ಪೊಟಾಸಿಯಂ ಪರ್ಮಾಂಗನೇಟನ್ನು ಬೆರೆಸಿದೆ. ಈ ರೋಗಿಗಳಿಗೆ ಉಪಯೋಗಿಸಿದ ದುಪ್ಪಟಿ ಕಂಬಳಿಗಳನ್ನು ಆಮೇಲೆ ಮರುಳುವ ನೀರಿನಲ್ಲಿ ಅದ್ದಿ, ನೀರು ಬಿಸಿಯಾಗುವವರೆಗೆ ಅದರಲ್ಲೇ ಬಿಟ್ಟು ತರುವಾಯ ತೆಗೆದು ಹಿಂಡಿ ಸಾಬೂನು ಹಾಕಿ ಒಗೆಯಬೇಕು.

ರಕ್ತಸಂಚಾರ ಮಂದವಾಗಿ ಕಾಲಿನ ಮಾಂಸಖಂಡಗಳು ನೋವಾಗಿ ಬಹಳ ಅಹಿತವೆನಿಸುತ್ತಿದ್ದರೆ ಕಾಲಿಗೆ ಮಂಜಿನ ಗಡ್ಡೆಯನ್ನು ತಿಕ್ಕುತ್ತ ನೀವಿದರೆ ಒಳ್ಳೆಯದು. ದುರ್ಬಲನಾದ ರೋಗಿಯನ್ನು ಛಳಿಗಾಲದಲ್ಲಿ ಮಂಜು ಹಾಕಿ ತಿಕ್ಕಿ ನೀವಿದರೆ ಅಪಾಯವುಂಟು.

ಬಿಸಿನೀರಿನ ಚಿಕಿತ್ಸಾಗುಣದ ಬಗ್ಗೆ ಎರಡು ಮಾತು. ಬುದ್ಧಿವಂತಿಕೆಯಿಂದ ಬಿಸಿನೀರನ್ನು ಉಪಯೋಗಿಸಿದರೆ ಎಷ್ಟೋ ಸಂದರ್ಭಗಳಲ್ಲಿ ಫಲಕಾರಿಯಾಗುತ್ತದೆ. ಯಾವ ಗಾಯವಾದರೂ ಅಯೋಡಿನ್ ಈಗ ಜನಪ್ರಿಯವಾದ ಮದ್ದು. ಅನೇಕ ಸಲ ಬಿಸಿ ನೀರನ್ನು ಉಪಯೋಗಿಸಿದರೆ ಅಷ್ಟೇ ಪರಿಣಾಮಕಾರಿ. ಮೈತರೆದ ಗಾಯಕ್ಕೆ, ಬಾವಿಗೆ ಅಯೊಡೀನ್ ಟಿಂಕ್ಚರನ್ನು ಸವರುತ್ತಾರೆ. ಬಿಸಿನೀರಿನ ಕಾವನ್ನು ಕೊಟ್ಟರೆ, ಇನ್ನೂ ಹೆಚ್ಚಲ್ಲದಿದ್ದರೆ, ಇಷ್ಟಾದರೂ ಶಮನ ಮಾಡುತ್ತದೆ. ಕಿವಿನೋವು ಆದಾಗ ಅಯೊಡೀನ್ ಉಪಯೋಗಿಸುತ್ತಾರೆ. ಕಿವಿಯನ್ನು ಬಿಸಿನೀರಿನಿಂದ ತೊಳೆದರೆ ಅಷ್ಟೇ ಪರಿಣಾಮವಾಗುತ್ತದೆ. ಅಯೊಡೀನ್ ಉಪಯೋಗದಲ್ಲಿ ಕೆಲವು ಅಪಾಯಗಳಿವೆ. ರೋಗಿಗೆ ಮದ್ದು ಹಿಡಿಸದಿರಬಹುದು. ಇದೇನೋ ಬೇರೆ ಪದಾರ್ಥವೆಂದು ರೋಗಿ ಅಯೋಡಿನನ್ನು

ಹೊಟ್ಟೆಯೊಳಕ್ಕೆ ತೆಗೆದುಕೊಂಡರೆ ಅಪಾಯ. ಬಿಸಿ ನೀರಿನಲ್ಲಿ ಯಾವ ಅಪಾಯವೂ ಇಲ್ಲ. ಮರಳುವ ನೀರು ಅಯೋಡಿನ್‌ನಷ್ಟೇ ಕ್ರಿಮಿನಾಶಕ. ಅಯೊಡೀನನ್ನು ನಾನು ತೆಗಳುತ್ತಿಲ್ಲ. ಅಥವಾ ಅದರ ಬದಲು ಬಿಸಿ ನೀರನ್ನೇ ಎಲ್ಲಾ ಸಂದರ್ಭದಲ್ಲೂ ಉಪಯೋಗಿಸಬಹುದೆನ್ನುತ್ತಿಲ್ಲ. ಬಡವರು ಅದನ್ನು ಕೊಳ್ಳಲಾರರು. ಎಲ್ಲರ ಕೈಗೂ ಅದನ್ನು ಉಪಯೋಗಿಸಲು ಕೊಡುವಂತಿಲ್ಲ. ನೀರು ಎಲ್ಲೆಲ್ಲೂ ಇದೆ. ಹಾಗೆಂದು ಅದಕ್ಕಿರುವ ಚಿಕಿತ್ಸಾ ಗುಣವನ್ನು ಅಸಡ್ಡೆ ಮಾಡುವುದು ಬೇಡ. ಮನೆಯಲ್ಲಿ ಸಾಧಾರಣವಾಗಿ ಬಳಕೆಯಲ್ಲಿರುವ ಔಷಧಗಳ ಜ್ಞಾನ ಎಷ್ಟೋ ಸಲ ಆಪತ್ಪ್ರಸಂಗಗಳಲ್ಲಿ ದೇವರ ಪ್ರಸಾದವೆನ್ನುವಷ್ಟು ಕೆಲಸ ಮಾಡಿದೆ.

ಚೇಳಿನ ಕಡಿತಕ್ಕೆ, ಎಲ್ಲಾ ಔಷಧವೂ ನಿರುಪಯೋಗವಾದಾಗ, ಕಡಿದ ಭಾಗವನ್ನು ಬಿಸಿನೀರಿನಲ್ಲಿ ಮುಳುಗಿಸಿ ಸ್ವಲ್ಪ ಶಮನ ಮಾಡಿಕೊಂಡುದು ಉಂಟು.

ಮೈ ನಡುಗಿಸುವ ವಾಯು, ಸೆಟೆದುಕೊಳ್ಳುವ ವಾಯು ಬಂದಾಗ ರೋಗಿಗೆ ಮೈತುಂಬಾ ಹೊದೆಸಿ, ಸುತ್ತಲೂ ಮರಳುವ ನೀರನ್ನು ಕೊಡಗಳಿಂದ ಸುರಿದರೆ ಅಥವಾ ಕೋಣೆಯನ್ನು ಆವಿಯಿಂದ ತುಂಬಿದರೆ ವಾಯು ಕಡಮೆಯಾಗುತ್ತದೆ. ರಬ್ಬರಿನಿಂದ ಮಾಡಿದ ಬಿಸಿ ನೀರಿನ ಚೀಲ ಬಹಳ ಉಪಯೋಗಕರ. ಆದರೆ ಎಲ್ಲಾ ಮನೆಗಳಲ್ಲೂ ಆ ಚೀಲ ಇರುವುದಿಲ್ಲವಲ್ಲ. ಸೀಸೆಯಲ್ಲಿ ಬಿಸಿ ನೀರು ತುಂಬಿ ಬಿಗಿಯಾಗಿ ಬಿರಟೆ ಮುಚ್ಚಿ, ಒಂದು ಬಟ್ಟೆಯಲ್ಲಿ ಸುತ್ತಿದರೆ ಅದನ್ನು ಬಿಸಿನೀರಿನ ಚೀಲದಂತೆ ಬಳಸಬಹುದು. ಬಿಸಿ ನೀರನ್ನು ತುಂಬಿದೊಡನೆ ಒಡೆದುಹೋಗುವಂಥ ಸೀಸೆಗಳನ್ನು ಬಳಸಬಾರದು.

ಆವಿಗೆ ಗುಣ ಇನ್ನೂ ಹೆಚ್ಚು. ರೋಗಿಗೆ ಬೆವರು ಬರುವಂತೆ ಮಾಡಲು ಅದನ್ನು ಉಪಯೋಗಿಸಬಹುದು. ಸಂಧಿವಾತ (ಕೀಲುನೋವು)ಕ್ಕೆ ಆವಿಸ್ನಾನ ಬಹಳ ಪರಿಣಾಮಕಾರಿ. ಆವಿಸ್ನಾನಕ್ಕೆ ಬಹಳ ಸುಲಭವಾದ, ಬಹಳ ಪುರಾತನವಾದ ಪದ್ಧತಿ ಇದು: ದೂರ ದೂರ ಹೆಣಿಗೆ ಹಾಕಿದ, ಬಿಗಿಯಾದ ಮಂಚದ ಮೇಲೆ ಒಂದೋ ಎರಡೋ ದುಪ್ಪಟಿ ಹಾಸಿ, ಮಂಚದ ಕೆಳಗೆ ಒಂದೋ ಎರಡೋ ಮರಳುವ ನೀರಿನ ಪಾತ್ರೆ ಮುಚ್ಚಳ ಮುಚ್ಚಿ ಇಡಿ. ರೋಗಿಯನ್ನು ಮಂಚದ ಮೇಲೆ ಮಲಗಿಸಿ ಹೊದಿಸಿ. ರೋಗಿಗೆ ಹೊದಿಸಿದ ದುಪ್ಪಟಿ ಸುತ್ತಲೂ ನೆಲಕ್ಕೆ ತಾಕುವಂತಿರಬೇಕು. ಅದರಿಂದ ಆವಿ ಹೊರಗೆ ಹೋಗದೆ, ಗಾಳಿ ಒಳಕ್ಕೆ ಬಾರದೆ ಹೋಗುತ್ತದೆ. ಇಷ್ಟೆಲ್ಲ ಮಾಡಿದ ಮೇಲೆ ಮಂಚದ ಕೆಳಗಿನ ಪಾತ್ರೆ

ಗಳ ಮುಚ್ಚಳವನ್ನು ತೆಗೆದುಬಿಡಿ. ಮೇಲೂ ಕೆಳಗೂ ದುಪ್ಪಟಿ ಹೊದೆದು ಹಾಸಿ ಮಲಗಿರುವ ರೋಗಿಗೆ ಆ ಆವಿ ತಗಲುತ್ತದೆ. ಒಂದೊಂದು ಸಲ ಇನ್ನೊಂದು ಮರಳುವ ನೀರಿನ ಪಾತ್ರೆಯನ್ನು ಮತ್ತೆ ಇಡಬೇಕಾಗಬಹುದು. ನೀರಿನ ಪಾತ್ರೆಯ ಕೆಳಗೆ ಅಗ್ಗಿಷ್ಟಿಕೆಯನ್ನು ಕೆಲವರು ಇಡುತ್ತಾರೆ. ಅದರಿಂದ ಆವಿಯೇನೋ ಯಥೇಷ್ಟವಾದರೂ ಅಪಾಯ ಹೆಚ್ಚು. ಒಂದೇ ಕಿಡಿ ಹಾರಿದರೂ ಮಂಚಕ್ಕೋ ದುಪ್ಪಟಿಗಳಿಗೋ ಬೆಂಕಿ ಹತ್ತಿ ರೋಗಿಯ ಪ್ರಾಣಕ್ಕೇ ಸಂಚಕಾರ ಬರಬಹುದು. ಆದ್ದರಿಂದ ನಾನು ಹೇಳಿದ ಪದ್ಧತಿ ಸ್ವಲ್ಪ ನಿಧಾನದ್ದು ಬೇಸರದ್ದು ಆದರೂ ಅದೇ ಒಳ್ಳೆಯದು.

ಮರಳುವ ನೀರಿಗೆ ಬೇವಿನೆಲೆ ಮೊದಲಾದುದನ್ನು ವನಸ್ಪತಿಗಳನ್ನು ಕೆಲವರು ಹಾಕುತ್ತಾರೆ. ಅದರಿಂದ ಏನು ಹೆಚ್ಚು ಗುಣವಿದೆಯೋ ನಾನರಿಯೆ. ಬೆವರು ಬರಬೇಕಾದುದು ಉದ್ದೇಶ್ಯ. ಅದಕ್ಕೆ ಆವಿಯೇ ಸಾಕು.

ಕಾಲು ತಣ್ಣಗಿದ್ದರೆ, ಕಾಲು ನೋಯುತ್ತಿದ್ದರೆ, ರೋಗಿ ತಡೆಯುವಷ್ಟು ಬಿಸಿನೀರಿನಲ್ಲಿ ಮೊಣಕಾಲಿನವರೆಗೆ ಕಾಲನ್ನು ಇಳಿಬಿಟ್ಟು ಕುಳಿತುಕೊಳ್ಳಬೇಕು. ನೀರಿಗೆ ಸ್ವಲ್ಪ ಸಾಸಿವೆಪುಡಿಯನ್ನು ಸೇರಿಸಬಹುದು. ಇದರಿಂದ ಆ ಭಾಗದಲ್ಲಿ ರಕ್ತಸಂಚಾರ ಹೆಚ್ಚಿ, ಕೂಡಲೆ ನೋವು ಕಡಮೆಯಾಗುತ್ತದೆ.

ಸಾಮಾನ್ಯ ಶೀತ, ಗಂಟಲ ಹುಣ್ಣುಗಳಿಗೆ ಮೂಗಿಗೆ ಗಂಟಲಿಗೆ ಆವಿ ಕಾಸಲು ಸಾಮಾನ್ಯವಾದ ಚಹಾ ಕೆಟಲಿನಂಥ ಆವಿಯ ಕೆಟಲನ್ನು ಉಪಯೋಗಿಸಬಹುದು. ಅದಕ್ಕೆ ಉದ್ದನೆ ಮೂತಿಯಿರಬೇಕು. ಸಾಮಾನ್ಯ ಕೆಟಲಿಗೆ ರಬ್ಬರು ಕೊಳವೆಯನ್ನು ಜೋಡಿಸಿಕೊಂಡು ಉಪಯೋಗಿಸಲೂಬಹುದು.

## ೩

## ಆಕಾಶ

ಆಕಾಶ ಎಂದರೆ ಬರೀ ಮುಗಿಲಲ್ಲ. ನಮ್ಮನ್ನು ಸುತ್ತಲೂ ಕವಿದಿರುವ ಶೂನ್ಯವೆಲ್ಲವೂ ಆಕಾಶವೇ. ಆಕಾಶದ ಬಗ್ಗೆ ನಮಗೆ ತಿಳಿದಿರುವುದು ಅತ್ಯಲ್ಪ. ಅದನ್ನು ಚಿಕಿತ್ಸೆಗೆ ಉಪಯೋಗಿಸಬಹುದೆಂಬ ಜ್ಞಾನ ಇಲ್ಲವೇ ಇಲ್ಲ. ಪೃಥ್ವಿಯ ಸುತ್ತಣ ಅಗಾಧ ಶೂನ್ಯ, ಅದರ ವಾತಾವರಣ, ಎಲ್ಲವೂ ಆಕಾಶವೇ. ಮೋಡವಿಲ್ಲದೆ ನಿಚ್ಚಳವಾದ ದಿನ ಮೇಲೆ ನೋಡಿದರೆ ನೀಲಿ ಬಣ್ಣದ ವಿಸ್ತಾರವಾದ ಚಪ್ಪರ ಕಂಡಂತೆ ಕಾಣುತ್ತದೆ ಮುಗಿಲು ಈ ಆಕಾಶ ಅನಂತವಾಗಿದೆ. ನಮ್ಮ

ಸುತ್ತಲೂ ಎಲ್ಲಾ ದಿಕ್ಕಿನಲ್ಲಿಯೂ ವ್ಯಾಪಿಸಿದೆ. ಅದು ಇಲ್ಲದ ಸ್ಥಳ, ಮೂಲೆ, ಸಂದು, ಯಾವುದೂ ಇಲ್ಲ. ಸಾಮಾನ್ಯವಾಗಿ ಆಕಾಶ ನಮ್ಮ ನೆತ್ತಿಯ ಮೇಲೆ, ಮೇಲುಗಡೆ, ದೂರದಲ್ಲಿ ಎಲ್ಲಿಯೋ ಇದೆ ಎಂದು ತಿಳಿಯುತ್ತಾರೆ. ಅದು ಬರೀ ನೀಲಮೇಘ. ಆಕಾಶ ಮೇಲಿದ್ದ ಹಾಗೆಯೆ ನಮ್ಮ ಕೆಳಗೂ ಇದೆ, ಸುತ್ತಲೂ ಇದೆ. ಆದ್ದರಿಂದ ಆಕಾಶ ಗುಂಡಾಗಿದೆ. ಎಲ್ಲರೂ ಅದರೊಳಗೇ ಇದೇವೆ. ಅದೊಂದು ಲಕೋಟೆ. ಲಕೋಟೆಯ ಮೇಲ್ಭಾಗ ಮುಗಿಯಿಲ್ಲದುದು, (ಮುಗಿ+ ಇಲ್) ಮುಗಿಲ್. ಆಕಾಶದ ಕೆಳಭಾಗದಲ್ಲಿ ಕೆಲವು ಮೈಲಿಯವರೆಗೆ ಗಾಳಿ ಯಿದೆ. ಇಷ್ಟು ಬಯಲು ಇದ್ದರೂ ಗಾಳಿಯಿಲ್ಲದಿದ್ದರೆ ಮನುಷ್ಯನಿಗೆ ಉಸಿರು ಕಟ್ಟುತ್ತಿತ್ತು. ಗಾಳಿ ನಮಗೆ ಕಾಣದು. ಚಲಿಸುವಾಗ ನಮಗೆ ಅದರ ಅರಿ ವಾಗುತ್ತದೆ. ಆಕಾಶ ವಾತಾವರಣದ ಚೀಲವಿದ್ದಂತೆ. ಒಂದು ಸೀಸೆಯೊಳಕ್ಕೆ ಗಾಳಿಯನ್ನು ತುಂಬಿ ಹೊರಗಡೆ ಶೂನ್ಯವಾಗಿಸಬಹುದು. ಶೂನ್ಯವನ್ನು ಯಾವು ದಕ್ಕೆ ತುಂಬಲು ಸಾಧ್ಯ? ಅದು ಆಕಾಶ.

ನಮ್ಮ ಆರೋಗ್ಯವನ್ನು ಕಾಯಲು, ಸರಿಪಡಿಸಿಕೊಳ್ಳಲು ಈ ಆಕಾಶವನ್ನು ನಾವು ಉಪಯೋಗಿಸಬೇಕು. ಪ್ರಾಣಕ್ಕೆ ಗಾಳಿ ಸರ್ವವ್ಯಾಪಿಯಾಗುವಂತೆ ಮಾಡಿದೆ ಪ್ರಕೃತಿ. ಆದರೆ ಗಾಳಿಯ ಈ ಸರ್ವತ್ರ ವ್ಯಾಪಕತನ ನಮ್ಮ ಮಟ್ಟಿಗೆ. ಕೆಲವು ಮೈಲಿ ಭೂಮಿಯಿಂದ ಮೇಲೇರಿ ಹೋದರೆ ಅಲ್ಲಿ ಗಾಳಿಯೇ ಇಲ್ಲವೆಂದು ವಿಜ್ಞಾನಿಗಳು ಹೇಳುತ್ತಾರೆ. ಭೂಮಿಯ ಸುತ್ತ ಇರುವ ಈ ವಾತಾವರಣದ ಹೊರಗಡೆ ಭೂಮಿಯ ಜೀವಜಂತುಗಳು ಬದುಕಲಾರವಂತೆ. ಈ ಮಾತು ನಿಜವೋ ಸುಳ್ಳೋ, ಅಂತೂ ಈ ವಾತಾವರಣವನ್ನು ದಾಟಿ ಹರಡಿದೆ ಆಕಾಶ ಎಂಬುದು ನಿಜ. ನಮ್ಮ ಸುತ್ತಲಿರುವ ಈ ಬಯಲಿನ ರಹಸ್ಯ ಬಹಳ ಕುತೂ ಹಲಜನಕವಾಗಿದೆ. ಭಗವಂತನ ರಹಸ್ಯವನ್ನು ಭೇದಿಸಿದಾಗ ನಾವು ಇದರ ರಹಸ್ಯವನ್ನು ಭೇದಿಸಬಹುದೇನೋ. ಅಲ್ಲಿಯವರೆಗೆ ಇಲ್ಲ. ಆಕಾಶದ ಈ ಮಹಾಭೂತವನ್ನು ಎಷ್ಟು ಹೆಚ್ಚಾಗಿ ಉಪಯೋಗಿಸಿದರೆ ನಾವು ಅಷ್ಟು ಹೆಚ್ಚು ಆರೋಗ್ಯವಂತರಾಗುತ್ತೇವೆ ಎಂದು ಹೇಳಬಹುದು. ಮೊಟ್ಟಮೊದಲು ಕಲಿಯ ಬೇಕಾದ ಪಾಠ—ನಮಗೂ ಅನಂತವಾದ ಆಕಾಶಕ್ಕೂ ನಡುವೆ ಯಾವ ಅಡ್ಡ ವನ್ನೂ ಒಡ್ಡಬಾರದು. ಆಕಾಶ ಬಹಳ ದೂರವಿದ್ದಂತಿದೆ, ಅತಿ ಸಮೀಪದಲ್ಲಿಯೆ ಇದೆ. ಈ ಮನೆ, ಛಾವಣಿ, ಬಟ್ಟೆಬರೆ ಕೂಡ ನಮ್ಮನ್ನು ಆಕಾಶದ ಸಂಪರ್ಕ ದಿಂದ ತಡೆಯುತ್ತವೆ. ಹಾಗಿಲ್ಲದಿದ್ದರೆ ನಮಗೆ ಅಖಂಡ ಆರೋಗ್ಯ ಲಭಿಸೀತು.

ಇದು ಪ್ರತಿಯೊಬ್ಬರಿಗೂ ಸಾಧ್ಯವಲ್ಲ. ಆದರೆ ಈ ನಿಯಮ ಸತ್ಯ ಎಂದು ಅರಿತು ಬದುಕನ್ನು ಅದಕ್ಕೆ ತಕ್ಕಂತೆ ಸರಿಪಡಿಸಿಕೊಳ್ಳಬೇಕು ಪ್ರತಿಯೊಬ್ಬರೂ. ಈ ಸ್ಥಿತಿ ನಮಗೆ ವ್ಯಾವಹಾರಿಕವಾಗಿ ಎಷ್ಟು ಸಾಧ್ಯವಾಗುತ್ತದೆಯೋ ಅಷ್ಟು ತೃಪ್ತಿ, ಮನಶ್ಶಾಂತಿಗಳು ನಮಗೆ ಲಭಿಸುತ್ತವೆ. ಈ ವಿಚಾರಸರಣಿಯನ್ನು ಮುಂಬರಿಸಿದರೆ ಈ ದೇಹವೂ ಕೂಡ ನಮ್ಮನ್ನೂ ಅನಂತವನ್ನೂ ಬೇರೆ ಮಾಡುವ ಆತಂಕ, ಅಡಚಣೆ ಎನಿಸುತ್ತದೆ. ಈ ಸತ್ಯ ತಿಳಿದರೆ ಈ ದೇಹನಾಶದ ಬಗ್ಗೆ ಅಸಡ್ಡೆ ಹುಟ್ಟುತ್ತದೆ. ಏಕೆಂದರೆ, ಅನಂತದಲ್ಲಿ ಲೀನವಾಗುವುದೆಂದರೆ ಅನಂತವೇ ಆದಂತೆ. ಆಗ ದೇಹ ಇಂದ್ರಿಯಭೋಗದ ಸಾಧನವೆಂಬುದು ನಿಂತುಹೋಗುತ್ತದೆ. ಅಂಥವನು ಈ ದೇಹವನ್ನು ಅನಂತದೊಡನೆ ಸಮರಸವಾಗಲು ಉಪಯೋಗಿಸುತ್ತಾನೆ. ಆ ಪ್ರಯತ್ನದಲ್ಲಿ ತಾನು ಸುತ್ತಲಿರುವ ಪ್ರಾಣದ ಒಂದು ಅಂಶ, ಬೇರೆ ಅಲ್ಲ ಎಂಬುದು ತಿಳಿದುಬರುತ್ತದೆ. ಇದರಿಂದ ಲೋಕಸೇವೆ, ತನ್ಮೂಲಕ ಭಗವಂತನ ದರ್ಶನ ಎಂಬುದು ತಾನೇ ಬರುತ್ತದೆ.

ಈ ಮೇಲ್ಮೆಗೆತವನ್ನು ಬಿಟ್ಟು ಇಳಿಯೋಣ. ಈ ವಿಚಾರ ನಮ್ಮ ಸುತ್ತಲೂ ಆದಷ್ಟು ಬಯಲನ್ನು ಬಿಡಬೇಕೆಂಬ ಅಭಿಪ್ರಾಯ ಹುಟ್ಟಿಸುತ್ತದೆ. ಅವನು ಮನೆಯ ತುಂಬಾ ನಿರರ್ಥಕ ಪದಾರ್ಥಗಳನ್ನು ತಂದಿಡುವುದಿಲ್ಲ. ಬಟ್ಟೆಯನ್ನು ಮಿತವಾಗಿ, ಎಷ್ಟು ಬೇಕೋ ಅಷ್ಟೇ ಉಪಯೋಗಿಸುತ್ತಾನೆ. ಎಷ್ಟೋ ಮನೆಗಳಲ್ಲಿ ಅನಾವಶ್ಯಕವಾದ ಅಲಂಕಾರ ಪದಾರ್ಥಗಳಿರುತ್ತವೆ. ಅವು ಇಲ್ಲದಿದ್ದರೂ ಕಷ್ಟವೇನಿಲ್ಲ. ಸರಳಜೀವಿ ಮನುಷ್ಯನಿಗೆ ಆ ಸಾಮಾನಿನ ನಡುವೆ ಉಸಿರಾಡುವುದೇ ಕಷ್ಟವಾಗುತ್ತದೆ. ಇದೆಲ್ಲವೂ ಧೂಳು, ಕ್ರಿಮಿಕೀಟಗಳ ಸಂಗ್ರಹಕ್ಕೆ ಸ್ಥಳವೇ ವಿನಾ ಮತ್ತೇನೂ ಇಲ್ಲ. ಈಗ ನಾನು ಬಂಧನದಲ್ಲಿದೇನೆ. ಈ ಮನೆಯಲ್ಲಿ ನನಗೆ ದಿಕ್ಕೇ ತೋರದು. ಇಲ್ಲಿರುವ ದೊಡ್ಡ ದೊಡ್ಡ ಕುರ್ಚಿ ಮೇಜು ಸೋಫಾ ಮಂಚ, ಈ ಅಸಂಖ್ಯ ಕನ್ನಡಿಗಳು ಎಲ್ಲಾ ನನ್ನ ಶಾಂತಿಗೆ ಭಂಗ. ನೆಲದ ಮೇಲೆ ಹಾಸಿರುವ ಬಹಳ ಬೆಲೆಯ ಕಂಬಳಿಗಳು ಧೂಳು ಸೇರಿ ಹುಳು ಹುಪ್ಪಟೆಯಾಗಲು ಅನುಕೂಲ, ಅಷ್ಟೇ. ಒಂದು ದಿನ ಧೂಳು ಕೊಡವಲು ಒಂದು ಕೋಣೆಯೊಳಗಿನ ಕಂಬಳಿಯನ್ನು ತೆಗೆದರು. ಒಬ್ಬರ ಕೈಯಲ್ಲಿ ಆಗಲಿಲ್ಲ. ಆರು ಜನ ಮಾಡಬೇಕಾಯಿತು ಆ ಕೆಲಸವನ್ನು. ಸುಮಾರು ೨-೩ ಸೇರಿನಷ್ಟು ಧೂಳನ್ನು ಕೊಡವಿದರು ಅದರಿಂದ. ಆ ಕಂಬಳಿಯನ್ನು ಮತ್ತೆ ಹಾಸಿದಾಗ ಹೊಸದಿದ್ದಂತೆ ಅನಿಸಿತು. ಈ ರತ್ನಗಂಬಳಿ ಬೇಗ ಹರಿದು

ಹೋಗಿ ವೆಚ್ಚವೂ ಹೆಚ್ಚಾಗುತ್ತದೆ. ದುಡಿತವೂ ಹೆಚ್ಚಾಗುತ್ತದೆ. ಇದು ಪ್ರಾಸಂಗಿಕ ಮಾತು. ನಾನು ಹೇಳಬಯಸಿದುದು–ಅನಂತದೊಡನೆ ಸಮರಸವಾಗಿರಬೇಕೆಂಬ ನನ್ನ ಆಸೆ ಬದುಕಿನಲ್ಲಿ ಎಷ್ಟೋ ತೊಡಕುಗಳನ್ನು ತಪ್ಪಿಸಿದೆ. ಕುಟುಂಬ ಜೀವನದಲ್ಲಿ ವೇಷಭೂಷಣಗಳಲ್ಲಿ ಸರಳತೆ ತಂದದ್ದೊಂದೇ ಅಲ್ಲ, ಬಾಳಿಗೇ ಸರಳತೆ ಕೊಟ್ಟಿದೆ. ಒಂದು ಮಾತಿನಲ್ಲಿ, ನಾನು ದಿನೇ ದಿನೇ ಆಕಾಶದ ಸಂಪರ್ಕವನ್ನು ಹೆಚ್ಚು ಹೆಚ್ಚು ಬೆಳೆಸಿದೇನೆ. ಈ ಸಂಪರ್ಕ ಬೆಳೆದ ಹಾಗೆಲ್ಲಾ ಆರೋಗ್ಯವೂ ಹೆಚ್ಚಿತು. ತೃಪ್ತಿ, ಶಾಂತಿ ಹೆಚ್ಚಿತು, ಸಂಗ್ರಹ ಬುದ್ಧಿ ಪೂರಾ ಹೋದಹಾಗೆಯೇ. ಅನಂತದೊಡನೆ ಮೇಳಗೂಡಿದವನಿಗೆ ಯಾವ ಸಂಗ್ರಹವೂ ಇಲ್ಲ, ಸಮಸ್ತವೂ ಇದೆ. ನಿಜವಾಗಿ ನೋಡಿದರೆ, ತಾನು ಉಪಯೋಗಿಸಬಲ್ಲದ್ದಷ್ಟೇ ಮನುಷ್ಯನ ಸೊತ್ತು, ತಾನು ಅರಗಿಸಿಕೊಳ್ಳಬಲ್ಲದ್ದೇ ಅನ್ನ. ಎಲ್ಲರೂ ಈ ನಿಯಮದಂತೆ ನಡೆದರೆ ಎಲ್ಲರಿಗೂ ಅವಕಾಶವಾಗಿ, ಎಲ್ಲಿಯೂ ಅಭಾವ, ಅತಿಸಂದೋಹ ಇರುವುದಿಲ್ಲ.

ಒಂದು ಮಾತು ಇದರಿಂದ ತೇಲುತ್ತದೆ; ಬಯಲಿನಲ್ಲಿ ಮಲಗುವುದನ್ನು ಕಲಿಯಬೇಕು. ಶೀತ–ಹಿಮಗಳ ಬಾಧೆಯಾಗದಂತೆ ಸಾಕಷ್ಟು ಹೊದಿಕೆಯನ್ನು ಉಪಯೋಗಿಸಬೇಕು. ಮಳೆಗಾಲದಲ್ಲಿ ಮೇಲೆ ಚಪ್ಪರ ಹಾಕಿ ಸುತ್ತಲೂ ಬಯಲುಬಿಟ್ಟು ಮಂಟಪದ ಹಾಗೆ ಮಾಡಿಕೊಂಡರೆ ಮಳೆಯ ಬಾಧೆ ತಪ್ಪುತ್ತದೆ. ಉಳಿದ ಕಾಲದಲ್ಲಿ ಚಿಕ್ಕೆ ತುಂಬಿದ ಮುಗಿಲೇ ಸರಿ. ಕಣ್ಣು ತೆರೆದಾಗೆಲ್ಲ ಸದಾ ಬದಲಾಗುತ್ತಿರುವ ಆಕಾಶದ ಸುಂದರ ದೃಶ್ಯ ಕಣ್ಣಿಗೆ ಬೀಳುತ್ತದೆ. ಆ ನೋಟ ದಣಿವಾಗುವುದಿಲ್ಲ. ಕಣ್ಣನ್ನು ಕೋರೈಸುವುದಿಲ್ಲ. ಅದಕ್ಕೆ ಬದಲು ಸಾಂತ್ವನ ಕೊಡುತ್ತದೆ. ಮುಗಿಲಿನಲ್ಲಿ ರಾಜಗಾಂಭೀರ್ಯದಿಂದ ತೇಲುತ್ತಿರುವ ಬೇರೆ ಬೇರೆ ನಕ್ಷತ್ರರಾಶಿಗಳನ್ನು ನೋಡುತ್ತಿರುವುದೇ ಒಂದು ಆನಂದ. ತನ್ನ ವಿಚಾರ ಲಹರಿಗೆ ನಕ್ಷತ್ರಗಳೇ ಸಜೀವ ಸಾಕ್ಷಿ ಎಂದು ಭಾವಿಸಿದವನು ದುಷ್ಟವಿಚಾರ, ಅಶುದ್ಧ ಭಾವನೆಗಳನ್ನು ತನ್ನ ಮನಸ್ಸಿನಲ್ಲಿ ಬರಗೊಡಲಾರ. ಶಾಂತ - ಚೇತನದಾಯಕ ನಿದ್ರೆಯನ್ನು ಅನುಭವಿಸುತ್ತಾನೆ.

ಮೇಲುಗಡೆಯ ಆಕಾಶದಿಂದ ನಮ್ಮ ಸುತ್ತಣ, ನಮ್ಮೊಳಗಣ ಆಕಾಶಕ್ಕೆ ಇಳಿಯೋಣ. ನಮ್ಮ ಮೈಯ ಚರ್ಮದಲ್ಲಿನ ಕೋಟಿ ರಂಧ್ರಗಳಲ್ಲಿರುವ ಶೂನ್ಯಸ್ಥಳವನ್ನು ತುಂಬಿದರೆ ನಾವು ಸತ್ತೇಹೋಗುತ್ತೇವೆ. ಈ ರಂಧ್ರಗಳಲ್ಲಿ ಏನಾದರೂ ಸೇರಿಕೊಂಡರೆ ಆರೋಗ್ಯದ ಪ್ರವಾಹಕ್ಕೆ ಅಡ್ಡವಾಗುತ್ತದೆ. ಅದೇ ರೀತಿ

ಜೀರ್ಣಕೋಶವನ್ನು ಅನಾವಶ್ಯಕ ಆಹಾರದಿಂದ ತುಂಬಬಾರದು. ಅಗತ್ಯವಾದಷ್ಟನ್ನೆ ತಿನ್ನಬೇಕು. ಹೆಚ್ಚು ಕೂಡದು. ಅನೇಕ ವೇಳೆ ಅರಿಯದೆಯೆ ಹೆಚ್ಚು ತಿಂದುಬಿಡುತ್ತೇವೆ, ಜೀರ್ಣವಾಗದಂಥ ಅನ್ನವನ್ನು ತಿನ್ನುತ್ತೇವೆ. ವಾರಕ್ಕೊಮ್ಮೆ ಎರಡು ವಾರಕ್ಕೊಮ್ಮೆ ಒಂದು ಉಪವಾಸಮಾಡಿದರೆ ಸಮತೂಕವಾಗುತ್ತದೆ. ಇಡೀ ದಿವಸ ಉಪವಾಸ ಇರುವುದಾಗದಿದ್ದರೆ ಒಪ್ಪೊತ್ತಾದರೂ ಮಾಡಬೇಕು. ಪ್ರಕೃತಿಗೆ ಶೂನ್ಯ ಸಮ್ಮತವಲ್ಲ ಎಂಬುದು ಅರ್ಧಸತ್ಯ. ಪ್ರಕೃತಿ ಸದಾ ಶೂನ್ಯವನ್ನೇ ಬಯಸುತ್ತದೆ. ನಮ್ಮ ಸುತ್ತಲಿನ ಈ ಅಗಾಧ ಶೂನ್ಯವೇ ಅದಕ್ಕೆ ಸಾಕ್ಷಿ.

## ೪
## ಸೂರ್ಯ

ಉಳಿದ ಭೂತಗಳಂತೆ ಮನುಷ್ಯನಿಗೆ ಬೆಳಕು ಅಗತ್ಯ. ಬೆಳಕಿಲ್ಲದೆ ಮನುಷ್ಯ ಬದುಕಲಾರ. ಬೆಳಕು, ಬಿಸಿ ಎರಡಕ್ಕೂ ಸೂರ್ಯನೇ ಆಧಾರ. ಸೂರ್ಯನಿಲ್ಲದಿದ್ದರೆ ಬಿಸಿಯೂ ಇಲ್ಲ ಬೆಳಕೂ ಇಲ್ಲ. ನಾವು ಸೂರ್ಯನ ಬೆಳಕನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳದೆ ಪೂರ್ಣ ಆರೋಗ್ಯ ಸಿಗದಂತೆ ಮಾಡಿಕೊಳ್ಳುತ್ತೇವೆ. ಮೈಗೆ ನೀರಿನ ಮೀಹ (ಸ್ನಾನ) ಎಷ್ಟು ಅಗತ್ಯವೋ ಬೆಳಕಿನ ಮೀಹವೂ ಅಷ್ಟೇ ಅಗತ್ಯ, ಉಪಯುಕ್ತ. ಎರಡೂ ಬೇಕು. ಅದರ ಬದಲು ಇದು ಅಲ್ಲ. ಬಲಹೀನತೆ, ನಿಧಾನವಾದ ರಕ್ತಸಂಚಲನಗಳಲ್ಲಿ ಎಳೆಬಿಸಿಲಿಗೆ ಮೈಯೊಡ್ಡುವುದು ಒಳ್ಳೆಯ ಪುಷ್ಟಿಕೊಡುತ್ತದೆ, ವೃದ್ಧಿಗೊಳಿಸುತ್ತದೆ. ಮುಂಜಾನೆ ಸೂರ್ಯನಿಗೆ ಕ್ಷ-ಕಿರಣಗಳು ಹೆಚ್ಚು. ಸೂರ್ಯಕಿರಣಗಳಲ್ಲಿ ಇವು ಬಹಳ ಪರಿಣಾಮಕಾರಿ. ಬಿಸಿಲಿನಲ್ಲಿ ಮಲಗಿದಾಗ ರೋಗಿಗೆ ತಂಡಿ ಎನಿಸಿದರೆ ಹೊದೆದುಕೊಂಡು ಮಲಗಬಹುದು. ರೂಢಿಯಾದ ಹಾಗೆ ಮೈಯನ್ನು ಹೆಚ್ಚು ಹೆಚ್ಚು ಬಿಸಿಲಿಗೆ ಬಿಡಬಹುದು. ಯಾರೂ ನೋಡಲಾರದಂಥ ಅಂತರಂಗ ಸ್ಥಳದಲ್ಲಿ ಬಿಸಿಲಿನಲ್ಲಿ ಬೆತ್ತಲೆಯಾಗಿ ಶತಪಥ ಹಾಕಿದರೂ ಒಳ್ಳೆಯದು. ಅಂಥ ಸ್ಥಳ ಸುಲಭವಾಗಿ ಸಿಗದಿದ್ದರೆ ಒಂದು ಲಂಗೋಟಿ ಧರಿಸಿ ಬಯಲಿನಲ್ಲಿ ಸೂರ್ಯಸ್ನಾನ ಮಾಡಬಹುದು.

ಈ ಸ್ನಾನದಿಂದ ಎಷ್ಟೋ ಜನಕ್ಕೆ ಲಾಭವಾಗಿದೆ. ನಾನು ಬಲ್ಲೆ. ಕ್ಷಯ ರೋಗಕ್ಕೆ ಇದು ಉತ್ತಮ ಔಷಧ. ಸೂರ್ಯಸ್ನಾನ ಈಗಾಗಲೇ ಪ್ರಕೃತಿ

ಚಿಕಿತ್ಸೆಯ ಕ್ಷೇತ್ರದಿಂದ ಮುಂದೆ ಸಾಗಿಹೋಗಿದೆ. ವೈದ್ಯಶಾಸ್ತ್ರ ಇದನ್ನು ಎರವಲು ಪಡೆದು ಇದನ್ನು ಸುಧಾರಿಸಿದೆ. ಛಳಿ ದೇಶಗಳಲ್ಲಿ ವೈದ್ಯರ ಮೇಲ್ವಿಚಾರಣೆಯಲ್ಲಿ ಇದಕ್ಕಾಗಿ ಪ್ರತ್ಯೇಕ ಗಾಜಿನ ಮನೆಗಳನ್ನು ಕಟ್ಟಿದಾರೆ. ಗಾಜಿನ ಮೂಲಕ ಸೂರ್ಯಕಿರಣಗಳು ಬರುತ್ತವೆ. ರೋಗಿಗೆ ಚಳಿಯಾಗದು.

ಸೂರ್ಯಸ್ನಾನದಿಂದ ಎಷ್ಟೋ ಸಲ ಮೈಯ ಒಳಗಡೆಯ ಹುಣ್ಣು ವಾಸಿಯಾಗಿವೆ. ಬೆವರು ಬರಲಿ ಎಂದು ನಡುಹಗಲಿಗೆ ಸ್ವಲ್ಪ ಮುಂಚೆ, ೧೧ ಗಂಟೆಯ ಹೊತ್ತಿನಲ್ಲಿ ನಾನು ರೋಗಿಗಳನ್ನು ಬಿಸಿಲಿನಲ್ಲಿ ಮಲಗಿಸಿದೇನೆ. ಪ್ರಯೋಗ ಸಫಲವಾಗಿ ರೋಗಿಗಳು ಕೂಡಲೆ ಬೆವರಿನಲ್ಲಿ ಮಿಂದರು. ಈ ಪ್ರಯೋಗದಲ್ಲಿ ತಲೆ ಕಾಯದಂತೆ ತಣ್ಣನೆ ಮಣ್ಣಿನಪಟ್ಟಿಯನ್ನು ಕಟ್ಟಬೇಕು. ತಲೆಯಮೇಲೆ ಬಾಳೆಯೆಲೆಯನ್ನಾಗಲಿ ಮತ್ತಾವ ಎಲೆಯನ್ನಾಗಲಿ ಅಡ್ಡವಾಗಿಟ್ಟು ತಲೆ ತಂಪಾಗಿರುವಂತೆ ಮಾಡಬಹುದು. ತಲೆಯನ್ನು ಮಾತ್ರ ಬಲವಾದ ಬಿಸಿಲಿಗೆ ಬಿಡಬಾರದು.

## ೫

## ಗಾಳಿ

ಐದನೆಯದೂ ಈ ನಾಲ್ಕರಷ್ಟೇ ಮುಖ್ಯ. ಮಾನವದೇಹ ಪಂಚಭೂತಾತ್ಮಕ. ಅದರಲ್ಲಿ ಯಾವ ಒಂದನ್ನು ಬಿಟ್ಟರೂ ಸಾಧ್ಯವಿಲ್ಲ. ಆದ್ದರಿಂದ ಯಾರೂ ಗಾಳಿಗೆ ಅಂಜಬಾರದು. ನಮ್ಮ ಜನ ಸಾಧಾರಣವಾಗಿ ಗಾಳಿ ಬೆಳಕು ಬಾರದಹಾಗೆ ಮಾಡಿಕೊಂಡು ಆರೋಗ್ಯವನ್ನು ಕೆಡಿಸಿಕೊಳ್ಳುತ್ತಾರೆ. ಎಳೆತನದಿಂದಲೇ ಶುದ್ಧವಾದ ಗಾಳಿಯಲ್ಲಿ ಬಯಲಿನಲ್ಲಿ ಬಾಳುವುದನ್ನು ಕಲಿತರೆ, ದೇಹ ಗಟ್ಟಿಯಾಗಿ ತಲೆಯಲ್ಲಿ ಶೀತ ಮುಂತಾದ ಕಾಯಿಲೆ ಬರುವುದೇ ಇಲ್ಲ. ಹಿಂದಿನ ಅಧ್ಯಾಯವೊಂದರಲ್ಲಿ ಚೇತೋಹಾರಿಯಾದ ಶುದ್ಧ ಗಾಳಿ ಎಷ್ಟು ಮುಖ್ಯವೆಂಬುದನ್ನು ಹೇಳಿದೇನೆ. ಅದನ್ನು ಮತ್ತೆ ಹೇಳಬೇಕಾಗಿಲ್ಲ.

# ಜೀವನ ಶಿಕ್ಷಣ

## ವಿಷಯಮೂಲಸೂಚಿ

| | | |
|---|---|---|
| ೨೪) | ಹರಿಜನ | ೩೦—೭—೩೭ |
| ೨೫) | ಹರಿಜನ | ೧೧—೬—೩೮ |
| ೨೬) | ಹರಿಜನ | ೮—೫—೩೭ |
| ೨೭) | ಹರಿಜನ | ೫—೬—೩೭ |
| ೨೮) | ಹರಿಜನ | ೨೮—೮—೩೭ |
| ೨೯) | ಉತಮನ್‌ಜಾಯ್ ಸಂದೇಶ | ೧೪—೧೦—೩೮ |
| ೩೦) | ಆತ್ಮಕಥೆಯಿಂದ | |
| ೩೧) | ಹರಿಜನ | ೨—೧೦—೩೭ |
| ೩೨) | ಹರಿಜನ | ೩೦—೧೦—೩೭ |
| ೩೩) | ಹರಿಜನ | ೩೦—೧೦—೩೭ |
| ೩೪) | ಹರಿಜನ | ೩೦—೧೦—೩೭ |
| ೩೫) | ಹರಿಜನ | ೩೦—೧೦—೩೭ |
| ೩೬) | ಹರಿಜನ | ೩೦—೧೬—೩೭ |
| ೩೭) | ಹರಿಜನ | ೩೧—೭—೩೭ |
| ೩೮) | ಹರಿಜನ | ೨೧—೮—೩೭ |
| ೩೯) | ಹರಿಜನ | ೧೧—೯—೩೭ |
| ೪೦) | ಹರಿಜನ | ೧೮—೯—೩೭ |
| ೪೧) | ಹರಿಜನ | ೧೮—೯—೩೭ |
| ೪೨) | ಹರಿಜನ | ೨—೧೦—೩೭ |
| ೪೩) | ಹರಿಜನ | ೯—೧೦—೩೭ |
| ೪೪) | ಹರಿಜನ | ೧೧—೬—೩೮ |
| ೪೫) | ಹರಿಜನ | ೨—೧೧—೪೭ |
| ೪೬) | ಹರಿಜನ | ೧೬—೧೦—೩೭ |
| ೪೭) | ಹರಿಜನ | ೧೬—೧೦—೩೭ |
| ೪೮) | ಹರಿಜನ | ೧೨—೨—೩೮ |
| ೪೯) | ಹರಿಜನ | ೧೮—೨—೩೯ |
| ೫೦) | ಹರಿಜನ | ೪—೩—೩೯ |
| ೫೧) | ಸೇಗಾಂವ | ೨೮—೫—೩೮ |

| | | |
|---|---|---|
| ೫೨) | ಹರಿಜನ | ೨೮—೧೦—೩೯ |
| ೫೩) | ಹರಿಜನ | ೬—೮—೪೦ |
| ೫೪) | ಹರಿಜನ | ೮—೪—೪೨ |
| ೫೫) | ಹರಿಜನ | ೮—೯—೪೬ |
| ೫೬) | ಹರಿಜನ | ೨೫—೮—೪೬ |
| ೫೭) | ಹರಿಜನ | ೯—೯—೩೯ |
| ೫೮) | ಹರಿಜನ | ೧—೯—೪೬ |
| ೫೯) | ಹರಿಜನ | ೯—೧೧—೪೭ |
| ೬೦) | ಕಾಶಿ ವಿಶ್ವವಿದ್ಯಾಲಯದಲ್ಲಿನ ಭಾಷಣದಿಂದ | ೪—೨—೧೬ |
| ೬೧) | ಯಂಗ್ ಇಂಡಿಯಾ | ೧—೯—೨೧ |
| ೬೨) | ಯಂಗ್ ಇಂಡಿಯಾ | ೫—೨—೨೮ |
| ೬೩) | ಹರಿಜನ | ೯—೭—೩೮ |
| ೬೪) | ಹರಿಜನ | ೩೦—೭—೩೮ |
| ೬೫) | ಹರಿಜನ | ೨೫—೮—೪೬ |
| ೬೬) | ಯಂಗ್ ಇಂಡಿಯಾ | ೨—೨—೨೧ |
| ೬೭) | ಹರಿಜನ | ೧೭—೧೧—೩೩ |
| ೬೮) | ಹರಿಜನ | ೨೫—೮—೪೬ |
| ೬೯) | ಹರಿಜನ | ೨೯—೯—೩೭ |
| ೭೦) | ಹರಿಜನ | ೯—೧೦—೩೭ |
| ೭೧) | ಹರಿಜನ | ೨೦—೮—೩೮ |
| ೭೨) | ಹರಿಜನ | ೨—೫—೩೮ |
| ೭೩) | ಹರಿಜನ | ೨೭—೮—೩೮ |
| ೭೪) | ಹರಿಜನ | ೪—೮—೪೦ |
| ೭೫) | ಹರಿಜನ | ೨೨—೨—೪೨ |
| ೭೬) | ಹರಿಜನ | ೨೧—೬—೪೨ |
| ೭೭) | ಹರಿಜನ | ೨೫—೮—೪೬ |
| ೭೮) | ಹರಿಜನ | ೨—೧—೪೭ |
| ೭೯) | ಹಿಂದ್ ಸ್ವರಾಜ್ಯ | |

೮೦) ಯಂಗ್ ಇಂಡಿಯಾ ೬—೧೨—೨೮
೮೧) ಹರಿಜನ ೧೬—೨—೨೮
೮೨) ಹರಿಜನಬಂಧು ೨—೮—೩೬
೮೩) ಸಚ್ಚೀ ಶಿಕ್ಷಣ ಪು. ೮೩
೮೪) ನವಜೀವನ ೪—೪—೨೬
೮೫) ನವಜೀವನ ೨೫—೧೧—೨೮
೮೬) ಹರಿಜನಬಂಧು ೧೨—೯—೩೭
೮೭) ಯಂಗ್ ಇಂಡಿಯಾ ೧೪—೮—೨೪
೮೮) ಹರಿಜನ ೫—೬—೩೭
೮೯) ,, ೧೮—೨—೩೯
೯೦) ,, ೨೨—೬—೪೪
೯೧) ವಯಸ್ಕರ ಶಿಕ್ಷಣದ ಚಿತ್ರ—ಕಾರ್ಯಕ್ರಮ
೯೨) ಭಾಷಣಗಳು, ಲೇಖನಗಳು—ಪು. ೧೨೫, ೨೬, ೨೭
೮೩) ಹರಿಜನ ೧೮—೨—೩೯
೯೪) ,, ೧೧—೮—೨೭
೯೫) ಸಿಂಹಳದಲ್ಲಿ ಗಾಂಧೀಜೀ ೧೪೭—೪೯
೯೬) ಹರಿಜನ ೧೬—೩—೪೦
೯೭) ಯಂಗ್ ಇಂಡಿಯಾ ೬—೧೨—೨೮
೯೮) ಯಂಗ್ ಇಂಡಿಯಾ ೨೪—೧—೨೯
೯೯) ಹರಿಜನ ೨—೧೦—೩೭
೧೦೦) ಹರಿಜನ ೭—೯—೪೭
೧೦೧) ಹರಿಜನ ೨೬—೧—೪೧
೧೦೨) ಯಂಗ್ ಇಂಡಿಯಾ ೨೪—೧—೨೯
೧೦೩) ಹರಿಜನ ೧೫—೯—೪೦
೧೦೪) ಹರಿಜನ ೧೮—೧—೪೮
೧೦೫) ಯಂಗ್ ಇಂಡಿಯಾ ೨೪—೬—೨೬
೧೦೬) ಯಂಗ್ ಇಂಡಿಯಾ ೨೯—೧—೨೫
೧೦೭) ಹರಿಜನ ೯—೩—೪೦

| | | |
|---|---|---|
| ೧೦೮) | ಹರಿಜನ | ೩೧—೭—೩೭ |
| ೧೦೯) | ಹರಿಜನ | ೨—೧೦—೩೭ |
| ೧೧೦) | ಹರಿಜನ | ೯—೭—೩೮ |
| ೧೧೧) | ಯಂಗ್ ಇಂಡಿಯಾ | ೨೫—೬—೩೧ |
| ೧೧೨) | ಯಂಗ್ ಇಂಡಿಯಾ | ೬—೯—೨೮ |
| ೧೧೩) | ನಿರ್ಮಾಣ ಕಾರ್ಯಕ್ರಮದಿಂದ | |
| ೧೧೪) | ಯಂಗ್ ಇಂಡಿಯಾ | ೬—೩—೩೦ |
| ೧೧೫) | ಮಹಾತ್ಮಾ ಗಾಂಧೀಯವರ ಲೇಖನಗಳು ಭಾಷಣಗಳು | |
| ೧೧೬) | ಯಂಗ್ ಇಂಡಿಯಾ | ೮—೯—೨೭ |
| ೧೧೭) | ಸಿಂಹಳದಲ್ಲಿ ಗಾಂಧೀಜೀ | |
| ೧೧೮) | ಯಂಗ್ ಇಂಡಿಯಾ | ೮—೯—೨೭ |
| ೧೧೯) | ಸಿಂಹಳದಲ್ಲಿ ಗಾಂಧೀಜೀ | |
| ೧೨೦) | ,, | |
| ೧೨೧) | ಗುಜರಾತ್ ವಿದ್ಯಾಪೀಠದ ಆರಂಭ ಭಾಷಣ | ೧೫—೧೧—೨೦ |
| ೧೨೨) | ದ. ಆ. ಸತ್ಯಾಗ್ರಹ | |
| ೧೨೩) | ಯಂಗ್ ಇಂಡಿಯಾ | ೨೧—೯—೨೧ |
| ೧೨೪) | ,, | ೨೧—೨—೨೯ |
| ೧೨೫) | ,, | ೧೫—೯—೨೭ |
| ೧೨೬) | ,, | ೨೯—೧—೨೫ |
| ೧೨೭) | ,, | ೧೩—೧೦—೨೭ |
| ೧೨೮) | ಭಾಷಣ – ಲೇಖನ | ಪು. ೩೮೮—೮೯ |
| ೧೨೯) | ಯಂಗ್ ಇಂಡಿಯಾ | ೧—೯—೨೧ |
| ೧೩೦) | ಹರಿಜನ | ೩೦—೩—೩೪ |
| ೧೩೧) | ಯಂಗ್ ಇಂಡಿಯಾ | ೨೯—೧—೨೫ |
| ೧೩೨) | ,, | ೨೧—೭—೨೭ |
| ೧೩೩) | ಹರಿಜನ | ೩—೧೦—೩೬ |
| ೧೩೪) | ಯಂಗ್ ಇಂಡಿಯಾ | ೨೦—೧—೨೭ |
| ೧೩೫) | ಹರಿಜನ | ೨೧—೧೧—೩೬ |

೧೩೬) ಹರಿಜನ ೩೧—೧೨—೩೮
೧೩೭) ಹರಿಜನ ೫—೫—೩೬
೧೩೮) ಹರಿಜನಬಂಧು ೨—೮—೩೬
೧೩೯) ಸತ್ಯಾಗ್ರಹ ಆಶ್ರಮದ ಶಾಲೆಯ ಕೈಬರಹದ ಪತ್ರಿಕೆಯಿಂದ
೧೪೦) ಗಾಂಧೀಜಿಯ ‘ವಿಚಾರ ಸೃಷ್ಟಿ’ಯಿಂದ
೧೪೧) ಹರಿಜನಬಂಧು ೨೦—೧೨—೩೬
೧೪೨) ನವಜೀವನ ೩—೩—೨೯
೧೪೩) ನವಜೀವನ ೨—೬—೨೯
೧೪೪) ಹರಿಜನಬಂಧು ೨೨—೧೧—೩೬
೧೪೫) ಹರಿಜನಬಂಧು ೨೯—೧೧—೩೬

---

ಕನ್ನಡದಲ್ಲಿ ಬಾಪೂ ವಿಚಾರವಾಹಿನಿಯ ಸಾರಸರ್ವಸ್ವ.

# ಗಾಂಧೀ ಗ್ರಂಥಮಾಲೆ

---

| | | ಬೆಲೆ ಸಾದಾ ಪ್ರತಿ | ಬೆಲೆ ಉತ್ತಮ ಪ್ರತಿ |
|---|---|---|---|
| ೧) | ಸಂಕ್ಷಿಪ್ತ ಆತ್ಮಕಥೆ–ಹಿಂದ್ ಸ್ವರಾಜ್ಯ | ರೂ. ೨–೨೫ | ರೂ. ೩ |
| ೨) | ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ | —,,— | —,,— |
| ೩) | ಗೀತಾಮಾತೆ | —,,— | —,,— |
| ೪) | ಸತ್ಯ – ಅಹಿಂಸೆ | ರೂ. ೩ | ರೂ. ೪ |
| ೫) | ಧರ್ಮ – ನೀತಿ | ರೂ. ೨–೨೫ | ರೂ. ೩ |
| ೬) | ಸಮಾಜಧರ್ಮ | —,,— | —,,— |
| ೭) | ಜೀವನ ಶಿಕ್ಷಣ | —,,— | —,,— |
| ೮) | ಅರ್ಥವಿಚಾರ | —,,— | —,,— |
| ೯) | ಸತ್ಯಾಗ್ರಹ | —,,— | —,,— |

**ಬರಲಿರುವ ಶೀರ್ಷಿಕೆಗಳು :**

ರಾಜ್ಯತತ್ತ್ವ, ಪತ್ರಗುಚ್ಛ, ಸಮಕಾಲೀನರು, ಪ್ರಾರ್ಥನಾ ಪ್ರವಚನಗಳು ಇತ್ಯಾದಿ.

**ಪ್ರತಿಗಳಿಗೆ ಕೆಳಗಿನ ವಿಳಾಸಕ್ಕೆ ಬರೆಯಿರಿ :**

೧) ಗಾಂಧೀ ಗ್ರಂಥಮಾಲೆಯ ಸಂಪಾದಕೀಯ ಕಾರ್ಯಾಲಯ,
೧೬೨, ರಮಾವಿಲಾಸ ರಸ್ತೆ, ಮೈಸೂರು.

ಅಥವಾ

೨) ಗಾಂಧೀ ಸ್ಮಾರಕ ನಿಧಿ, ಕರ್ನಾಟಕ ಶಾಖೆ,
೧೩೮, ನೆಹ್ರೂ ಸರ್ಕಲ್, ಶೇಷಾದ್ರಿಪುರಂ, ಬೆಂಗಳೂರು ೨೦.